


# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 34

ಸಂಚಿಕೆ: 5

ಜನವರಿ 1990

ವ್ಯವಸ್ಥಾಪಕ ಸಂಪಾದಕ:

ಕೆ. ಶಾಮರಾವ್

ಸಂಪಾದಕ:

ಆರ್. ಎ. ಉಪಾಧ್ಯ

ಮುಖಪುಟ:

ಸೂರ್ಯ ಸ್ನಾನ

ಛಾಯಾಚಿತ್ರ,

ಎಂ. ವಿಶ್ವನಾಥ



ಕಸ್ತೂರಿ ಕಾರ್ಯಾಲಯ

ಕೊಪ್ಪೀಕರ ರಸ್ತೆ

ಹುಬ್ಬಳ್ಳಿ-580020


## ಬೆಳಕಿಂಡಿ

★ ಸಾಮರ್ಥ್ಯವಿಲ್ಲದೇ ಒಬ್ಬನು ಪ್ರಸಿದ್ಧನಾಗಲು ಸಾಧ್ಯವಾದ ದಾರಿಯೆಂದರೆ ಹುತಾತ್ಮನಾಗುವುದು.

-ಬರ್ನಾರ್ಡ್‌ಶಾ

★ ಕೆಳಮಟ್ಟದ ಮನುಷ್ಯನಿಗೆ ಹೆಚ್ಚು ವಿರಾಮ ವೇಳೆ ಒದಗಿಸುವುದರಿಂದ ಪ್ರಯೋಜನವಾದೀತೆಂಬುದು ಬರಿ ಭ್ರಮೆ. ಮೂಢನು ಹೆಚ್ಚಿನ ವಿರಾಮವನ್ನು ಮೂಢ ರೀತಿಯಲ್ಲೇ ಕಳೆಯುತ್ತಾನೆ.

-ಎಚ್. ಎಲ್. ಮೆಂಕೆನ್

★ ಓದಿನಿಂದ ಮನುಷ್ಯ ಪರಿಪೂರ್ಣನಾಗುತ್ತಾನೆ, ಚರ್ಚೆಯಿಂದ ಪ್ರತ್ಯುತ್ಪನ್ನಮತಿಯಾಗುತ್ತಾನೆ. ಮತ್ತು ಬರಹದಿಂದ ಸ್ಫುಟ ವಿಚಾರದವನಾಗುತ್ತಾನೆ.

-ಬೇಕನ್

★ ಹಳೆಯದು ಎಲ್ಲವೂ ಒಳ್ಳೆಯದಲ್ಲ, ಹೊಸದೆಂದು ಎಲ್ಲವೂ ಕೆಟ್ಟದಾಗುವುದಿಲ್ಲ. ಸಜ್ಜನರು ಪರೀಕ್ಷಿಸಿ ಒಂದನ್ನಾಯುತ್ತಾರೆ. ಮೂಢರು ಇನ್ನೊಬ್ಬರ ನಂಬಿಕೆಯಿಂದ ನುಡಿಯುತ್ತಿರುತ್ತಾರೆ.

-ಕಾಳಿದಾಸ


### ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

## ಸಹಚಿಂತನ

### ಕನ್ನಡ ಅಂಕಿಗಳು

'ಕಸ್ತೂರಿ'ಯ ಡಿಸೆಂಬರ್ ಸಂಚಿಕೆಯ ರಕ್ಷಾಪುಟ ಮತ್ತು ಸಂಪಾದಕೀಯ 'ಅಪೇಕ್ಷೆ'ಯ ಪುಟದಲ್ಲಿ ಆರಂನೇಯ ಸಂಚಿಕೆ ಎಂದು ಕನ್ನಡ ಅಂಕಿಯಲ್ಲೇ ಪ್ರಕಟವಾಗಿರುವುದು ಸಂತಸ ತಂದಿತು. ಆರಂಭದಿಂದಲೂ ಕನ್ನಡ ಅಂಕಿಗಳನ್ನು ಬಳಸುತ್ತಿದ್ದ ಕನ್ನಡದ 'ಕಸ್ತೂರಿ' ಎರಡು ವರ್ಷಗಳ ಹಿಂದೆ ಬೆಂಗಳೂರಿನಿಂದ ತನ್ನ ಪ್ರಕಟಣೆಯಾರಂಭಿಸಿದಂದಿನಿಂದ ಡೈಜೆಸ್ಟ್ ಆಕಾರದ ಜತೆಗೆ ಕನ್ನಡ ಅಂಕಿಗಳನ್ನೂ ಕಳೆದುಕೊಂಡಿತು. ಸಂಪುಟ-ಸಂಚಿಕೆ-ವರ್ಷಗಳನ್ನು ಮಾತ್ರ ಕನ್ನಡ ಅಂಕಿಗಳಲ್ಲಿ ಮುದ್ರಿಸುತ್ತಿದ್ದ ಅದು ಮತ್ತೆ ಹುಬ್ಬಳ್ಳಿಗೆ ಬಂದರೂ ಇಂಗ್ಲೀಷು ಅಂಕಿಗಳನ್ನೇ ಮುಂದುವರೆಸಿಕೊಂಡು ಹೋಗುತ್ತಿರುವುದರ ಕಾರಣವೇನು?

ನಮ್ಮ ಇಂದಿನ ಮುಂದಿನ ಪೀಳಿಗೆಗಳು ಕನ್ನಡ ಅಂಕಿಗಳನ್ನು ಮರೆತು ಹೋಗಬಾರದು. ದಯವಿಟ್ಟು 'ಕಸ್ತೂರಿ' ಮತ್ತು ಅದರ ಸೋದರ ಪ್ರಕಟಣೆಗಳಲ್ಲೆಲ್ಲ ಕನ್ನಡ ಅಂಕಿಗಳನ್ನೇ ಬಳಸಿ.

ಮೈಸೂರು — ಎಂ.ಎಸ್.ವಿ.ಪಂಡಿತಾರಾಧ್ಯ
ಹಿ.ಶಿ.ರಾಮಚಂದ್ರೇಗೌಡ

### ಉದ್ಯಾನ ಜಿಂಕೆ

89ರ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ 'ಬರಲಿದೆ ಉದ್ಯಾನ ಜಿಂಕೆ' ಪ್ರಾಣಿ ಜೀವಶಾಸ್ತ್ರದ ಕ್ಷೇತ್ರದಲ್ಲಿ ನಡೆದ ಪ್ರಯೋಗಗಳ ಕುರಿತ ಮಾಹಿತಿ ನೀಡಿದೆ. ಪ್ರಕಟಿಸಿರುವುದಕ್ಕೆ ತಮಗೆ ಕೃತಜ್ಞತೆಗಳು.

ನಂಜನಗೂಡು — ರಾಮ ಜೋಯಿಸ

### ಧಿಕ್ಕಾರವಿರಲಿ

ದೇಶದ ಘನತೆಯನ್ನು ಎತ್ತಿ ಹಿಡಿದ ರೂಪಸಿಂಗರನ್ನು ಮರೆತು ತಮ್ಮನ್ನೇ ದೇಶದ ಭಾಗ್ಯವಿಧಾತರೆಂಬಂತೆ ಪ್ರದರ್ಶಿಸಿಕೊಳ್ಳುತ್ತಿರುವ ರಾಜಕಾರಣಿಗಳಿಗೆ ಧಿಕ್ಕಾರವಿರಲಿ. 'ಭಾರತ ಮರೆತ ಹಾಕಿ ಪಟುವಿನ ದಾರುಣ ಕಥೆ' (ಡಿಸೆಂಬರ್ ಸಂಚಿಕೆ) ಹೇಳಿ ಮನವನ್ನು ಮಿಡಿಯುವಂತೆ ಮಾಡಿದ ಲೇಖಕರಿಗೆ ಧನ್ಯವಾದಗಳು.

ಚನ್ನಗಿರಿ — ಟಿ.ಎಸ್.ಸತೀಶ್
ಹಮ್ಮಿಗಿ — ಡಾ.ಎಂ.ಚನ್ನಬಸಯ್ಯ

### ಹಾಗಲ್ಲ, ಹೀಗೆ

ಮಲಯಾಳಂ ಕಥೆ 'ಮೂಲಿಕೆ' (ನವೆಂಬರ್ ಸಂಚಿಕೆ)ಯ ಮೂಲ ಲೇಖಕರ ಹೆಸರನ್ನು ಮಲಯತ್ತೂರ್ ರಾಮಕೃಷ್ಣನ್ ಎಂದು ಪ್ರಕಟಿಸಿದ್ದೀರಿ. ಅದರ ಸರಿಯಾದ ಉಚ್ಚಾರ 'ಮಲಯಾಟ್ಟೂರ್' ಎಂದು. ಬಹುಶಃ ಇಂಗ್ಲೀಷ್ ಅನುವಾದದ ಮೂಲಕ ಕನ್ನಡಕ್ಕೆ ತರ್ಜುಮೆಗೊಳಿಸುವಾಗ ಈ ರೀತಿಯಾಗಿರಬೇಕು.

ಹೊಸಂಗಡಿ — ಡಾ.ಅಶೋಕಕುಮಾರ್

### ನಿಜವಾದ ಕೃಷ್ಣ ಯಾರು?

ಬಿ.ಪಾಂಡುರಂಗಯ್ಯನವರ ಎತ್ತಿದ ಈ ಪ್ರಶ್ನಾತ್ಮಕ-ಸಂಶೋಧನಾತ್ಮಕ ಲೇಖನ (ನವೆಂಬರ್ ಸಂಚಿಕೆ) ಸಾಕಷ್ಟು ವಿಚಾರಕ್ಕೆಡೆ ಮಾಡಿಕೊಡುವಂಥದು. ಆದರೆ ಮಾನವ ವೀರ, ಧಾರ್ಮಿಕ ಗುರು ಎನ್ನುವುದು ಮಹಾಭಾರತದಲ್ಲಿ ಚಿತ್ರಿತವಾಗಿದೆ ಎಂಬುದು ಹುರುಳಿಲ್ಲದ ಮಾತು. ಹಾಗಾದರೆ ಕೃಷ್ಣ ಯಾವ ಧರ್ಮದ ಗುರು?

ಕಾಸರಗೋಡು — 'ವಿಚಿತ್ರ' ಯೇತಡ್ಕ

ಬಿ.ಪಾಂಡುರಂಗಯ್ಯನವರು ತಮ್ಮ ಜಿಜ್ಞಾಸೆಯಲ್ಲಿ ಸಮಂಜಸವಾದ ಪ್ರಶ್ನೆಯನ್ನು ಎತ್ತಿರುತ್ತಾರೆ. ಯಾತಕ್ಕೆಂದರೆ ಕೆಲವೊಂದು ಪುರಾಣಗಳು ಕೃಷ್ಣ ಚಂದ್ರವಂಶಕ್ಕೆ ಸೇರಿದವನು (ಮಾನವ?) ಎಂದು ಹೇಳಿ ಪರಸ್ಪರ ವಿರುದ್ಧವಾದ ಸಂಗತಿಗಳನ್ನು ಹೇಳಿರುತ್ತವೆ. ಅಲ್ಲದೆ ವೇದಗಳಲ್ಲಿ, ಬ್ರಾಹ್ಮಣದಲ್ಲಿ, ಅರ

ಣ್ಯಕಗಳಲ್ಲಿ ಹಾಗೂ ಉಪನಿಷತ್ತುಗಳಲ್ಲಿ ಅವನು ಋಷಿ ಎಂದು ಹೇಳಿ, ಪುರಾಣಗಳಲ್ಲಿ ಮಾನವ, ದಾನವ ಇತ್ಯಾದಿ ಎಂದು ಹೇಳಿ ವಿಚಿತ್ರ ಕಲ್ಪನೆಯನ್ನುಂಟು ಮಾಡಿರುತ್ತವೆ. ಹೀಗಾಗಿ ಕೃಷ್ಣನು ಒಮ್ಮೆ ಮಾನವನು (ವ್ಯಾಧನ ಬಾಣಕ್ಕೆ ಅಸುನೀಗಿದವನು), ಒಮ್ಮೆ ಅಸುರನು (ದಾನವನು-ಕಂಸನ ಅಳಿಯನು), ಹಾಗೂ ದೇವನು (ವೈಷ್ಣವರ ಕಲ್ಪನಾ ಚಿತ್ರ) ಎಂದೆಲ್ಲಾ ಯದ್ವಾತದ್ವಾ, ಅಸಂಗತ ಹಾಗೂ ಪರಸ್ಪರ ವಿರುದ್ಧ ಚಿತ್ರಣಗಳನ್ನು ಬೇರೆ ಬೇರೆ ಕವಿಗಳು ತಮ್ಮ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸಿ ಕೊಟ್ಟಿರುತ್ತಾರೆ. ಆದುದರಿಂದ ಕೃಷ್ಣನು ಒಂದು ಕಾಲ್ಪನಿಕ ಚಿತ್ರಣವಲ್ಲದೆ ಚಾರಿತ್ರಿಕ ಸತ್ಯ ಸಂಗತಿ ಅಲ್ಲ.

ಇದೇ ಸಂಚಿಕೆಯಲ್ಲಿ ಪ್ರಕಟವಾದ ಮುರಳೀಧರ ಖಜಾನೆಯವರ 'ಹೀಗೊಂದು ನೆನಪು' ಓದಿ ಕಣ್ತುಂಬಿ ಬಂದರೆ ಎಚ್.ಪ್ರೇಮಾನಂದ ಕಾಮತ್ ಬರೆದ 'ವಯಸ್ಸನ್ನು ವೃದ್ಧಿಸಿದ ಕನಸು' ಓದಿ ಅಸಂಗತವೆನಿಸಿತು, ಬೇಸರವೂ ಆಯಿತು.

ಪುಣೆ — ಡಾ.ಗೋಪಾಲ ಕಾರ್ಕಳ

**ಕೆಲವು ತಪ್ಪುಗಳು-ಒಪ್ಪುಗಳು**

ನನ್ನ ಈ ಲೇಖನದಲ್ಲಿ ಹಲವಾರು ಮುದ್ರಣದೋಷಗಳು ನುಸುಳಿಕೊಂಡಿವೆ. ಓದುಗರ ತಪ್ಪು ಕಲ್ಪನೆಗೆ ಅವಕಾಶವಾಗದಿರಲೆಂಬ ಕಾರಣದಿಂದ ಇಲ್ಲಿ 'ತಪ್ಪು'ಗಳನ್ನು ಸರಿಗೊಳಿಸಿರುವೆ.

| ತಪ್ಪು | ಸರಿ |
|---|---|
| ಗ್ರಿಮರ್ಸನ್ | ಗ್ರಿಯರ್ಸನ್ |
| ಗಾಪ್ಕಿನ್ಸ್ | ಹಾಪ್ಕಿನ್ಸ್ |
| ತಾಡಪತ್ತೀಕರ್ | ತಾಡಪತ್ರೀಕರ್ |
| ಕನ | ಕನ್ನ |
| ಪೋಸುಂಡಿ | ಘೋಸುಂಡಿ |
| ಮಹಾಕ್ಷಾತ್ರದ | ಮಹಾಕ್ಷತ್ರಪ |
| ಪೋಡಶ | ಷೋಡಶ |
| ದಮ: | ಧರ್ಮ: |
| ತ್ರಿವೇಣ | ತ್ರಿವೇದ |

ಅನೇಕ ಆಂಗ್ಲ ಗ್ರಂಥಗಳ ಅಧ್ಯಯನದಿಂದ ಮತ್ತು ಮುಖ್ಯವಾಗಿ ಎ.ಡಿ.ಪುಸಾಳ್ಕರ್‌ರ ಆಂಗ್ಲ ಗ್ರಂಥ 'Studies in Epics and Puranas of India'ದ ಆಧಾರದಿಂದ ನಾನು ಈ ಲೇಖನ ಸಿದ್ಧಪಡಿಸಿದ(ನೆಂದು ಹಸ್ತಪ್ರತಿಯಲ್ಲಿ ಸ್ಪಷ್ಟವಾಗಿ ಸೂಚಿಸಿದ್ದರೂ) ಎಂಬುದು ಅಚ್ಚಾಗದೇ ಹೋಗಿದೆ.

ಬ್ಯಾಡಗಿ — ಬಿ.ಪಾಂಡುರಂಗಯ್ಯ

**ಅಜ್ಜಿ ಅಲ್ಲ ಅಜ್ಜ**

ನನ್ನ ಲೇಖನ 'ಸೂರ್ಯನ ಅಲರ್ಜಿ' (ಡಿಸೆಂಬರ್ 1989)ಯಲ್ಲಿ ಪುಟ 75, ಎರಡನೆ ಕಾಲಂ, 22ನೆಯ ಸಾಲಿನಲ್ಲಿ "ಅವಳ ಅಜ್ಜಿ ತೀರಿಕೊಂಡು ಬಹಳ ಕಾಲವಾಗಿತ್ತು" ಎಂದು ಪ್ರಕಟವಾಗಿದೆ. ಅದು "ಅಜ್ಜ ತೀರಿಕೊಂಡು" ಎಂದಾಗಬೇಕು.

ಬೆಂಗಳೂರು — ಡಾ. ಕೆ.ಎಂ.ಧ್ರುವಕುಮಾರ್

**ಅರ್ಥ - ಅಪಾರ್ಥ**

ಕಲಾವಿದ ಬಿ.ಕೆ.ಎಸ್.ವರ್ಮರ ಕುರಿತ ನನ್ನ ಲೇಖನ(ಡಿಸೆಂಬರ್ 1989)ದಲ್ಲಿ ಒಂದೆರಡು ಕಡೆ ವಾಕ್ಯಗಳು ಅರ್ಧವಾಗಿ ಅಪಾರ್ಥಕ್ಕೆಡೆಯಾಗುವುದರಿಂದ ಈ ತಿದ್ದುಪಡಿ:

ಹನ್ನೊಂದನೆಯ ಪುಟದಲ್ಲಿ (ಮೊದಲ ಪ್ಯಾರಾ) "ರಾಜ್ಯ ಲಲಿತ ಕಲಾ ಅಕಾಡೆಮಿಯ..." ಎಂದು ಪ್ರಾರಂಭವಾಗುವ ವಾಕ್ಯ ಮುಂದುವರಿಯಬೇಕಾದ್ದು ಹೀಗೆ. "ರಾಜ್ಯ ಲಲಿತ ಕಲಾ ಅಕಾಡೆಮಿಯ ಪುರಸ್ಕಾರವನ್ನು ಗಳಿಸಿರುವ ವರ್ಮ 1990ರ ಮಾರ್ಚ್ ತಿಂಗಳಿನಲ್ಲಿ ಆಸ್ಟ್ರೇಲಿಯಾದಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಲು ಆ ದೇಶದ ಖ್ಯಾತ ಚಿತ್ರಕಾರ ಬಿ.ಪಿ.ಜೋರ್ಡನ್‌ರವರಿಂದ ಆಹ್ವಾನಿತರಾಗಿದ್ದಾರೆ."

ಇದೇ ಪುಟದಲ್ಲಿ (ಎರಡನೆ ಪ್ಯಾರಾ) 'ಜನರನ್ನು ಕಲೆಯಲು ಸಮೀಪ ಸೆಳೆಯುವ ಉದ್ದೇಶದಿಂದ...' ಎಂದಿರುವುದು 'ಕಲೆಯ ಸಮೀಪ...' ಎಂದಾಗಬೇಕು.

ಬೆಂಗಳೂರು — ಕೆ.ವಿ.ಸುಬ್ರಹ್ಮಣ್ಯ

ಇದೇ ಸಂಚಿಕೆಯ 'ಗುಲಾಬಿ' ಕಥೆಯ ಕೊನೆಯ ಪುಟ (32)ರ ಕಾಲಂಗಳು ಒಂದರ ಜಾಗದಲ್ಲಿ ಮತ್ತೊಂದು ತಪ್ಪಾಗಿ ಪ್ರಕಟವಾಗಿವೆ. ಅವಸರದಿಂದ ಆದ ಅಧ್ವಾನಗಳಿಗಾಗಿ ಕ್ಷಮೆ ಇರಲಿ.

ಸಂಪಾದಕ

# ಈ ಸಂಚಿಕೆಯಲ್ಲಿ

# ಪಂಚಾಂಗ ತಂದ ಫಜೀತಿ

**ಸುರೇಶ ಹೆಗಡೆ**

ದುರ್ಯೋಧನನು ವನವಾಸ ಮುಗಿಸಿ ಬಂದ ಪಾಂಡವರಿಗೆ ರಾಜ್ಯವನ್ನು ಕೊಡಲಿಲ್ಲ. ವ್ಯಾಸರಿಂದ ಹಿಡಿದು ಎ.ಆರ್.ಕೃಷ್ಣಶಾಸ್ತ್ರಿಗಳ ವರೆಗಿನ ಲೇಖಕರು ಚಿತ್ರಿಸಿದ ದುರ್ಯೋಧನನ ವಾದ "ಪಾಂಡವರು ನಿಯಮದಂತೆ ಹದಿಮೂರು ವರ್ಷಗಳನ್ನು ಪೂರ್ತಿಮಾಡಲಿಲ್ಲ" ಎನ್ನುವದು. ಆದರೆ ಇಂದಿನ ಖ್ಯಾತ ಲೇಖಕರಾದ ಎಸ್.ಎಲ್.ಭೈರಪ್ಪನವರು ತಮ್ಮ 'ಪರ್ವ'ದಲ್ಲಿ ಧರ್ಮರಾಜ ಮತ್ತು ಅವನ ಸಹೋದರರು ಪಾಂಡವರಲ್ಲ; ಕೇವಲ ಕೌಂತೇಯರು ಅಥವಾ ಮಾದ್ರೇಯರು, ಆದ್ದರಿಂದ ರಾಜ್ಯದ ಹಕ್ಕು ಅವರಿಗಿಲ್ಲ ಎಂಬ ವಿಷಯ ಪ್ರತಿಪಾದಿಸಿದ್ದಾರೆ.

ಐದು ಸಾವಿರ ವರ್ಷಗಳಷ್ಟು ಹಿಂದಿನ ಸಮಾಜದ ಬಗ್ಗೆ ಬರೆಯುವಾಗ ನಾವು ತುಂಬಾ ಎಚ್ಚರವಹಿಸಬೇಕಾಗುತ್ತದೆ. ಅಂದಿನ ಸಾಮಾಜಿಕ ಪದ್ಧತಿಯನ್ನೂ ಮೂಲ ಕೃತಿಯಲ್ಲಿರುವ ಸೂಕ್ಷ್ಮ ಅಂಶಗಳನ್ನೂ ಸ್ಪಷ್ಟವಾಗಿ ಗಮನಿಸಬೇಕಾಗುತ್ತದೆ.

ಕುಂತಿ ಮತ್ತು ಮಾದ್ರಿಯ ಮಕ್ಕಳು ನಿಯೋಗದಿಂದ ಹುಟ್ಟಿದರೂ ಪಾಂಡವರೇ. ಅಂದು ಪತ್ನಿಯು ಪತಿಯ ಕ್ಷೇತ್ರವೆನಿಸುತ್ತಿದ್ದುದರಿಂದ ಆ ಕ್ಷೇತ್ರದಲ್ಲಿ ಬೇರೊಬ್ಬ ಪುರುಷನಿಂದ ಮಗುವಾದರೂ ಆ ಮಗು ಪತಿಯ ವಂಶದ್ದೇ ಆಗಿರುತ್ತಿತ್ತು. ಅಂದು ನಿಯೋಗ ಪದ್ಧತಿಯ ಪ್ರಕಾರ ಪತಿಯ ಒಪ್ಪಿಗೆ ಪಡೆದು ಯೋಗ್ಯ ಪುರುಷನಿಂದ ಸಂತಾನ ಪಡೆಯಬಹುದಿತ್ತು. ಇದನ್ನು ಭೈರಪ್ಪನವರೂ ವಿವರಿಸಿದ್ದಾರೆ. ಆದರೆ 'ಪರ್ವ'ದ ದುರ್ಯೋಧನ ಮಾತ್ರ ಪಾಂಡುವು ಪುತ್ರಹೀನನೆಂದೇ ವಾದಿಸಿದ್ದಾನೆ. ಕುರುಕುಲದ ಸ್ತ್ರೀಯಾದ ಅಂಬಾಲಿಕೆಯಲ್ಲಿ ಕೃಷ್ಣದ್ವೈಪಾಯನರಿಂದ ಜನಿಸಿದ ಪಾಂಡುವಿಗೆ ಕುರು ಸಿಂಹಾಸನ ಸಿಗಲಿಲ್ಲವೆ? ಆದ್ದರಿಂದ ಕೌಂತೇಯರು ಮತ್ತು ಮಾದ್ರೆಯರು ಪಾಂಡವರೆಂಬುದೇ ಸರಿ.

ಹಾಗಾದರೆ, ಪಾಂಡವರು ಅವಧಿ ಮುಗಿಸಲಿಲ್ಲ, ಎಂಬ ದುರ್ಯೋಧನನ ವಾದ ಸರಿಯೆ? ಆಡಿದ ಮಾತಿನಂತೆ ನಡೆಯದ ಪಾಂಡವರು ಧರ್ಮಾತ್ಮರೆಂಬ ಕೀರ್ತಿಗೆ ಹೇಗೆ ಪಾತ್ರರಾದರು? ಈ ಎಲ್ಲ ಪ್ರಶ್ನೆಗಳು ಹುಟ್ಟುವುದು ಸಹಜ.

ಜೂಜಿನಲ್ಲಿ ಸೋತವರು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಬೇಕು ಎನ್ನುವುದು ನಿಯಮವಾಗಿತ್ತು. ಆದರೆ ಕಾಲಗಣನೆಗಾಗಿ ಯಾವ 'ಮಾನ'ವನ್ನು ಅನುಸರಿಸಬೇಕೆಂಬುದನ್ನು ಇಬ್ಬರೂ ಯೋಚಿಸಲಿಲ್ಲ. ಗೊಂದಲ ಹುಟ್ಟಿದ್ದು ಇಲ್ಲಿ. ಬೇರೆ ಬೇರೆ ಮಾನಗಳ ಪ್ರಕಾರ ಹದಿಮೂರು ವರ್ಷಗಳಲ್ಲಿ ಬರುವ ದಿನಗಳ ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಚಾಂದ್ರಮಾನ ಪದ್ಧತಿಯ ಪ್ರಕಾರ ಹದಿಮೂರು ವರ್ಷಗಳಿಗೆ 4,758 ದಿನಗಳಾದರೆ ಸೌರಮಾನ ಪದ್ಧತಿಯ ಪ್ರಕಾರ 4,749 ದಿನಗಳು. ಸಾವನ (ಸಾಯನ) ಸಂವತ್ಸರದ ಪ್ರಕಾರ 4,680 ದಿನಗಳು. ಪಾಂಡವರು ಸಾವನ ಸಂವತ್ಸರವನ್ನೇ ಗಣನೆಗೆ ತೆಗೆದುಕೊಂಡು ವನವಾಸ, ಅಜ್ಞಾತವಾಸಗಳನ್ನು ಮುಗಿಸಿದರೆಂದು ವ್ಯಾಸ ರಚಿತ ಮಹಾಭಾರತದಲ್ಲಿ ಉಲ್ಲೇಖಿಸಲಾಗಿದೆ. ಪಾಂಡವರು ವನವಾಸಕ್ಕೆ ಹೊರಟಿದ್ದು ವಿಜಯದಶಮಿಯಂದು. ಅರ್ಜುನನು ಕೌರವರಿಗೆ ಕಾಣಿಸಿಕೊಂಡದ್ದು ಗ್ರೀಷ್ಮ ಋತುವಿನ ಆಷಾಢ ಕೃಷ್ಣಾಷ್ಟಮಿಯಂದು. ಇಲ್ಲಿ ದುರ್ಯೋಧನ

ಸೌರಮಾನ ಅಥವಾ ಚಾಂದ್ರಮಾನ ಪದ್ಧತಿಯನ್ನು ಅನುಸರಿಸಿ ವನವಾಸದ ಅವಧಿ ಮುಗಿಯಲಿಲ್ಲ ಎಂದರೆ, ಪಾಂಡವರು ಸಾವನ ಸಂವತ್ಸರದಂತೆ ಮುಗಿಯಿತು ಎಂದರು. ಆಗ ಈ ಮೂರು ರೀತಿಯ ಪಂಚಾಂಗಗಳೂ ರೂಢಿಯಲ್ಲಿ ಇದ್ದವು. ಇಬ್ಬರ ವಾದದಲ್ಲಿಯೂ ದೋಷವಿಲ್ಲ.

ದುರ್ಯೋಧನನು ಇದು ಕೇವಲ ಜೂಜೆಂದು ಉದಾರಭಾವ ತೋರಿದ್ದರೆ ಕುರುಕ್ಷೇತ್ರ ಯುದ್ಧವಾಗಲು ಕಾರಣವಿರುತ್ತಿರಲಿಲ್ಲ. ಆದರೆ ಗೋಗ್ರಹಣ ಕಾಲದಲ್ಲಿ ಅವನು ಭೀಷ್ಮರೊಡನೆ ಹೇಳಿದ ಮಾತು ಹೀಗಿದೆ, "ಪಾಂಡವರು ಪ್ರತಿಜ್ಞೆಯಂತೆ ವನವಾಸವನ್ನು ಯಥಾವಿಧಿಯಾಗಿ ಮುಗಿಸಿ ಬಂದಿದ್ದರೂ ನಾನು ಅವರಿಗೆ ರಾಜ್ಯವನ್ನು ಕೊಡುವುದಿಲ್ಲ. ಆದ್ದರಿಂದ ಯುದ್ಧಕ್ಕೆ ಸಲಕರಣೆಗಳನ್ನು ಸಿದ್ಧ ಮಾಡಿರಿ." (ನಾಹಂ ರಾಜ್ಯಂ..... ವಿರಾಟ ಪರ್ವ.)

ಇಂಥ ಭಾವನೆಯುಳ್ಳವನಿಗೆ ಈ ನೆಪವೂ ವಾದ ಮಾಡಲು ಕಾರಣವಾಯಿತು. ●

---

# ಸ್ವಾಭಿಮಾನ

## ಪ. ರಾಮಕೃಷ್ಣ ಶಾಸ್ತ್ರಿ

**ಶಿ**ವಾಜಿಯ ಆಸ್ಥಾನ ಕವಿಯಾಗಿ ಅವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಬರೆದ ಭೂಷಣನು ಮಹಾ ಪಂಡಿತನಾಗಿದ್ದಂತೆ ಸ್ವಾಭಿಮಾನಿಯೂ ಆಗಿದ್ದ.

ಮರಾಠಿಯಲ್ಲಿ ಭೂಷಣನು ರಚಿಸಿದ ಸ್ವಾರಸ್ಯಕರವಾದ ಕವಿತೆಗಳ ಬಗೆಗೆ ರಾಜಾ ರುದ್ರರಾಮ ಸಭಿಕರಿಂದ ಕೇಳಿ ತಿಳಿದ. ಅವನಿಗೂ ಭೂಷಣನ ಬಾಯಿಯಿಂದಲೇ ಆ ಕವನಗಳನ್ನು ಹಾಡಿಸಿ ಕೇಳಬೇಕೆಂಬ ಆಶೆಯುಂಟಾಯಿತು. ಒಂದು ಸಲ ತನ್ನ ಆಸ್ಥಾನಕ್ಕೆ ಬಂದು, ಈ ಕೋರಿಕೆಯನ್ನು ಈಡೇರಿಸಿಕೊಟ್ಟು ಮನಸ್ಸಿಗೆ ಆಹ್ಲಾದ ನೀಡಬೇಕೆಂದು ಪ್ರಾರ್ಥಿಸುವ ಪತ್ರವನ್ನು ಆತ ಭೂಷಣನಿಗೆ ಬರೆದು ದೂತರ ಕೈಯಲ್ಲಿ ಕೊಟ್ಟು ಕಳುಹಿಸಿದ.

ರಾಜನ ಕರೆಯನ್ನು ಮನ್ನಿಸಿ ಭೂಷಣನು ಅವನ ಆಸ್ಥಾನಕ್ಕೆ ಆಗಮಿಸಿದ. ತನ್ನ ಮಧುರವಾದ ಕಾವ್ಯವಾಚನದಿಂದ ರಾಜನ ಮನಸ್ಸನ್ನು ಸಂತುಷ್ಟಗೊಳಿಸಿದ. ರಾಜಾ ರುದ್ರರಾಮ ಸಂತೋಷದಿಂದ ಒಂದು ಹರಿವಾಣದಲ್ಲಿ ಹತ್ತು ಸಹಸ್ರ ಚಿನ್ನದ ನಾಣ್ಯಗಳನ್ನಿರಿಸಿ "ಕವಿ ಭೂಷಣನೇ, ಇದರಲ್ಲಿರುವ ಹತ್ತು ಸಾವಿರ ನಾಣ್ಯಗಳನ್ನು ಸ್ವೀಕರಿಸು. ನಿನ್ನಲ್ಲಿ ಪ್ರತಿಭೆ ಧಾರಾಳವಾಗಿದ್ದರೂ ಇಷ್ಟು ದೊಡ್ಡ ಮೊತ್ತದ ಬಹುಮಾನವನ್ನು ನಿನಗಿತ್ತು ಪುರಸ್ಕರಿಸುವ ರಾಜನನ್ನು ಈ ಭೂಮಿಯ ಮೇಲೆ ನೀನು ಎಂದಿಗೂ ಎಲ್ಲಿಯೂ ಕಾಣಲಾರೆ," ಎಂದ ಹೆಮ್ಮೆಯಿಂದ.

ರಾಜನ ಅಹಂಭಾವದ ಮಾತು ಕೇಳಿ ಭೂಷಣನ ಮನಸ್ಸು ವಿಚಲಿತವಾಯಿತು. ಅಂಥವನಿಂದ ಗೌರವ ಪಡೆಯುವುದು ತನ್ನ ಪ್ರತಿಭೆಗೆ ತಾನೆಸಗುವ ಅಪಚಾರ ಎಂದಾತ ಭಾವಿಸಿ ತನ್ನ ಮುಂದೆ ರಾಜನಿರಿಸಿದ ಹರಿವಾಣವನ್ನು ಕಾಲಿನಿಂದ ಸರಿಸಿ ಮಹಾರಾಜಾ ಇಷ್ಟು ದೊಡ್ಡ ಮೌಲ್ಯದ ಬಹುಮಾನವನ್ನು ಕಾಲಿನಿಂದ ಸರಿಸಿ ಹೋಗುವಂತಹ ಕವಿಯನ್ನು ತಾವು ಎಲ್ಲಿಯೂ ಎಂದಿಗೂ ನೋಡಲಾರಿರಿ ಎನ್ನುವುದನ್ನು ತಾವೂ ನೆನಪಿಟ್ಟುಕೊಳ್ಳಿ,". ಎಂದು ತಿರುಗಿಯೂ ನೋಡದೆ ಆಸ್ಥಾನದಿಂದ ಹೊರಟು ಹೋದ. ●

# ಪ್ರಾರ್ಥನೆ

ಯುದ್ಧ ನಿಲ್ಲಿಸೆಂದು ನಿನ್ನ ಬರಿದೆ ಪ್ರಾರ್ಥಿಸಲಾರೆವು ಪ್ರಭೂ
ನೀನು ರೂಪಿಸಿದ ಜಗದ ರೀತಿಯಲಿ ಪ್ರತಿಯೊಬ್ಬ
ತನ್ನೊಳಗೆ, ನೆರೆಯವರ ಜತೆ ಶಾಂತಿಗಾಗಿ
ತನ್ನದೇ ಹಾದಿ ಹುಡುಕಿಕೊಳ್ಳಲೇಬೇಕು

ಹಸಿವು ಕೊನೆಗೊಳಿಸೆಂದು ನಿನ್ನ ಬರಿದೆ ಪ್ರಾರ್ಥಿಸಲಾರೆವು ಪ್ರಭೂ
ನೀನಾಗಲೆ ಜಗತ್ತಿಗೆಲ್ಲ ಆಹಾರವನು ಇತ್ತಿರುವೆ
ಅದನ್ನು ಬುದ್ಧಿವಂತಿಕೆಯಿಂದ ನಾವೇ ಹಂಚಿಕೊಳ್ಳಬೇಕಷ್ಟೇ.

ಪೂರ್ವಾಗ್ರಹಗಳನು ನಿರ್ಮೂಲಿಸೆಂದು ನಿನ್ನ ಬರಿದೆ ಪ್ರಾರ್ಥಿಸಲಾರೆವು ಪ್ರಭೂ!
ನೀನಾಗಲೆ ನಮಗೆ ಕಣ್ಣುಗಳ ಇತ್ತಿರುವೆ,
ಇತರರಲ್ಲಿನ ಒಳಿತನ್ನು ಕಾಣಲು
ಅವನ್ನು ನಾವು ಸರಿಯಾಗಿ ಉಪಯೋಗಿಸಬೇಕಷ್ಟೆ.

ನಿರಾಶೆಯನ್ನು ಪರಿಹರಿಸೆಂದು ನಿನ್ನ ಬರಿದೆ ಪ್ರಾರ್ಥಿಸಲಾರೆವು ಪ್ರಭೂ!
ನೀನಾಗಲೇ ನಮಗೆ ಶಕ್ತಿಯನು ಇತ್ತಿರುವೆ
ಕೊಳಚೆ ಉಡುಗಿ, ಆಸೆಯ ಬೆಳಗಿಸಲು
ನಮ್ಮ ಆ ಶಕ್ತಿಯನು ನ್ಯಾಯದಲಿ ಬಳಸಬೇಕಷ್ಟೆ.

ಕಾಯಿಲೆಗಳೆಲ್ಲವ ತೊಲಗಿಸೆಂದು ನಿನ್ನ ಬರಿದೆ ಪ್ರಾರ್ಥಿಸಲಾರೆವು ಪ್ರಭೂ!
ನೀನಾಗಲೇ ನಮಗೆ ಮಹಾನ್ ಮನಸ್ಸುಗಳನ್ನಿತ್ತಿರುವೆ.
ಹೊಸ ಹೊಸ ಔಷಧಿಗಳ ಕಂಡು ಹಿಡಿಯಲು
ಅವನ್ನು ರಚನಾತ್ಮಕವಾಗಿ ಬಳಸಬೇಕಷ್ಟೆ

ಆದ್ದರಿಂದ, ನಿನ್ನ ಪವಾಡಗಳಿಗಾಗಿ ಬೇಡದೆ ಓ ಪ್ರಭೂ!
ಬರಿದೆ ಪ್ರಾರ್ಥಿಸದೆ ನಾವು ಕ್ರಿಯೆಯಲ್ಲಿ ತೊಡಗಲು
ಬರಿದೆ ಆಸೆಯಲ್ಲೆ ಮುಳುಗದೆ ಸ್ವತಃ ಏನಾದರೂ ಆಗಲು
ನೀನಿತ್ತ ತಾಕತ್ತು, ನಿರ್ಧಾರ, ಇಚ್ಛಾಶಕ್ತಿ-
ಚಿಗುರಿ, ಹೆಮ್ಮರವಾಗಲೆಂದು ಹಂಬಲಿಸುವೆ.

– ಎಚ್. ಪಾಂಡುರಂಗ ವಿಠಲ
(ಜಾರ್ಕ್ರ್ಯಮರನ ಕವನದ ಭಾವಾನುವಾದ)



# ಇವರ ವಯಸ್ಸು ಎರಡು ಸಾವಿರ ವರ್ಷಗಳಿಗೂ ಹೆಚ್ಚು!

ಎಚ್. ಪ್ರೇಮಾನಂದ ಕಾಮತ್

ಹೌದು. ಈ ಎಸ್ಕಿಮೋ ಕುಟುಂಬದ ನಾಲ್ವರೂ ಸದಸ್ಯರ ವಯಸ್ಸು ಎರಡು ಸಾವಿರ ವರ್ಷಗಳಿಗೂ ಹೆಚ್ಚು.

ಇವರಿರುವುದು ಡೆನ್ಮಾರ್ಕಿನ ಕೋಪನ್ ಹೆಗನ್ನಿನ ಪ್ರಯೋಗಾಲಯದಲ್ಲಿ, ತಮಗಾಗಿಯೇ ನಿರ್ಮಿಸಿರುವ, ಕೃತಕ- 'ಇಗ್ಲೂ' ದಲ್ಲಿ.

ಕೇವಲ 51 ಸಾವಿರದಷ್ಟು ಜನವಸತಿಯಿರುವ ಗ್ರೀನ್‌ಲ್ಯಾಂಡ್ ಪ್ರಪಂಚದ ಅತ್ಯಂತ ದೊಡ್ಡ ದ್ವೀಪ. ಸುಮಾರು 21,75,190 ಚದರ ಕಿಲೋಮೀಟರು ವಿಸ್ತೀರ್ಣದ್ದು ಈ ದ್ವೀಪ. ಇಲ್ಲಿ ಕೇವಲ ಐದರ ಒಂದು ಭಾಗವುಳಿದಂತೆ ಮಿಕ್ಕೆಲ್ಲ ಮಂಜುಗಡ್ಡೆಯಿಂದಾವೃತ ಪ್ರದೇಶವೇ.

ಕೆಲ ವರ್ಷಗಳ ಹಿಂದೆ ಇಲ್ಲಿಯ ಹಿಮ ಪ್ರದೇಶವೊಂದರಲ್ಲಿ ಹಿಮಬಂಡೆಗಳನ್ನು ಕೊರೆದು ಸಂಶೋಧನೆ ನಡೆಸುತ್ತಿತ್ತು ಒಂದು ವಿಜ್ಞಾನಿಗಳ ತಂಡ. ಇಂಥದೊಂದು ಕೊರೆತದ ಸಂದರ್ಭದಲ್ಲಿ, ಆಳದಲ್ಲಿ, ಹಿಮದಿಂದ

ಮುಚ್ಚಿಹೋಗಿದ್ದ 'ಇಗ್ಲೂ' (ಎಸ್ಕಿಮೋಗಳ ವಾಸಗೃಹ)ವೊಂದು ಪತ್ತೆಯಾಯಿತು. ಅಷ್ಟೇ ಅಲ್ಲ, ಅದರೊಳಗೆ ಒಬ್ಬ ಗಂಡಸು, ಒಬ್ಬ ಹೆಂಗಸು ಹಾಗೂ ಇಬ್ಬರು ಮಕ್ಕಳ ಶವಗಳಿದ್ದವು. ವಿಜ್ಞಾನಿಗಳು ಆನಂದತುಂದಿಲರಾದರು. ಯಾಕೆಂದರೆ ಹೂತು ಹೋಗಿ ಎಷ್ಟೋ ಕಾಲ ಸಂದಿದ್ದರೂ ಆ ದೇಹಗಳು ಸುಸ್ಥಿತಿಯಲ್ಲಿದ್ದವು.

ಆದರೆ ವಿಜ್ಞಾನಿಗಳಿಗೀಗ ಕುತೂಹಲದೊಂದಿಗೆ ಸಮಸ್ಯೆಯೂ ಕಾಡಹತ್ತಿತು: 'ಈ ಮೃತ ಎಸ್ಕಿಮೋ ಪರಿವಾರ ಎಷ್ಟು ಪ್ರಾಚೀನ?' ಅದಕ್ಕಾಗಿ ಅವರು ಶೋಧನೆಗೆ ತೊಡಗಿದರು. ಈ ದೇಹಗಳ ಕುಳ್ಳ ನಿಲುವು, ಕಡು ಕಪ್ಪು ಮೈಬಣ್ಣ, ದೇಹದಾದ್ಯಂತ ಆವರಿಸಿಕೊಂಡಿರುವ ದಟ್ಟ ಕೇಶರಾಶಿ... ಇವುಗಳ ಆಧಾರದಿಂದಲೂ, ಎಸ್ಕಿಮೋ ಜನಾಂಗದ ಇತಿಹಾಸದ ಆಧಾರದಿಂದಲೂ, ಈ ಪರಿವಾರ ಎರಡು ಸಾವಿರ ವರ್ಷಗಳಷ್ಟು ಹಿಂದಿನ ಸಂತತಿಗೆ ಸೇರಿದ್ದು ಎಂಬ ತೀರ್ಮಾನಕ್ಕೆ ಈ ವಿಜ್ಞಾನಿಗಳು ಬಂದರು. ''ಸುಮಾರು ಇಪ್ಪತ್ತು ಶತಮಾನಗಳ ಹಿಂದೆ ಇದೇ ಹೋಲಿಕೆಯ ಜನ ಈ ಮಂಜುಗಡ್ಡೆ ಪ್ರದೇಶದ ಮೇಲೆ ವಾಸ್ತವ್ಯ ಹೂಡಿದ್ದರು'' ಎಂಬುದಕ್ಕೆ ಖಚಿತ ಆಧಾರವನ್ನು ಕಂಡುಕೊಂಡರು. ''ಹಿಮಬಂಡೆಗಳ ಕುಸಿತ ಅಥವಾ ಭೂಕಂಪನದಿಂದಾಗಿ ಈ ಪರಿವಾರ ವಾಸಿಸಿದ್ದ 'ಇಗ್ಲೂ' ಹಿಮದೊಡಲಿನಲ್ಲಿ ಸೇರಿ ಹೋಗಿರಬೇಕು.'' ಎನ್ನುತ್ತಾರೆ ಆ ವಿಜ್ಞಾನಿಗಳು.

ಅನಿರೀಕ್ಷಿತವಾಗಿ ಉಪಲಬ್ಧವಾದ ಈ ಒಂದು ಮಹತ್ವಪೂರ್ಣ ಶೋಧವನ್ನು ಸಂರಕ್ಷಿಸಿಡುವುದು ಹೇಗೆಂದು ಯೋಚಿಸಿದ ವಿಜ್ಞಾನಿಗಳು ಈ ಪರಿವಾರವನ್ನು ಡೆನ್ಮಾರ್ಕಿನ ಕೋಪನ್‌ಹೆಗನ್ನಿನ ಪ್ರಯೋಗಾಲಯಕ್ಕೆ ತಲುಪಿಸಿದರು.

ಈ ಪ್ರಯೋಗಾಲಯದ ಕ್ರಾಂತಿಕಾರಿ ಪ್ರಕ್ರಿಯೆಗಳ ನೆರವಿನಿಂದ ಡಾಕ್ಟರ್ ಲಾರ್ಸ್ ಬ್ಲಾಸ್‌ಗಾರ್ಡ್ ಎಂಬ ವಿಜ್ಞಾನಿ ಅಸಂಭವವನ್ನು ಸಂಭವನೀಯ ಎಂದು ಸಿದ್ಧಪಡಿಸುವತ್ತ ಶ್ರಮಿಸತೊಡಗಿದರು. ಶೀತದಿಂದ ಮರಗಟ್ಟಿ ಹೋಗಿದ್ದ ಈ ನಾಲ್ಕೂ ದೇಹಗಳ ತಾಪಮಾನವನ್ನು ಹೆಚ್ಚಿಸಲು ಪ್ರಯತ್ನಿಸಿದ ಬ್ಲಾಸ್‌ಗಾರ್ಡ್, ಈ ನಾಲ್ವರಿಗೂ ಸೌಮ್ಯ ವಿದ್ಯುದಾಘಾತವಾಗುವಂತೆ ಮಾಡಿದರು. ಅರೆ! ಪರಿವಾರದ ಅತಿ ಕಿರಿಯ ಸದಸ್ಯನಾದ



ಮಗುವಿನ ಕಣ್ರೆಪ್ಪೆಗಳು ಮಿಸುಕಾಡತೊಡಗಿದವಲ್ಲದೇ ಕೆಲ ನಿಮಿಷಗಳಲ್ಲಿಯೇ ಆ ನಾಲ್ವರೂ ಗಾಢ ನಿದ್ರೆಯಿಂದ ಎಚ್ಚೆತ್ತವರಂತೆ ಕಣ್ತೆರೆದು ಅತ್ತಿತ್ತ ನೋಡತೊಡಗಿದರು!

ಆದರೆ ವಿಜ್ಞಾನಿಗಳಿಗೆ ಸಂತಸದ ಜತೆ ಜತೆಗೇ ಚಿಂತೆಯೂ ಆವರಿಸತೊಡಗಿತು. ಆ ನಾಲ್ವರೂ ಎಸ್ಕಿಮೋಗಳು ಭಯಭೀತರಾಗಿ ಕೊಠಡಿಯ ಬಿಳಿ ಚಾವಣಿ, ಕಿಟಕಿ ಮತ್ತು ಈ ಜನರನ್ನೇ ಭಯದಿಂದ ದಿಟ್ಟಿಸಲಾರಂಭಿಸಿದರು. ಅವರಿನ್ನೂ ವರ್ತಮಾನಕ್ಕೆ ಹೊಂದಿಕೊಳ್ಳದೇ ಇದ್ದುದರಿಂದ ಇದು ಸಹಜವೇ ಆಗಿತ್ತು. ಹಾಗಾದರೆ ಅವರ ಭಯವನ್ನು ಹೋಗಲಾಡಿಸುವುದು ಹೇಗೆ? ಬ್ಲಾಸ್‌ಗಾರ್ಡ್ ಇದಕ್ಕೂ ಒಂದು ಉಪಾಯ ಹುಡುಕಿದರು. ಈ ಪರಿವಾರಕ್ಕೆಂದು ಒಂದು ಕೃತಕ 'ಇಗ್ಲೂ'ವನ್ನು ನಿರ್ಮಿಸಿದರು.

ತಮ್ಮ 'ಮನೆ'ಯಲ್ಲಿ ಇರತೊಡಗಿದ ಮೇಲೆ ಅವರ ಇರಿಸು-ಮುರಿಸು ದೂರಾಯಿತು. ಆ ನಾಲ್ವರೂ ತಮ್ಮದೇ ಪ್ರಪಂಚದಲ್ಲಿ ಇರತೊಡಗಿದರು. ತಮ್ಮ ತಮ್ಮಲ್ಲೇ ವಿಚಿತ್ರವಾದ ಭಾಷೆಯಲ್ಲಿ ಸಂಭಾಷಿಸತೊಡಗಿದರು. ಈ ಭಾಷೆ ಯಾವುದು, ಅವರಾಡುವ ಮಾತುಗಳ ಅರ್ಥವೇನು ಎಂಬುದನ್ನರಿಯುವುದಕ್ಕೆಂದು ಎಸ್ಕಿಮೋ ಭಾಷೆಯ ವಿಶೇಷಜ್ಞರನ್ನು ಕರೆಸಲಾಯಿತು. ಆದರೆ ಅವರಿಗೂ ತಿಳಿದದ್ದು ಮಂಜುಗಡ್ಡೆ, ಚಳಿ ಮುಂತಾದ ಕೆಲವೇ ಶಬ್ದಗಳು ಮಾತ್ರ.

ಈಗಲೂ ಆ ನಾಲ್ವರ ಪರಿವಾರ ತಮಗಾಗಿ ನಿರ್ಮಿಸಿದ ಕೃತಕ 'ಇಗ್ಲೂ'ವಿನಲ್ಲಿಯೇ ಇದೆ. ಆಧುನಿಕ ಜಗತ್ತಿನಿಂದ ಈ ನಾಲ್ವರನ್ನೂ ಸಂಪೂರ್ಣವಾಗಿ ಪ್ರತ್ಯೇಕವಾಗಿಡುವಲ್ಲಿ ವಿಜ್ಞಾನಿಗಳು ಮತ್ತು ವೈದ್ಯರು ನಿಗಾವಹಿಸುತ್ತಿದ್ದಾರೆ. ಈ ಪರಿವಾರದ ಕುರಿತು ವಿಸ್ತೃತ ಅಧ್ಯಯನಕ್ಕಿದು ಅತ್ಯವಶ್ಯ ಎನ್ನುತ್ತಾರೆ ಅವರು. ●

(ಹಿಂದಿಯಿಂದ)

**ಮೊ**ಸರಿನ ಬಗೆಗೆ ಇತ್ತೀಚೆಗೆ ಉಂಟಾದ ಹೆಚ್ಚಿನ ತಿಳುವಳಿಕೆ, ಆಹಾರ ಪ್ರಪಂಚದಲ್ಲಿ ಕೋಲಾಹಲವನ್ನುಂಟು ಮಾಡಿದೆ. ಪುರಾತನ ಗ್ರೀಕ್ ವೈದ್ಯರು ಉದರ ರೋಗಗಳನ್ನು ವಾಸಿ ಮಾಡಲು, ತುರ್ಕರು ನಿದ್ರಾಹೀನತೆಯನ್ನು ತೊಲಗಿಸಲು ಇದನ್ನು ಬಳಸಿದರೆ ಪೋರ್ಚುಗೀಸ್ ಹೆಂಗಸರು ತಮ್ಮ ದೇಹದ ಸೌಂದರ್ಯವನ್ನು ಕಾಯ್ದುಕೊಳ್ಳುವುದಕ್ಕಾಗಿ ಮೊಸರನ್ನು ಬಳಸುತ್ತಿದ್ದರು.

ಸಾವಿರಾರು ವರ್ಷಗಳಿಂದಲೂ ಮೊಸರನ್ನು ಬಳಸಲಾಗುತ್ತಿದೆ. ಬೈಬಲ್ ಇದರ ಆರೋಗ್ಯಕರ ಗುಣಗಳ ಬಗ್ಗೆ ಹೇಳುತ್ತದೆ. ಧಾರ್ಮಿಕ ವಿದ್ವಾಂಸರು 'ಹಾಲು ಮತ್ತು ಜೇನಿ'ನ ನಾಡಿನಲ್ಲಿ ಉತ್ಕೃಷ್ಟ ಆಹಾರವಿದು ಎಂದು ಹೇಳುತ್ತಾರೆ. ಅಬ್ರಹಾಂ ತನ್ನ ಜೀವನ ಪರ್ಯಂತ ''ದೇವತೆಗಳ ಆಹಾರ'' ವಾದ ಮೊಸರಿನ ಭಕ್ತನಾಗಿದ್ದನಂತೆ.

ಮೊಸರಿನ ಮೂಲಸ್ಥಾನ ತುರ್ಕಸ್ಥಾನವೆಂದು ಭಾವಿಸಲಾಗಿದೆ. ಒಂದು ದಂತಕಥೆಯ ಪ್ರಕಾರ ಅಲೆಮಾರಿಯೊಬ್ಬ ಮರುಭೂಮಿಯನ್ನು ದಾಟುವಾಗ ಒಂದಷ್ಟು ಹಾಲನ್ನು ಮೇಕೆ ಚರ್ಮದ ಚೀಲದಲ್ಲಿಟ್ಟು ತನ್ನ ಒಂಟೆಯ ಬೆನ್ನಿನ ಮೇಲೆ ಅದನ್ನು ನೇತುಹಾಕಿ ಪ್ರಯಾಣವನ್ನು ಮುಂದುವರೆಸಿದನಂತೆ. ಗಂಟೆಗಳ ನಂತರ ಅವನು ಚೀಲವನ್ನು ಬಿಚ್ಚಿದಾಗ ಹಾಲು, ಗಟ್ಟಿಯಾದ ಪದಾರ್ಥವಾಗಿ ಪರಿವರ್ತನೆಗೊಂಡಿತ್ತು. ಮರುಭೂಮಿಯ ಸೂರ್ಯ ಮತ್ತು ಚೀಲದೊಳಗಿನ ಬ್ಯಾಕ್ಟೀರಿಯಗಳು ಮೊಸರನ್ನು ತಯಾರಿಸಲು ಅನುಕೂಲವಾದ ವಾತಾವರಣವನ್ನು ನಿರ್ಮಿಸಿದ್ದವು.

ದೀರ್ಘಾಯುಷಿಗೂ ಮೊಸರಿಗೂ ಬಿಡಿಸಲಾರದ ನಂಟು. ಬಲ್ಗೇರಿಯನ್ನರ ದೀರ್ಘಾಯುಷ್ಯಕ್ಕೆ ಕಾರಣ ಅವರು ಅಧಿಕ ಪ್ರಮಾಣ

## ದೇವತೆಗಳ ಆಹಾರ:

# ಮೊಸರು

ಜಿ.ಎ.ಶಶಿಧರ

ದಲ್ಲಿ ಮೊಸರನ್ನು ಸೇವಿಸುವುದು ಎಂಬ ಭಾವವೇ ಕೆಲವೆಡೆ ಪ್ರಚಲಿತವಾಗಿದೆ. ಜೀರ್ಣಾಂಗಗಳ ಮೇಲೆ ಮೊಸರಿನ ಬ್ಯಾಕ್ಟೀರಿಯಾಗಳ ಅನುಕೂಲಕರ ಪ್ರಕ್ರಿಯೆಯೇ ಈ ದೀರ್ಘಾಯುವಿಗೆ ಕಾರಣ ಎಂದೂ ಭಾವಿಸಲಾಗಿದೆ.

ಪ್ರೋಟೀನ್, ಅಗತ್ಯವಾದ ಜೀವಸತ್ವಗಳು ಮತ್ತು ಖನಿಜಲವಣಗಳು ಮೊಸರಿನಲ್ಲಿ ಸಮೃದ್ಧವಾಗಿದೆ. ಸಂತುಲಿತ ಆಹಾರಕ್ಕೆ ಅತ್ಯುತ್ತಮ ಪೂರಕ ಆಹಾರ ಇದು. ಮಾಂಸ, ಕೋಳಿಮಾಂಸ, ಮೊಟ್ಟೆಗಳು ಮತ್ತು ಮೀನುಗಳ ಬೆಲೆಗೆ ಹೋಲಿಸಿದಾಗ ಇದರ ಬೆಲೆ ಅತಿ ಕಡಿಮೆಯೇ. ಇದು ಕ್ಯಾಲ್ಸಿಯಂ ಮತ್ತು ರೈಬೋಫ್ಲಾವಿನ್‌ಗಳ ಒಳ್ಳೆಯ ಆಕರವೂ ಹೌದು. ಹಾಲಿನಲ್ಲಿನ ಪ್ರೋಟಿನ್‌ಗಿಂತ ಮೊಸರಿನಲ್ಲಿ ಪ್ರೋಟೀನು ಬಹು ಬೇಗ ಜೀರ್ಣವಾಗುತ್ತದೆ. ಚಿಕ್ಕ ಮಕ್ಕಳು ಮತ್ತು ವಯಸ್ಸಾದವರಿಗೆ ವ್ಯಕ್ತಿಗಳಿಗೆ ಮೊಸರು ಅತ್ಯುತ್ತಮ ಆಹಾರ.

ಹಾಲನ್ನು ಮೊಸರಾಗಿ ಪರಿವರ್ತಿಸುವ ಬ್ಯಾಕ್ಟೀರಿಯಾಗಳು ಹಾಲಿನ ಪ್ರೋಟೀನನ್ನು ಮೊದಲೇ ಜೀರ್ಣಿಸಿಕೊಳ್ಳುತ್ತವೆ. ಕರುಳಿನಲ್ಲಿ ರೋಗಗಳನ್ನುಂಟುಮಾಡುವ ಬ್ಯಾಕ್ಟೀರಿಯಗಳ ಬೆಳವಣಿಗೆಯನ್ನು ಮೊಸರಿನಲ್ಲಿನ ಬ್ಯಾಕ್ಟೀರಿಯಗಳು ಪ್ರತಿಬಂಧಿಸುತ್ತವೆ. ಆಹಾರ ಜೀರ್ಣವಾಗಲು ಅಗತ್ಯವಾದ ಬ್ಯಾಕ್ಟೀರಿಯಗಳೂ ಮೊಸರಿನಲ್ಲಿ ಉಂಟು.

ಜೀವಿರೋಧಕಗಳನ್ನು ತೆಗೆದುಕೊಳ್ಳುವುದು ಅಗತ್ಯವಾದಾಗ, ಈ ಜೀವಿರೋಧಕಗಳು ಅನೇಕ ಸಂದರ್ಭಗಳಲ್ಲಿ ಕರುಳಿನಲ್ಲಿ ರೋಗಕಾರಕ ಬ್ಯಾಕ್ಟೀರಿಯಗಳ ಜೊತೆ ಆಹಾರ ಜೀರ್ಣವಾಗುವ ಬ್ಯಾಕ್ಟೀರಿಯಗಳನ್ನೂ ನಾಶಗೊಳಿಸುತ್ತದೆ. ಇಂತಹ ಸಂದರ್ಭದಲ್ಲಿ ಮೊಸರನ್ನು ಸೇವಿಸಿದಾಗ ಪಚನಕ್ರಿಯೆಗೆ ಅತ್ಯುಪಯುಕ್ತವಾದ ಬ್ಯಾಕ್ಟೀರಿಯಗಳನ್ನು ಕರುಳಿಗೆ ಪೂರೈಸಿದಂತಾಗುತ್ತದೆ. ಈ ಬ್ಯಾಕ್ಟೀರಿಯಗಳು ದೇಹವು ಖನಿಜಲವಣಗಳನ್ನು ಹೀರಿಕೊಳ್ಳುವಲ್ಲೂ ಸಹಾಯ ಮಾಡುತ್ತವೆ. 'ಬಿ' ಗುಂಪಿನ ಜೀವಸತ್ವಗಳನ್ನು ದೇಹದಲ್ಲಿ ಸಂಶ್ಲೇಷಿಸುವಲ್ಲಿ ಇದು ಸಹಕರಿಸುತ್ತದೆ ಎಂದೂ ಭಾವಿಸಲಾಗಿದೆ. ಹೃದ್ರೋಗಿಗಳಿಗೆ ಇದು ಅತ್ಯುತ್ತಮ ಆಹಾರ.

ಅನೇಕ ಶತಮಾನಗಳ ಹಿಂದೆ ಭಾರತಕ್ಕೆ ಮೊಸರು ಬಂತು. ಬಹುಶಃ ಆರ್ಯರು ತಂದರೆಂದು ಕಾಣುತ್ತದೆ. ದೈನಂದಿನ ಆಹಾರದಲ್ಲಿ ಅನೇಕ ಭಾರತೀಯರು ಮೊಸರನ್ನು ಬಳಸುತ್ತಿದ್ದಾರೆ. ನಮ್ಮ ದೇವರಿಗೂ ಮೊಸರೆಂದರೆ ಪ್ರೀತಿ. ಅದಕ್ಕಾಗಿಯೇ ಪಂಚಾಮೃತದಲ್ಲಿ ಅದಕ್ಕೂ ಒಂದು ಪಾಲು.

ಒಂದು ಗ್ಲಾಸ್ ಲಸ್ಸಿ ಅಥವಾ ಒಂದು ಗ್ಲಾಸ್ ಹಣ್ಣಿನ ರಸಕ್ಕೆ ಬದಲಾಗಿ ನಾವೆಷ್ಟು ಮಂದಿ ಕೋಲಾಪಾನೀಯಕ್ಕೆ ಮೊರೆ ಹೋಗುತ್ತಿಲ್ಲ? ಈ ಅಚ್ಚರಿಯ ಆಹಾರದ ಪ್ರಯೋಜನಗಳಿಗೆ ನಾವೇಕೆ ಕುರುಡರಾಗಿದ್ದೇವೆ? ●

# ಕಸ್ತೂರಿ ನಡೆದು ಬಂದ ದಾರಿ

(1962ರ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾದದ್ದು)

# ಬೇಕನ್: ತತ್ವಭ್ರಷ್ಟ, ತತ್ವಜ್ಞಾನಿ ಶ್ರೇಷ್ಠ

ಹೆಸರಾಂತ ಮನೆತನದಲ್ಲಿ ಹುಟ್ಟಿ, ಅಸಾಮಾನ್ಯ ಪ್ರತಿಭೆಯಿಂದ ಬೆಳೆದು, ಸಾಹಿತ್ಯಕ್ಕೆ ಉಜ್ವಲ ಕೊಡುಗೆಯನ್ನಿತ್ತು, ಲೋಕಕ್ಕೆ ತತ್ವಜ್ಞಾನದ ಬೆಳಕನ್ನು ನೀಡಿ, ತನ್ನ ಶ್ರೇಯಸ್ಸಿಗೆ ಕಾರಣನಾದ ಮಿತ್ರರನ್ನು ವಿಶ್ವಾಸಘಾತಕತನದಿಂದ ಕೊಲ್ಲಿಸಿ, ಲಂಚಗುಳಿತನವೇ ಮೊದಲಾದ ನೀಚಕೃತ್ಯಗಳ ದುಷ್ಕೀರ್ತಿಯಿಂದ ಮಡಿದ ಅದ್ಭುತ ಬಾಳುವೆ ತತ್ವಜ್ಞಾನಿ ಫ್ರಾನ್ಸಿಸ್ ಬೇಕನ್ನನಿಗೆ ಸೇರಿದುದು. ಸಾಹಿತಿ, ದಾರ್ಶನಿಕ, ರಾಜಕೀಯ ಮುತ್ಸದ್ಧಿ, ಕಾನೂನು ತಜ್ಞ, ಎಂದು ಹಲವಾರು ಮುಖಗಳ ಸಮ್ಮಿಳನವನ್ನು ಬೇಕನ್ನನ ಅತಿಮಾನುಷ ವ್ಯಕ್ತಿತ್ವದಲ್ಲಿ ಕಾಣುತ್ತೇವೆ.

ಇತಿಹಾಸದಲ್ಲಿ ಫ್ರಾನ್ಸಿಸ್ ಬೇಕನ್ನನ ಭದ್ರಸ್ಥಾನವನ್ನು ಕುರಿತು ಯಾರೂ ಎಂದೂ ಸಂದೇಹಪಟ್ಟಿಲ್ಲ. ಅವನು ಆಧುನಿಕ ತತ್ವಜ್ಞಾನಕ್ಕೂ ತಂದೆಯೆನಿಸಿದ್ದಾನೆ. ಆಧುನಿಕ ವಿಜ್ಞಾನಕ್ಕೂ ತಂದೆಯೆನಿಸಿದ್ದಾನೆ. ಅವನಿಗಿಂತ 2000 ವರ್ಷ ಹಿಂದೆ ಮಹಾ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲನ ಸಿದ್ಧಾಂತಗಳ ದಾರಿಯಲ್ಲಿ ಗತಾನುಗತಿಕವಾಗಿ ಸಾಗಿ ಕಾಲು ತೊಡಕಿಸಿಕೊಂಡು ಹೊರಬರಲಾರದಾಗಿದ್ದ ತತ್ವಜ್ಞಾನ, ವಿಜ್ಞಾನಗಳನ್ನು ಕೆಸರಿನಿಂದ ಮೇಲೆತ್ತಿದಾತ ಬೇಕನ್ನನೇ. ವಿಜ್ಞಾನದಲ್ಲಿ ಪ್ರಯೋಗ-ಪರೀಕ್ಷೆಗಳಿಗೆ ಪ್ರಾಧಾನ್ಯ ತಂದುಕೊಟ್ಟಾತನೂ ಅವನೇ. ಅವನು ಇಂಗ್ಲಿಷ್ ಗದ್ಯದ ಶ್ರೇಷ್ಠ ಲೇಖಕನಾಗಿದ್ದ.

ಆದರೆ ಅವನ ಜೀವನ ಮಾತ್ರ ವಿರೋಧಾಭಾಸಗಳಿಂದ ತುಂಬಿತ್ತು. ದೊಡ್ಡ ಮನೆತನದಲ್ಲಿ ಹುಟ್ಟಿ, ಬಡತನದಲ್ಲಿ ಬಾಲ್ಯ ಕಳೆಯಬೇಕಾಗಿ ಬಂದ ಪ್ರತಿಭಾಶಾಲಿ ಮಹಾತ್ವಾಕಾಂಕ್ಷಿಯೊಬ್ಬನು ತನ್ನ ಅಭೀಷ್ಟಸಾಧನೆಗಾಗಿ ಯಾವ ಮಟ್ಟಕ್ಕಿಳಿದಾನೆಂದು ಅದು ತೋರಿಸುತ್ತದೆ.

ನಿಕೊಲಸ್ ಬೇಕನ್ನನ ಎರಡನೆಯ ಹೆಂಡತಿಯಲ್ಲಿ ಕೊನೆಯ ಮಗನಾಗಿ ಫ್ರಾನ್ಸಿಸ್ ಬೇಕನ್ನನು 1561 ಜನವರಿ 22ರಂದು ಜನಿಸಿದನು. ಆಗಾಗ್ಗೆ ಅವನ ಎಳೆಯ ಶರೀರವನ್ನು ಪೀಡಿಸುತ್ತಿದ್ದ ಅನಾರೋಗ್ಯವು ಅವನ ಅಸಾಮಾನ್ಯ ಪ್ರತಿಭಾಶಕ್ತಿಯ ಮೇಲೆ ಏನೂ ಪರಿಣಾಮಕಾರಿಯಾಗಲಿಲ್ಲ. ಹದಿಮೂರನೆಯ ಹರೆಯದಲ್ಲಿ ಬೇಕನ್ ಕೇಂಬ್ರಿಜ್‌ನ ಟ್ರಿನಿಟಿ ಕಾಲೇಜನ್ನು ಸೇರಿದನು. ಆದರೆ ಅಂದಿನ ವಿದ್ಯಾಭ್ಯಾಸಕ್ರಮವು ಅವನಿಗೆ ನಿರಾಶೆಯನ್ನುಂಟುಮಾಡಿತು. ಮೂರು ವರ್ಷಗಳಲ್ಲಿ ತೀವ್ರ

ತಿರಸ್ಕಾರವನ್ನು ತಾಳಿ ಬೇಕನ್ ಕಾಲೇಜಿಗೆ ತಿಲಾಂಜಲಿಯಿತ್ತನು.

ಹದಿನಾರರಲ್ಲಿ ಫ್ರಾನ್ಸಿನ ಬ್ರಿಟಿಶ್ ರಾಯಭಾರಿ ಕಚೇರಿಯಲ್ಲಿ ಬೇಕನ್ನನಿಗೆ ಒಂದು ಹುದ್ದೆ ಲಭಿಸಿತು. ಸಾಹಿತ್ಯ ವಿಜ್ಞಾನಗಳ ಅಭ್ಯಾಸ ಎಡೆಬಿಡದೆ ಸಾಗುತ್ತಲೇ ಇತ್ತು.

ಬಂತು ಪ್ರಥಮ ಆಘಾತ: ತಂದೆಯ ಆಕಸ್ಮಿಕ ನಿಧನದ ವಾರ್ತೆಯನ್ನು ಕೇಳಿ ಬೇಕನ್ ಕೂಡಲೇ ಸ್ವದೇಶಕ್ಕೆ ಮರಳಬೇಕಾಯಿತು. ಬೇಕನ್ನನಿಗೆ ಇನ್ನೂ ವಯಸ್ಸು ಹದಿನ್ಯೆದು ಪೂರ್ತಿಯಾಗಿರಲಿಲ್ಲ. ಸಿರಿವಂತ ಮನೆತನದಲ್ಲಿ ರಾಜಭೋಗವನ್ನು ಅನುಭವಿಸುತ್ತಿದ್ದ ಬೇಕನ್ ಈಗ ಕೈಯಲ್ಲಿ ಕಾಸಿಲ್ಲದೆ ದಿಕ್ಕುಗೆಟ್ಟು ಬೀದಿ ಬೀದಿ ಅಲೆದಾಡಿದನು. ಹೊಟ್ಟೆಬಟ್ಟೆಗೆ ಸಾಲುವಷ್ಟು ಸಂಪತ್ತು ಒದಗಿದರೆ ಸಾಹಿತ್ಯ ರಾಜಕಾರಣಗಳಿಗಾಗಿ ಜೀವನವನ್ನು ಮೀಸಲಾಗಿರಿಸಬಹುದೆಂಬ ಅವನ ಆಸೆ ಕಮರಿಹೋಯಿತು.

ಸರಕಾರದಲ್ಲಿ ಯಾವುದಾದರೊಂದು ಉದ್ಯೋಗ ಪಡೆಯುವುದಕ್ಕಾಗಿ ಬೇಕನ್ ತನ್ನ ಬಂಧುಗಳ ಸಹಾಯ ಕೋರಿದನು. ಬೇಕನ್ನನಂತಹ ಪ್ರತಿಭಾವಂತ ವ್ಯಕ್ತಿಗೆ ರಾಜ್ಯಸರಕಾರದಲ್ಲಿ ಉನ್ನತ ಪದವಿಯನ್ನು ಹೊಂದಲು ಕಷ್ಟವಾಗಬಹುದೆಂದು ಯಾರೂ ನೆನೆಸುವಂತಿರಲಿಲ್ಲ. ಅವನ ತಂದೆ ಮುಖ್ಯ ನ್ಯಾಯಾಧೀಶನಾಗಿದ್ದನು. ಇಂಗ್ಲಂಡಿನ ಕೋಶಾಧಿಕಾರಿಯಾಗಿದ್ದು, ದೇಶದ ರಾಜಕೀಯದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದ ವಿಲಿಯಂ ಸೆಸಿಲ್ (ಲಾರ್ಡ್ ಬರ್ಲಿ)ನ ಪತ್ನಿ ಮತ್ತು ಬೇಕನ್ನನ ತಾಯಿ ಅಕ್ಕತಂಗಿಯರಾಗಿದ್ದರು. ಇಷ್ಟು ಮಾತ್ರವಲ್ಲ, ಇಂಗ್ಲಂಡಿನ ರಾಣಿ ಎಲಿಜಬೆತ್ ಬೇಕನ್ನನ ಮೇಲೆ ಕೃಪಾದೃಷ್ಟಿಯನ್ನು ಬೀರಿದ್ದಳು. ಹೀಗಿರುವಾಗ ಬೇಕನ್ ಅಂಗಲಾಚಿ ಬೇಡಿದರೂ ಸರಕಾರದಲ್ಲಿ ಅವನಿಗೆ ಯಾವ ಉದ್ಯೋಗವೂ ದೊರೆಯದೆ ಹೋಯಿತು. ಇದಕ್ಕೆ ಕಾರಣ ಅವನ ಬಂಧು ಲಾರ್ಡ್ ಬರ್ಲಿಯೆ. ತನ್ನ ಮಗ ರಾಬರ್ಟ್ ಸೆಸಿಲ್, ಯೋಗ್ಯತೆಯಲ್ಲಿ ದಕ್ಷತೆಯಲ್ಲಿ ಬೇಕನ್ನನಿಗೆ ಸರಿಸಾಟಿಯಾಗಲಾರನೆಂದು ಮನಗಂಡ ಅವನಿಗೆ ಬೇಕನ್ನನ ಅಭ್ಯುದಯವು ಸಹಿಸಲಸಾಧ್ಯವಾಯಿತು.

ನಿರಾಶನಾಗಿ ಬೇಕನ್ ಕಾನೂನು ಅಭ್ಯಾಸಕ್ಕೆ ತೊಡಗಿದನು. ವ್ಯಾಸಂಗದಲ್ಲಿ ವಿಶೇಷ ಪ್ರಾವೀಣ್ಯವನ್ನು ಪಡೆದ ಬೇಕನ್ ಸತತ ಪ್ರಯತ್ನದ ಫಲವಾಗಿ 1590ರಲ್ಲಿ ರಾಣಿಯ ವಿಶೇಷ ಸಲಹೆಗಾರನಾಗಿ ನೇಮಕಹೊಂದಿದನು. ಆದರೂ ಅದರಿಂದ ದೊರಕುತ್ತಿದ್ದ ವೇತನ ಅತ್ಯಲ್ಪವಾಗಿತ್ತು.

ಅವನು ರಾಜಕೀಯಕ್ಕೂ ಇಳಿದನು. 1593ರಲ್ಲಿ ಬೇಕನ್ನನು ಪಾರ್ಲಿಮೆಂಟ್ ಸದಸ್ಯನಾಗಿ ಆರಿಸಲ್ಪಟ್ಟನು. ಒಡನೆ ಅಲ್ಲಿ ಅವನ ಪ್ರತಿಭೆ ಪ್ರಕಾಶಗೊಂಡಿತು. ಅವನ ಭಾಷಣಗಳು ಅಪ್ರತಿಮವಾಗಿದ್ದವು. ಇಡಿಯ ಪಾರ್ಲಿಮೆಂಟ್ ಭವನವು ಅವನ ನಿರರ್ಗಳವಾದ ವಾಕ್ ಪ್ರವಾಹವನ್ನು ತಲ್ಲೀನತೆಯಿಂದ ಕೇಳು



ತ್ತಿತ್ತು.

ರಾಜಕೀಯದಲ್ಲಿ ಬೇಕನ್ನನ ಪಾತ್ರ ಕಷ್ಟ ತರವಾಗಿತ್ತು. ರಾಣಿಯ ಪ್ರೀತಿಯನ್ನೂ ಉಳಿಸಿಕೊಳ್ಳಬೇಕು, ಜನರ ಆದರವನ್ನೂ ಗಳಿಸಬೇಕು ಎಂಬ ಅವನ ಇಬ್ಬಗೆಯ ಆಸೆ ಈಡೇರುವುದು ಅಸಾಧ್ಯವಾಗಿತ್ತು. ಒಮ್ಮೆ ಸರಕಾರದ ತೆರಿಗೆಯ ವಿರುದ್ಧ ಭಾಷಣ ಮಾಡುತ್ತ ಆತ, "ಈ ತೆರಿಗೆಗಳನ್ನು ಕೊಡಬೇಕಾದರೆ ಜನರು ಮನೆಯ ಪಾತ್ರೆಗಳನ್ನೂ ಬಟ್ಟಲುಗಳನ್ನೂ ಮಾರಬೇಕಾಗುತ್ತದೆ" ಎಂದಾಗ ರಾಣಿಗೂ ಮಂತ್ರಿಗಳಿಗೂ ಅವನ ಮೇಲೆ ಕ್ರೋಧವುಂಟಾಯಿತು. ಇದನ್ನು ಕೇಳಿದ ಕೂಡಲೇ ಬೇಕನ್ ನಾಚಿಕೆಯನ್ನು ತೊರೆದು ಅಧಿಕಾರಿಗಳ ಪಾದಧೂಳಿಯಲ್ಲಿ ಹೊರಳಾಡಿ ಕ್ಷಮಾಯಾಚನೆ ಮಾಡಿದನು.

ಹನ್ನೆರಡು ವರ್ಷಗಳ ಕಾಲ ಯೋಗ್ಯ ವೃತ್ತಿಗಾಗಿ ಸಂಬಂಧಿಕರೊಡನೆ ಕಾಡಿ ಬೇಡಿ ಬೇಸತ್ತ ಬೇಕನ್ನನು ತನ್ನ ಭವಿತವ್ಯಕ್ಕಾಗಿ ರಾಜಕೀಯದಲ್ಲಿ ಪ್ರಭಾವಶಾಲಿಯಾದ ಇನ್ನೊಬ್ಬ ವ್ಯಕ್ತಿಯ ಬೆನ್ನು ಹಿಡಿಯುವ ಪ್ರಮೇಯ ಒದಗಿತು. ಯುವಕನೂ ಮೇಧಾವಿಯೂ ಚತುರನೂ ಆದ ಲಾರ್ಡ್ ಎಸೆಕ್ಸ್‌ನೊಡನೆ ಬೆಳೆದ ಬೇಕನ್ನನ ಸ್ನೇಹ ಒಂದು ದುರಂತ ಕಥೆಯೆ ಆಯಿತು.

1894ರಲ್ಲಿ ಅಟಾರ್ನಿ ಜನರಲ್‌ನ ಸ್ಥಾನವು ಬರಿದಾದಾಗ ಅದನ್ನು ತನ್ನ ಸ್ನೇಹಿತ ಬೇಕನ್ನನಿಗೆ ಕೊಡಿಸಲು ಎಸೆಕ್ಸ್ ಶಕ್ತಿಮೀರಿ ಪ್ರಯತ್ನ ಮಾಡಿದನು. ಅದೇ ಹುದ್ದೆಗೆ ಯತ್ನ ನಡೆಸಿದ್ದ ರಾಬರ್ಟ್ ಸೆಸಿಲನ ಗುಂಪಿನವರಿಗೆ ಬೇಕನ್ನನ ಮೇಲಿದ್ದ ದ್ವೇಷವು ಇನ್ನಷ್ಟು ಹೆಚ್ಚಾಯಿತು.

ಹೀಗಾಗಿ ಎಸೆಕ್ಸ್ ಮಾಡಿದ ಪ್ರಯತ್ನಗಳಿಗೆ ವಿಜಯಶ್ರೀ ಒಲಿಯಲಿಲ್ಲ. ಅಟಾರ್ನಿ ಜನರಲ್‌ನಾಗಿ ಬೇರೊಬ್ಬ ವ್ಯಕ್ತಿ ನೇಮಿಸಲ್ಪಟ್ಟಿರುವನೆಂದು ಕೇಳಿ ಎಸೆಕ್ಸ್‌ನಿಗೆ ಖೇದವಾಯಿತು. ತನ್ನ ಸ್ನೇಹಿತನಿಗಾಗಿ ಏನೂ ಮಾಡಲಾರದೆ ಹೋದೆನಲ್ಲ ಎಂಬ ಕಳವಳದಿಂದ ಎಸೆಕ್ಸ್ ತನ್ನ ಸೋಲಿಗೆ ಪ್ರಾಯಶ್ಚಿತ್ತರೂಪವಾಗಿ ಅತ್ಯಂತ ಉದಾರತನದ ಕೆಲಸ ಮಾಡಿದನು. ಎರಡು ಸಾವಿರ ಪೌಂಡು ಬೆಲೆ ಬಾಳುವ ಆಸ್ತಿಯನ್ನು ಬೇಕನ್ನನಿಗೆ ಎಸೆಕ್ಸ್ ದಾನಮಾಡಿದನು.

ಈ ಸಮಯದಲ್ಲೇ ಬೇಕನ್ ಪ್ರತಿಭಾನ್ವಿತ ಲೇಖಕನಾಗಿ ಜಗತ್ತಿನ ಮುಂದೆ ಪ್ರಕಾಶಕ್ಕೆ ಬಂದನು. 1597ರಲ್ಲಿ ಅವನ ಪ್ರಬಂಧಗಳು ಪ್ರಕಟವಾದವು. ಈ ಸಣ್ಣ ಕೃತಿಯು ಕೆಲವೇ ತಿಂಗಳುಗಳಲ್ಲಿ ಪುನರ್ಮುದ್ರಿತವಾಯಿತು. ಲ್ಯಾಟಿನ್, ಫ್ರೆಂಚ್ ಮತ್ತು ಇಟಾಲಿಯನ್ ಭಾಷೆಗಳಲ್ಲಿ ಅನುವಾದಗಳೂ ಪ್ರಕಟಿಸಲ್ಪಟ್ಟವು. ಕೀರ್ತಿ ಬೆಳಗಿದರೂ ಬೇಕನ್ನನ ಆರ್ಥಿಕ ಪರಿಸ್ಥಿತಿ ಇನ್ನೂ ತೃಪ್ತಿಕರವಾಗಿರಲಿಲ್ಲ. ಪ್ರತಿಷ್ಠೆಯ ಬೆನ್ನು ಹತ್ತಿದ ಅವನ ದುಂದುಗಾರಿಕೆಗೆ ಮಿತಿಯಿರಲಿಲ್ಲ. ಒಮ್ಮೆ ಮುನ್ನೂರು ಪೌಂಡುಗಳ ಸಾಲಕ್ಕಾಗಿ ಅವನು ಬಂಧನಕ್ಕೊಳಗಾಗಬೇಕಾಯಿತು.

ಬೇಕನ್ ಈಗ ವಿವಾಹಸಂಬಂಧದಿಂದ ಸಂಪತ್ತನ್ನು ಗಳಿಸುವ ಪ್ರಯತ್ನದಲ್ಲಿ ನಿರತನಾಗಿದ್ದನು. ಹ್ಯಾಟನ್ ಎಂಬ ವಿಧವೆಯನ್ನು ಆತ ಒಲಿಸಬೇಕಾಗಿತ್ತು. ಆಕೆಯ ನಡೆನುಡಿಗಳು ಅಸಹ್ಯವಾಗಿದ್ದುವು. ಆದರೆ ಬೇಕನ್ ಅವಳ ಸಂಪತ್ತಿನ ಮೇಲೆ ಕಣ್ಣಿಟ್ಟಿದ್ದನು. ಎಸೆಕ್ಸ್ ತನ್ನ ಸ್ನೇಹಿತನಿಗೋಸ್ಕರವಾಗಿ ಆಕೆಗೆ ಮತ್ತು ಆಕೆಯ ತಾಯಿಗೆ ಪತ್ರಗಳನ್ನು ಬರೆದನು. ಆದರೆ ಬೇಕನ್ನನನ್ನು ತಿರಸ್ಕರಿಸಿದ ಈ ಹೆಣ್ಣು ಅವನ ಇನ್ನೊಬ್ಬ ವೈರಿಯಾದ ಸರ್ ಎಡ್ವರ್ಡ್ ಕೋಕ್‌ನನ್ನು ಮದುವೆಯಾದಳು.

ಇಷ್ಟರಲ್ಲಿ ಎಸೆಕ್ಸ್‌ನ ಭಾಗ್ಯ ಇಳಿಮುಖವಾಗಿತ್ತು. ಜನತೆಯ ದೃಷ್ಟಿಯಲ್ಲಿ ಅವನು ದೊಡ್ಡ ವ್ಯಕ್ತಿಯಾಗಿದ್ದರೂ ರಾಜಕೀಯ ವರ್ತುಲಗಳಲ್ಲಿ ಅವನ ಪ್ರಭಾವ ಕಡಿಮೆಯಾಗಿತ್ತು. ಎಸೆಕ್ಸ್ ಮನಸ್ಸಾಕ್ಷಿಗೆ ವಿರೋಧವಾಗಿ ರಾಣಿಗೆ ತಲೆಬಾಗುವ ವ್ಯಕ್ತಿಯಾಗಿರಲಿಲ್ಲ. ರಾಣಿಯ ಅವಕೃಪೆಗೆ ಪಾತ್ರನಾದ ಆತ

ರಾಣಿಯ ವಿರುದ್ಧ ಒಳಸಂಚು ಹೂಡಿರುವನೆಂಬ ವದಂತಿಯೂ ಬಲವಾಗಿ ಹಬ್ಬಿತು.

ಬೇಕನ್‌ನು ಉಭಯ ಸಂಕಟಕ್ಕೆ ಸಿಲುಕಿದನು. ಎಸೆಕ್ಸ್‌ನ ಪಕ್ಷ ಹಿಡಿದರೆ ಅಧಿಕಾರಿಗಳ ಅಸಂತುಷ್ಟಿಗೆ ಕಾರಣನಾಗುವೆನೆಂದು ಬೇಕನ್ ಭಯದಿಂದ ಗಡಗಡನೆ ನಡುಗಿದನು. ದುಡುಕಬಾರದೆಂದೂ ರಾಣಿಯ ಪ್ರೀತಿಯನ್ನು ಕಳೆದುಕೊಳ್ಳಬಾರದೆಂದೂ ಮಿತ್ರನನ್ನು ಬೇಡಿದನು. ಎಸೆಕ್ಸ್‌ನ ಪರವಾಗಿ ರಾಣಿಯೊಡನೆ ಸಂಧಾನ ನಡೆಸುವ ಪ್ರಯತ್ನ ಮಾಡಿದನು. ಆದರೆ ಇದರಿಂದ ರಾಣಿಯ ಕೃಪೆ ದೂರವಾಗುವ ಚಿಹ್ನೆ ತೋರಿದೊಡನೆಯೇ ಬೇಕನ್ ಮಿತ್ರದ್ರೋಹಕ್ಕೆ ಅಣಿಯಾದನು.

ಎಸೆಕ್ಸ್‌ನನ್ನು ನ್ಯಾಯಾಲಯದ ಮುಂದೆ ತಂದು ನಿಲ್ಲಿಸಿದರು. ಬೇಕನ್ ತನ್ನ ಮಿತ್ರನ ವಿರುದ್ಧ ಸರಕಾರದ ವಕಾಲತ್ತು ವಹಿಸಿದುದು ಮಾತ್ರವಲ್ಲ, ತನ್ನ ಸರ್ವಶಕ್ತಿಯನ್ನು ಎಲ್ಲ ಚಾತುರ್ಯವನ್ನೂ ಮಿತ್ರನ ಸರ್ವನಾಶಕ್ಕಾಗಿ ಉಪಯೋಗಿಸಿದನು. ತನ್ನ ಮಿತ್ರನಿಗೆ ಅತಿ ಹೆಚ್ಚಿನ ಶಿಕ್ಷೆಯಾಗುವಂತೆ ಪ್ರಯತ್ನ ಮಾಡಿದನು. ಎಸೆಕ್ಸ್‌ನಿಗೆ ತನ್ನ ಸ್ನೇಹಿತನ ಈ ವಿಪರೀತ ವಾದದಿಂದ ಕರುಳು ಹಿಚುಕಿದಂತಾಯಿತು. ಆದರೆ ಅಸಹಾಯ ಸ್ಥಿತಿಯಲ್ಲಿ ಅವನೇನೂ ಮಾಡುವಂತಿರಲಿಲ್ಲ. ತಾನು ಶಕ್ತಿ ಮೀರಿ ಯಾವನ ಅಭ್ಯುದಯಕ್ಕಾಗಿ ತನುಮನ ಧನಗಳಿಂದ ಶ್ರಮವನ್ನು ವಹಿಸಿದನೊ ಅಂಥ ಪ್ರಾಣಸ್ನೇಹಿತನ ಅಸಾಮಾನ್ಯ ಪ್ರತಿಭೆಗೆ ಎಸೆಕ್ಸ್ ತನ್ನ ಪ್ರಾಣವನ್ನು ಆಹುತಿಯಾಗಿ ಅರ್ಪಿಸಬೇಕಾಯಿತು.

ಜನರ ಆದರಕ್ಕೆ ಪಾತ್ರನಾದ ಒಬ್ಬ ಮಹಾವ್ಯಕ್ತಿಯ ಮೇಲೆ ಆದ ಭೀಕರ ಶಿಕ್ಷೆ ಲಂಡನ್ನಿನ ವಾತಾವರಣವನ್ನು ಪ್ರಕ್ಷುಬ್ಧಗೊಳಿಸಿತು. ಸರಕಾರದ ವರ್ತನೆಯನ್ನು ಸಮರ್ಥಿಸಿ, ಎಸೆಕ್ಸ್ ಮಾಡಿದ ಅಪಚಾರಗಳನ್ನು ವರ್ಣಿಸಿ ಒಂದು ಪ್ರಕಟಣೆಯನ್ನು ಹೊರಡಿಸುವಂತೆ ರಾಣಿ ಬೇಕನ್ನನಿಗೆ ಹೇಳಿದಳು. ವಾಗ್ವೈಖರಿಯಿಂದ ಮಿತ್ರನ ರಕ್ತವನ್ನು ತೋಯಿಸಿದ ಬೇಕನ್ ಲೇಖನಿಯಿಂದ ಆತನಿಗೆ ಅಂತ್ಯೇಷ್ಟಿಯನ್ನು ಮಾಡಿ ಮುಗಿಸಿದನು.

ಕೆಲವೇ ಸಮಯದಲ್ಲಿ ರಾಣಿ ಕಾಲವಾದಳು. ಜೇಮ್ಸ್ ಪಟ್ಟಕ್ಕೆ ಬಂದನು. ಜೇಮ್ಸ್ ಗಲ್ಲಿಗೇರಿಸಲ್ಪಟ್ಟ ಎಸೆಕ್ಸ್‌ನ ಮೇಲೆ ಸಹಾನುಭೂತಿಯುಳ್ಳವನಾಗಿದ್ದನು. ಎಸ್ಸೆಕ್ಸ್‌ನೊಂದಿಗೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟು



ಜೈಲುವಾಸವನ್ನನುಭವಿಸುತ್ತಿದ್ದ ಲಾರ್ಡ್ ಸೌಥಾಂಪ್ಟನ್ನನನ್ನು ಬಿಡುಗಡೆ ಮಾಡುವಂತೆ ಆವನು ಅಪ್ಪಣೆ ಕೊಡಿಸಿದನು. ಆಗ ತಾನು ವಹಿಸಿದ ಕ್ರೂರ ಪಾತ್ರವನ್ನು ಮರೆಸುವುದ ಕ್ಕಾಗಿ ಬೇಕನ್ ತನ್ನನ್ನು ಕ್ಷಮಿಸುವಂತೆ ಸೌಥಾಂಪ್ಟನ್ನನಿಗೆ ದೈನ್ಯದಿಂದ ಪತ್ರ ಬರೆ ದನು. ತನ್ನ ಹೊಸ ಸ್ವಾಮಿಯ ಆದರವನ್ನು ಗಳಿಸುವುದಕ್ಕೆ ಬೇಕನ್ ತನ್ನ ಚಾತುರ್ಯವ ನ್ನೆಲ್ಲ ವಿನಿಯೋಗಿಸಿದನು. ಪಟ್ಟಾಭಿಷೇಕದ ದಿನ 'ನೈಟ್' ಪದವಿಯನ್ನು ಪಡೆದ ನೂರು ಮಂದಿಯಲ್ಲಿ ಬೇಕನ್ ಒಬ್ಬನಾಗಿದ್ದನು! ಕೆಲವೇ ಸಮಯದಲ್ಲಿ ಊರ ಮುಖ್ಯಸ್ಥ ನೊಬ್ಬನ ಮಗಳ ಮದುವೆಯಾದನು.

ಪ್ರಕ್ಷುಬ್ಧ ರಾಜಕೀಯ ಜೀವನದ ಮಧ್ಯ ದಲ್ಲಿ ಬೇಕನ್ನನ ಪ್ರಶಾಂತ ದಾರ್ಶನಿಕ ಸಾಹಿತ್ಯ ಎಡೆಬಿಡದೆ ಸಾಗಿತ್ತು. 1605ರಲ್ಲಿ "ಜ್ಞಾನದ ಮುನ್ನಡೆ" 1609ರಲ್ಲಿ "ಪ್ರಾಚೀನರ ಪ್ರತಿಭೆ" ಪ್ರಕಟವಾದವು. 1612ರಲ್ಲಿ "ಪ್ರಬಂಧ" ಗಳ ಹೊಸ ಆವೃತ್ತಿ ಪ್ರಕಾಶಕ್ಕೆ ಬಂತು.

1604ರಲ್ಲಿ ಬೇಕನ್ ರಾಜನ ಸಲಹೆಗಾರನಾ ಗಿಯೂ 1607ರಲ್ಲಿ ಸೊಲಿಸಿಟರ್ ಜನರಲ್ ನಾಗಿಯೂ 1612ರಲ್ಲಿ ಅಟಾರ್ನಿ ಜನರಲ್‌ನಾ ಗಿಯೂ ನೇಮಕಹೊಂದಿದನು.

ತನಗೆ ಲಭಿಸಿದ ಪದವಿಯನ್ನು ಯೋಗ್ಯ ರೀತಿಯಲ್ಲಿ ಉಪಯೋಗಿಸುವ ಒಳ್ಳೆಯತನ ವನ್ನು ಬೇಕನ್ ತೋರಲಿಲ್ಲ. ಕಾರ್ಯಸಿದ್ಧಿಯ ಮೇಲೆ ಲಕ್ಷ್ಯವಿಟ್ಟ ಅವನಿಗೆ ನ್ಯಾಯ ನೀತಿ ಗಳು ತುಚ್ಛವಾಗಿದ್ದವು. ಪೀಚಮ್ ಎಂಬ ವೃದ್ಧ ಪಾದ್ರಿಯೊಬ್ಬನ ಮೇಲೆ ದೇಶದ್ರೋ ಹದ ಆಪಾದನೆಯನ್ನು ಹೊರಿಸಿ ನ್ಯಾಯಾಲ ಯಕ್ಕೆ ತಂದಿದ್ದರು. ಅವನ ಮೇಲೆ ಖಚಿತ ಪ್ರಮಾಣಗಳಿರಲಿಲ್ಲ. ಆದರೆ ಶಿಕ್ಷೆ ಕೊಡಿಸಲು ಬೇಕಾದ ಕಾನೂನುಗಳನ್ನಾಗಲಿ ಆಧಾರವನ್ನಾ ಗಲಿ ತರ್ಕಪ್ರೌಢಿಮೆಯನ್ನಾಗಲಿ ಒದಗಿಸಿ- ಕೊಡುವುದು ಬೇಕನ್ನನ ಬುದ್ಧಿವಂತಿಕೆಗೆ ನಿಲು ಕದ ವಿಚಾರವಾಗಿರಲಿಲ್ಲ. ನ್ಯಾಯಾಧೀಶರೂ




...ಅದಕ್ಕೇ ಇಲ್ಲಿಗೆ ಸ್ಯಾಂಪಲ್‌ಪೀಸ್ ಹಾಕ್ಕೊಂಡೇ ಬಂದಿದ್ರು... ...

ಳಗೆ ಮೂವರನ್ನು ಬೇಕನ್ ಗುಪ್ತಸಂಧಾನ ನಡೆಸಿ ಒಲಿಸಿದನು. ನಾಲ್ಕನೆಯವನಾದ ಕೋಕ್ ಮಾತ್ರ ಕೋರ್ಟಿನ ಮುಂದೆ ತೀರ್ಮಾನಕ್ಕೆ ಬರಲಿರುವ ವ್ಯಾಜ್ಯದ ವಿಚಾರ ವಾಗಿ ವಕೀಲನೊಬ್ಬನು ನ್ಯಾಯಾಧೀಶರೊಂ ದಿಗೆ ಸಂಧಾನ ನಡೆಸುವುದು ನ್ಯಾಯಬಾಹಿರ ವಾದುದೆಂದು ಬಲವಾಗಿ ವಿರೋಧಿಸಿದನು. ಆದರೆ ತನ್ನ ಚಾತುರ್ಯವನ್ನು ಉಪಯೋ ಗಿಸಿ, ಅರಸನಿಗೆ ಪತ್ರವನ್ನು ಬರೆದು, ಕೋಕ್ ಕೂಡ ಶಿಕ್ಷೆಗೆ ಒಪ್ಪುವಂತೆ ಮಾಡಿದ ಸಾಹಸ ಮತ್ತು ಕೀರ್ತಿ ಬೇಕನ್ನನಿಗೆ ಸಲ್ಲುತ್ತದೆ. ಪೀಚಮ್ ತನ್ನ ಉಳಿದ ಆಯುಸ್ಸನ್ನು ಕಾರಾ ಗೃಹದ ಸರಳುಗಳ ಹಿಂದೆ ಕಳೆಯ ಬೇಕಾಯಿತು.

1616ರಲ್ಲಿ ಪ್ರಿವಿ ಕೌನ್ಸಿಲಿನ ನ್ಯಾಯಾಧೀಶ ನಾಗಿಯೂ 1617ರಲ್ಲಿ ಮುಖ್ಯ ನ್ಯಾಯಾಧೀಶ ನಾಗಿಯೂ ಬೇಕನ್ ಅಧಿಕಾರದ ಮೆಟ್ಟಿಲನ್ನು ಏರುತ್ತ ಹೋದನು.

ಅವನ ಭಾಗ್ಯ ದಿನೇ ದಿನೇ ವರ್ಧಿಸು




ಹಳೇ ಬಟ್ಟೆಗೆ ಪಾತ್ರೆ ಕೊಡ್ತೀವಿ ಅಂತಾ ಇಲ್ಲಿ ಬೋರ್ಡು ಹಾಕಿದ್ರು... ಮನೆಗೆ ಹೋಗಿ ಹಳೇ ಬಟ್ಟೆ ತರೋಕ್ಕೆ ಟೈಂ ಇಲ್ಲಲ್ಲಾ... ಅದಕ್ಕೆ...

ತ್ತಿತ್ತು. ನ್ಯಾಯಾಧೀಶನಾಗಿದ್ದ ಬೇಕನ್ ಛಾನ್ಸೆಲರ್ ಪದವಿಯನ್ನೇರಿದನು. ಹೂದೋಟವನ್ನು ಲಾಲಿಸುವುದು, ಸಾಹಿತ್ಯವನ್ನೋದುವುದು ಇತ್ಯಾದಿ ಮನೋರಂಜನೆಯೊಂದಿಗೆ ಆತನ ಸುಖಮಯ ಜೀವನ ಸಾಗಿತ್ತು.

ಆಮೇಲೆ ಒಮ್ಮೆಲೆ ದುರ್ವಿಧಿ ಅವನ ಮೇಲೆ ತಿರುಗಿ ಬಿತ್ತು. ನ್ಯಾಯಾಲಯಗಳಲ್ಲಿ ನಡೆಯುತ್ತಿದ್ದ ವಂಚನೆಗಳ ಬಗ್ಗೆ ವಿಚಾರಣೆ ನಡೆಸಲು ನೇಮಕವಾಗಿದ್ದ ಪಾರ್ಲಿಮೆಂಟ್ ಸದಸ್ಯರ ಸಮಿತಿ ಕೌತುಕವನ್ನುಂಟುಮಾಡುವ ಹಲವಾರು ವಿಚಾರಗಳನ್ನು ಬಯಲಿಗೆಳೆಯಿತು. ಲಾರ್ಡ್ ಛಾನ್ಸೆಲರ್ ಬೇಕನ್ ತೆಗೆದುಕೊಂಡ ಲಂಚಗಳ ಒಂದು ಪಟ್ಟಿ ತಯಾರಾಗಿತ್ತು. ಆಬ್ರೇ ಎಂಬ ವ್ಯಕ್ತಿ ತನ್ನ ಒಂದು ವ್ಯಾಜ್ಯದಲ್ಲಿ ನ್ಯಾಯಾಲಯದ ವಿಲಂಬದಿಂದ ಕಂಗೆಟ್ಟಿದ್ದನು. ಛಾನ್ಸೆಲರನಿಗೆ ನೂರು ಪೌಂಡುಗಳನ್ನು ಕಾಣಿಕೆಯಾಗಿ ಇತ್ತರೆ ಕಾರ್ಯವು ಶೀಘ್ರವಾಗಿ ಕೈಗೂಡುವುದೆಂಬ ಸೂಚನೆ ಬಂತು. ಬಡ ಆಬ್ರೇ ಸಾಲ ಮಾಡಿ

ಸಮರ್ಪಿಸಿದನು. ಆದರೆ ನೆನೆಸಿದಂತೆ ಆತನ ಕಾರ್ಯವು ನೆರವೇರಲಿಲ್ಲ. ಇನ್ನಷ್ಟು ವಿಳಂಬವಾದ ಮೇಲೆ ಅವನಿಗೆ ಪ್ರತಿಕೂಲವಾದ ತೀರ್ಮಾನ ಕೋರ್ಟಿನಿಂದ ಹೊರಟಿತು. ಇನ್ನೊಬ್ಬ ಬಡಪಾಯಿ ಎಗರ್ಟನ್‌ಗೆ ನಾನ್ನೂರು ಪೌಂಡುಗಳ ಕಾಣಿಕೆಯನ್ನು ನೀಡಬೇಕೆಂದು ಛಾನ್ಸೆಲರನ ನಿಕಟವರ್ತಿಗಳ ನಿರ್ದೇಶನ ಬಂದಿತ್ತು. ಆದರೆ ತೀರ್ಮಾನದ ಸಮಯ ಈತನಿಗೂ ತಿರುನಾಮವೇ ಗತಿಯಾಯಿತು.

ಬೇಕನ್ನನ ವಿಚಾರಣೆ ನಡೆಸಲು ಪಾರ್ಲಿಮೆಂಟಿನ ಹದಿನೆಂಟು ಸದಸ್ಯರ ಸಮಿತಿ ಏರ್ಪಟ್ಟಿತು. ಬೇಕನ್ ಜನರಿಗೆ ಮುಖ ತೋರಿಸಲಾರದೆ ನಿವಾಸಕ್ಕೆ ತೆರಳಿ, ಬಾಗಿಲುಗಳನ್ನು ಭದ್ರಗೊಳಿಸಿ ನಿಶ್ಚೇತನನಾಗಿ ಹಾಸಿಗೆಯಲ್ಲಿ ಹೊರಳಾಡಿದನು. ಬೇಕನ್ನನು ಮಾಡಿದ ಇನ್ನೂ ಹಲವಾರು ವಂಚನೆಗಳು ಬಯಲಿಗೆ ಬಂದವು. ಬೇರೆ ದಾರಿ ಕಾಣದೆ ಬೇಕನ್ ತನ್ನ ಮೇಲೆ ಮಾಡಲ್ಪಟ್ಟ ಆಪಾದನೆಗಳೆಲ್ಲ ನಿಜವಾದುವೆಂದೂ ತಾನು ಅಪರಾಧಿಯೆಂದು ಒಪ್ಪಿಕೊಳ್ಳುವೆನೆಂದೂ ಸಾರಿದನು. ತೀರ್ಮಾನವಾಗುವ ವೇಳೆ ವಿಶೇಷವಾಗಿ ನಿಶ್ಯಕ್ತನಾದುದರಿಂದ ಅವನನ್ನು ಸಭಾಭವನಕ್ಕೆ ಕರೆತರಲಾಗಲಿಲ್ಲ. ಬೇಕನ್ ನಲ್ವತ್ತು ಸಾವಿರ ಪೌಂಡುಗಳ ದಂಡ ತೆರಬೇಕೆಂದೂ ರಾಜನ ಇಚ್ಛೆಯ ಮೇರೆಗೆ ಜೈಲುವಾಸವನ್ನನುಭವಿಸಬೇಕೆಂದೂ ತೀರ್ಮಾನವಾಯಿತು. ಅವನು ಸರಕಾರದ ಹುದ್ದೆಗಾಗಲಿ ಪಾರ್ಲಿಮೆಂಟ್ ಸದಸ್ಯತನಕ್ಕಾಗಲಿ ಅನರ್ಹನೆಂದು ಸಾರಲಾಯಿತು. ಅಪ್ರತಿಮ ಮೇಧಾವಿಯ ಉನ್ನತ ಪದವಿ ಅತ್ಯಂತ ಅವಮಾನಕರವಾದ ಸನ್ನಿವೇಶದಲ್ಲಿ ಸಮಾಪ್ತವಾಯಿತು.

ಎರಡೇ ದಿನಗಳಲ್ಲಿ ಬೇಕನ್ನನನ್ನು ಬಂಧನದಿಂದ ಬಿಡುಗಡೆಗೊಳಿಸಿದರು. ದಂಡದ ಹಣವನ್ನು ರಾಜನ ಖಜಾನೆಯಿಂದ ಕೊಡಿಸಲಾ

ಯಿತು. ಪಾರ್ಲಿಮೆಂಟ್ ಸದಸ್ಯನಾಗಲೂ ಅನುಮತಿಯನ್ನೀಯಲಾಯಿತು. ಆದರೆ ಅವಮಾನದ ಹೊರೆಯನ್ನು ಸಹಿಸಲಾರದ ಬೇಕನ್ ಪಾರ್ಲಿಮೆಂಟಿನ ಕಡೆ ಇಣಿಕಿ ನೋಡಲಿಲ್ಲ. ಸರಕಾರ ಅವನಿಗೆ ಇನ್ನೂರು ಪೌಂಡು ವಿರಾಮವೇತನವನ್ನು ಮಂಜೂರು ಮಾಡಿತು. ಆದರೆ ಬೇಕನ್ನನ ವಿಲಾಸ ಜೀವನಕ್ಕೆ ಈ ಹಣ ಸಾಕಾಗುತ್ತಿರಲಿಲ್ಲ. ಕೊನೆಯ ದಿನಗಳಲ್ಲಿ ಹೆಂಡತಿಯ ನಡತೆ ಅವನಿಗೆ ಒಗ್ಗುತ್ತಿರಲಿಲ್ಲವೆಂದು ತಿಳಿಯುತ್ತದೆ.

ಹಣದ ತೊಂದರೆಯಿಂದಾಗಲಿ ಗೃಹತಾಪತ್ರಯದಿಂದಾಗಲಿ ಬೇಕನ್ನನ ಪ್ರತಿಭೆ ಕುಂಠಿತವಾಗಲಿಲ್ಲ. ಜೀವನದ ಕೊನೆಯ ದಿನಗಳಲ್ಲಿ ಹಲವಾರು ಮಾನಸಿಕ ಗೊಂದಲಗಳ ಮಧ್ಯೆ ಇಂದಿಗೂ ಖ್ಯಾತನಾಗಿರುವ ಅವನ ಹಲವು ಗ್ರಂಥಗಳು ಪ್ರಕಟವಾದವು.

ಬೇಕನ್ನನ ಮರಣದ ಸನ್ನಿವೇಶ ಅರ್ಥಗರ್ಭಿತವಾಗಿದೆ. ಹಿಮದಲ್ಲಿಟ್ಟ ವಸ್ತು ಕೊಳೆಯಲಾರದೆಂಬುದನ್ನು ಪರೀಕ್ಷಿಸುವುದಕ್ಕಾಗಿ ಒಂದು ದಿನ ಒಂದು ಕೋಳಿಯನ್ನು ಕೊಂಡುಕೊಂಡು ಬೇಕನ್ ಅದನ್ನು ಹಿಮದಲ್ಲಿ ಹೂತಿಟ್ಟನು. ಇಷ್ಟರಲ್ಲಿ ಅವನ ದೇಹಕ್ಕೆ ಚಳಿಯ ಆಘಾತವುಂಟಾಯಿತು; ಅಂಗಾಂಗಗಳು ಮುದುಡಿಕೊಂಡವು. ಅವನನ್ನು ಹತ್ತಿರದ ಮನೆಗೆ ಒಯ್ಯಲಾಯಿತು. ಮನೆಯವರು ಅವನನ್ನು ಪ್ರೀತಿಯಿಂದ ನೋಡಿಕೊಂಡರು. ಅಲ್ಲಿ ಒಂದು ವಾರದ ಕಾಲ ಹಾಸಿಗೆಯಲ್ಲಿ ಮಲಗಿದ್ದು ಬೇಕನ್ 1626 ಎಪ್ರಿಲ್ 9ರಂದು ಪ್ರಾತಃಕಾಲ ಇಹಲೋಕದಿಂದ ಕಣ್ಮರೆಯಾದನು. ಪ್ರಾಯೋಗಿಕ ವಿಜ್ಞಾನದ ಋಷಿ ಪ್ರಯೋಗದ ದೆಸೆಯಿಂದಲೇ ಮುಗಿದು ಹೋದನು.

ಬೇಕನ್ ಜೀವಿಸಿದ ಕಾಲ ಮಾನವನ ಇತಿಹಾಸದಲ್ಲೇ ಸಂಧಿಕಾಲ. ಕಾಪರ್ನಿಕಸ್, ಗೆಲಿಲಿಯೋ ಮೊದಲಾದ ಖಗೋಲ ಶಾಸ್ತ್ರಜ್ಞರು ಮತಗಳು ಪ್ರತಿಪಾದಿಸುತ್ತ ಬಂದಿದ್ದ ಪ್ರಪಂಚದ ಸ್ವರೂಪವನ್ನೇ ಸುಳ್ಳುಗಳೆದಿದ್ದರು. ಕಾಗದ, ಮುದ್ರಣ, ನಾವಿಕರ ದಿಕ್ಚಕ್ರ, ಸಿಡಿಮದ್ದು, ಮೊದಲಾದವು ಜನಜೀವನದಲ್ಲೊಂದು ಕ್ರಾಂತಿ ಎಬ್ಬಿಸಿದ್ದವು. ಪೋಪ್ ಗುರುಗಳ ಸರ್ವಾಧಿಕಾರದ ವಿರುದ್ಧ ಎದ್ದ ಪ್ರೊಟೆಸ್ಟೆಂಟ್ ಪಂಥಗಳು. ಇಂಗ್ಲಂಡ್, ಜರ್ಮನಿಗಳಲ್ಲಿ ಧಾರ್ಮಿಕ ಕ್ರಾಂತಿಯನ್ನುಂಟುಮಾಡಿದ್ದವು. ಜನರ ಮೂಢನಂಬಿಕೆಗಳ ತಳವೇ ಸಡಿಲಾಗಿ ಪಾಶ್ಚಾತ್ಯ ಜಗತ್ತು ವೈಚಾರಿಕ ಅರಾಜಕತೆಯಲ್ಲಿ ಮುಳುಗಿತ್ತು. ಇಂಥ ವಿಷಮ ಸ್ಥಿತಿಯಿಂದ ಜಗತ್ತನ್ನು ತನ್ನ ಸ್ವಚ್ಛವಾದ ವಿಚಾರ ಹಾಗು ಕ್ರಮಬದ್ಧ ದರ್ಶನದ ಮೂಲಕ ಉದ್ಧರಿಸಿದ ಕೀರ್ತಿ ಬೇಕನ್ನನಿಗೆ ಸೇರಿದ್ದು.

ಈ ಮಹಾಸಂಧಿಕಾಲದ ಸೂತ್ರಧಾರನಾದ ಬೇಕನ್ನನ ಪಾತ್ರವನ್ನು ಮುಂದಿನ ಜನತೆಗೆ ತಿಳಿಸಿಕೊಡಲು ಸಾಕ್ಷೀಭೂತವಾಗಿ ಉಳಿದವುಗಳು ಅವನ ಅಮೂಲ್ಯವಾದ ಕೃತಿಗಳು. ಬೇಕನ್ನನ ಪ್ರತಿಯೊಂದು ವಾಕ್ಯವೂ ಇಂದು ಮನೆಮನೆಗಳಲ್ಲಿ ಗಾದೆಯ ಮಾತಾಗಿದೆ; ಪ್ರತಿಯೊಂದು ಅಕ್ಷರದಲ್ಲಿಯೂ ಅನುಭವವು



ತುಂಬಿ ತುಳುಕಾಡುತ್ತಿದೆ. "ಕೆಲವು ಪುಸ್ತಕಗಳನ್ನು ರುಚಿ ನೋಡಿದರೆ ಸಾಕು, ಕೆಲವು ಪುಸ್ತಕಗಳನ್ನು ನುಂಗಿಬಿಡಬೇಕು. ಇನ್ನು ಕೆಲವು ಪುಸ್ತಕಗಳನ್ನು ಚೆನ್ನಾಗಿ ಜಗಿದು ಅರಗಿಸಿಕೊಳ್ಳಬೇಕು" ಎಂದು ಬೇಕನ್ ಹೇಳುತ್ತಾನೆ. ಬೇಕನ್ನನ ಗ್ರಂಥಗಳು ನಿಶ್ಚಯವಾಗಿಯೂ ಕೊನೆಯ ಸಾಲಿಗೆ ಸೇರಿದವು.

'ಫಲ' ಮತ್ತು 'ಪ್ರಗತಿ' ಎಂಬೆರಡು ಪದಗಳು 'ಬೇಕನ್ ದರ್ಶನ'ವನ್ನು ಪ್ರತಿನಿಧೀಕರಿಸುತ್ತವೆ. ಪ್ರಾಚೀನ ತಾತ್ವಿಕರು ತಮ್ಮ ಸಿದ್ಧಾಂತಗಳಲ್ಲಿ ಫಲಕ್ಕಾಗಲಿ ಪ್ರಗತಿಗಾಗಲಿ ಯಾವ ಸ್ಥಾನವನ್ನೂ ಕೊಡಲಿಲ್ಲ. ಅಂಕಗಣಿತದ ಉಪಯೋಗ ಅಂಗಡಿಯಲ್ಲಿ ಸಾಮಾನು ಕೊಂಡುಕೊಳ್ಳುವುದಕ್ಕೆ ಎಂದು ಪ್ಲೇಟೋ ಒಪ್ಪಿಕೊಳ್ಳಲಿಲ್ಲ. ದೃಶ್ಯಪ್ರಪಂಚದಿಂದ ಮನಸ್ಸನ್ನು ಉಪಸಂಹರಿಸಿ ಅವ್ಯಕ್ತದಲ್ಲಿ ಲೀನಗೊಳಿಸುವುದೇ ಗಣಿತದ ಉದ್ದೇಶ ಎಂಬುದು ಅವನ ತತ್ವವಾಗಿತ್ತು. ರೇಖಾಗಣಿತದ ಸಹಾಯದಿಂದ ಮಾನವನ ಉಪಯೋಗಕ್ಕೆ ಬೇಕಾದ ಯಂತ್ರಗಳನ್ನು ತಯಾರಿಸುವುದು ಶಾಸ್ತ್ರದ ದುರುಪಯೋಗವೆಂಬ ಅಭಿಪ್ರಾಯ ಪ್ರಾಚೀನರಲ್ಲಿ ಸಾಮಾನ್ಯವಾಗಿತ್ತು.

ಈ ತತ್ವವನ್ನು ಬೇಕನ್ ಆಮೂಲಾಗ್ರವಾಗಿ ವಿರೋಧಿಸಿದನು. ಒಂದು ಪ್ರಯೋಜನಾಪೇಕ್ಷೆದರ್ಶನವನ್ನು (Pragmatic Philosophy)ಬೇಕನ್ ಬೋಧಿಸಿದನು. ಜ್ಞಾನಾರ್ಜನೆಯ ಉಪಯೋಗ ಮಾನವನಿಗೆ ನಿಜವಾದ ಪ್ರಯೋಜನವನ್ನು ಕೊಡುವುದರಲ್ಲಿದೆ; ವ್ಯಾವಹಾರಿಕ ಉಪಯೋಗದಲ್ಲಿಯೇ ಜ್ಞಾನದ ಸಾಫಲ್ಯವಿದೆ; ಮಾನವತೆಯ ಹಿತದೃಷ್ಟಿಯೇ ದರ್ಶನದ ಗುರಿಯಾಗಿರಬೇಕು, ಜನರ ಜೀವನ ಸೌಲಭ್ಯಗಳನ್ನು ಹೆಚ್ಚಿಸುವುದು, ಎಲ್ಲರ ಸುಖಕ್ಕಾಗಿ ಶ್ರಮಿಸುವುದು ದರ್ಶನದ ಉದಾತ್ತ ಧ್ಯೇಯ- ಎಂದು ಬೇಕನ್ ಶತಮಾನಗಳಿಂದ ಕತ್ತಲುದಾರಿಯಲ್ಲಿ ಹರಿಯುತ್ತಿದ್ದ ವಿಚಾರಪ್ರವಾಹವನ್ನು ತಿರುಗಿಸಿದನು. ಬರೆಯುವ ಕ್ರಮ ಜ್ಞಾಪಕಶಕ್ತಿಯನ್ನು ಕುಂಠಿತಗೊಳಿಸುವುದರಿಂದ ಹಿತಕರವಲ್ಲ ಎಂದು ಪ್ಲೇಟೋ ಬೋಧಿಸಿದನು. ಆದರೆ ಬೇಕನ್ನನಿಗೆ ಜ್ಞಾಪಕ ಶಕ್ತಿಯ ಪವಾಡಗಳಲ್ಲಿ ಶ್ರದ್ಧೆಯುಂಟಾಗಲಿಲ್ಲ. ಬರೆಯುವ ಕ್ರಮದಿಂದ ಜ್ಞಾನ ಪ್ರಸಾರವಾಗಲು ಅನುಕೂಲವಾಗುತ್ತದೆ; ಅದು ನಮಗೆ ಮುಖ್ಯವಾದುದು. ವೈದ್ಯಶಾಸ್ತ್ರದ ಪ್ರಯೋಜನವನ್ನು ಪ್ಲೇಟೋ ಗಮನಿಸಿರಲಿಲ್ಲ. ವೈದ್ಯನ ಚಾತುರ್ಯದಿಂದ ಹೆಚ್ಚಿದ ಆಯುಸ್ಸು ದೀರ್ಘ ಮರಣಕ್ಕೆ ಸಮಾನ ಎಂದು ಆತ ಹೇಳಿದ್ದನು. ಮಳೆಬಿಸಿಲುಗಳು ಹೇಗೆ ಸಾರ್ವತ್ರಿಕವಾಗಿ ತಮ್ಮ ಕೃಪಾಕಟಾಕ್ಷವನ್ನು ಬೀರುವವೊ ಹಾಗೆಯೇ ವೈದ್ಯಶಾಸ್ತ್ರವು ಅಖಿಲ ಮಾನವತೆಗೆ; ತನ್ನ ಸಹಾಯವನ್ನು ಕೊಡಬೇಕೆಂದು ಬೇಕನ್ ಹೇಳಿದನು. ಮನುಷ್ಯನ ಸುಖ ಹೆಚ್ಚಬೇಕು, ಆಯುಸ್ಸು ಹೆಚ್ಚಬೇಕು, ಇದು ಅವನ ಸಿದ್ಧಾಂತ. ಎಷ್ಟು ಕಷ್ಟ ಸಂಕಷ್ಟ ಅವಮಾನಗಳಿಂದ ನರಳಿದರೂ ಜೀವನದ ರಸಾನುಭವದ ಬಗ್ಗೆ ಬೇಕನ್ ಒಂದಿಷ್ಟೂ ನಿರಾಶಾವಾದಿಯಾಗಿರಲಿಲ್ಲ.




ಒಣ ಪಾಂಡಿತ್ಯವೆಂಬ ಹಳೆಯ ವೃಕ್ಷಕ್ಕೆ ಬೇಕನ್ ಕೊಡಲಿಯೇಟನ್ನು ಹಾಕಿದನು.

ಉಪಯೋಗಕ್ಕೆ ಬಾರದ ಪಾಂಡಿತ್ಯವನ್ನು ಅವನು ತಿರಸ್ಕರಿಸಿದನು. "ವಕ್ರಬುದ್ಧಿಯ ಜನರು ಪಾಂಡಿತ್ಯವನ್ನು ನಿಂದಿಸುತ್ತಾರೆ. ಸರಳ ಬುದ್ಧಿಯ ಜನರು ಪ್ರಶಂಸಿಸುತ್ತಾರೆ, ವಿವೇಕಿಗಳು ಉಪಯೋಗಿಸುತ್ತಾರೆ" ಎಂದು ಬೇಕನ್ ತನ್ನದೇ ಆದ ಮಾರ್ಮಿಕ ಭಾಷೆಯಲ್ಲಿ ಹೇಳುತ್ತಾನೆ.

ಮನುಷ್ಯ ತನ್ನ ಜ್ಞಾನಬಲದಿಂದ ಪ್ರಕೃತಿಯನ್ನೆಲ್ಲ ಜಯಿಸಬಲ್ಲ ಎಂದು ಬೇಕನ್ ಭವಿಷ್ಯವಾಣಿಯನ್ನು ನುಡಿದಿದ್ದಾನೆ. ವಿಜ್ಞಾನ ದೀವಿಗೆಯಿಂದ ಬೆಳಗಲಾರದ ಅಜ್ಞಾತ ವಸ್ತುವಿಲ್ಲ. ಕನಸಾಗಲಿ ನನಸಾಗಲಿ, ಮಾಯೆಯಾಗಲಿ ಇಂದ್ರಜಾಲವಾಗಲಿ, ವಿಜ್ಞಾನದಿಂದ ಭೇದಿಸಿದರೆ ರಹಸ್ಯವನ್ನು ಹೊರಗೆಡಹಬಹುದು. ಕಾರಣವಿಲ್ಲದೆ ಕಾರ್ಯವಿಲ್ಲ; "ಆಕಸ್ಮಿಕವಾದುದು" ಎಂದರೆ "ಇಲ್ಲದಿರುವ ವಸ್ತುವಿನ ಹೆಸರು" ಎಂದು ಬೇಕನ್ ಹೇಳುತ್ತಾನೆ.

ವಿಜ್ಞಾನದ ಕೃಪೆಯಿಂದ ರೂಪುಗೊಂಡ ಒಂದು ಆದರ್ಶ ರಾಜ್ಯಕ್ಕೆ, ಬೇಕನ್ "ನ್ಯೂ ಅಟ್ಲಾಂಟಿಸ್" ಎಂಬ ಗ್ರಂಥದಲ್ಲಿ ತನ್ನ ಓದುಗರನ್ನು ಕರೆದೊಯ್ಯುತ್ತಾನೆ.

ಪೆರುವಿನಿಂದ ಒಂದು ಹಡಗಿನಲ್ಲಿ ಆರೂಢರಾಗಿ ಜಪಾನಿನ ಕಡೆಗೆ ಹೊರಟ ಜನ ದಿಕ್ಕುತಪ್ಪಿ ಸಾಗರದಲ್ಲಿ ತೊಳಲುತ್ತ ಹಸಿವು ರೋಗ ರುಜಿನಗಳಿಂದ ಕಂಗೆಟ್ಟು ಒಂದಾನೊಂದು ಅಜ್ಞಾತ ದ್ವೀಪದಲ್ಲಿಳಿಯುತ್ತಾರೆ. ಅದೇ "ನ್ಯೂ ಅಟ್ಲಾಂಟಿಸ್." ಈ ದ್ವೀಪದಲ್ಲಿ ಇಳಿದು ನೋಡಿದರೆ ಕಂಡುಬರುವುದು ಅನಾಗರಿಕ ಮೂಲ ನಿವಾಸಿಗಳಲ್ಲ, ಸರಳವಾದ ಸುಂದರವಾದ ಶುಭ್ರವಾದ ಉಡುಪನ್ನು ಧರಿಸಿದ ತೇಜಸ್ವಿಗಳಾದ ಜನರು ಈ ದಿಕ್ಕೇಡಿಗಳನ್ನು ಸ್ವಾಗತಿಸುತ್ತಾರೆ. ಆ ದ್ವೀಪದ ಜೀವನವೇ ಆಶ್ಚರ್ಯಕರವಾಗಿರುತ್ತದೆ.

ಇಲ್ಲಿ ಪಾರ್ಲಿಮೆಂಟ್ ಇದೆ. ಆದರೆ ಇತರ ದೇಶಗಳಲ್ಲಿರುವಂತೆ ಇಲ್ಲಿ ಚುನಾವಣೆ ಇಲ್ಲ. ರಾಜಕಾರಣಗಳು, ಪಾರ್ಟಿಗಳು, ಚುನಾವಣಾ ಭಾಷಣಗಳು, ಸುಳ್ಳು, ಮೋಸ ಒಂದನ್ನೂ ಈ ದ್ವೀಪದ ಜನ ಕೇಳಿಯೂ ಕೂಡ ಅರಿಯರು. ಆದರೆ ವಿಜ್ಞಾನದ ದಾರಿಯಲ್ಲಿ ಹೆಸರನ್ನು ಗಳಿಸಿ ರಾಜ್ಯದ ಉನ್ನತ ಪದವಿಯನ್ನು ಹೊಂದಲು ಪ್ರತಿಯೊಬ್ಬ ನಾಗರಿಕನಿಗೂ ಅವಕಾಶವಿದೆ. ಈ ದ್ವೀಪದ ರಾಜ್ಯಭಾರ ಜ್ಞಾನಿಗಳಿಂದ ವಿಜ್ಞಾನಿಗಳಿಂದ ನಡೆಯುತ್ತದೆ. ತಂತ್ರೋದ್ಯಮ, ಖಗೋಳಶಾಸ್ತ್ರ, ಅರ್ಥಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಮನಃಶಾಸ್ತ್ರ, ದರ್ಶನ ಮೊದಲಾದವುಗಳಲ್ಲಿ ಪರಿಣತರಾದ ಜ್ಞಾನಿಗಳು ಆಧುನಿಕ ಹೊಲಸು ರಾಜಕಾರಣದ ಗೊಡವೆಯಿಲ್ಲದೆ ದಕ್ಷತೆಯಿಂದ ಸರಕಾರವನ್ನು ನಡೆಸುತ್ತಾರೆ.

ನಿಜವಾಗಿ ಹೇಳುವುದಾದರೆ ಈ ದ್ವೀಪದಲ್ಲಿ ಸರಕಾರದ ಅವಶ್ಯಕತೆಯೇ ಇಲ್ಲ. ಇಲ್ಲಿನ ಸರಕಾರದ ಕೆಲಸ ಜನರನ್ನು ಆಳುವುದಲ್ಲ, ಪ್ರಕೃತಿಯ ಶಕ್ತಿಗಳನ್ನು ನಿಯಂತ್ರಿಸುವುದು; ಮಾನವನ ಜ್ಞಾನದ ಪರಿಧಿಯನ್ನು ವಿಸ್ತರಿಸುವುದು. ತಮಗೆ ಬೇಕಾದ ವಸ್ತುಗಳನ್ನೆಲ್ಲ ಇಲ್ಲಿಯ ಜನರು ಉತ್ಪಾದಿಸಿಕೊಳ್ಳುತ್ತಾರೆ, ಉತ್ಪಾದಿಸಿದುದನ್ನೆಲ್ಲ ಉಪಯೋಗಿಸುತ್ತಾರೆ. ಹೊರದೇಶಗಳನ್ನು ಯಾವುದಕ್ಕೂ ಅವಲಂಬಿಸಬೇಕಾಗಿಲ್ಲ. ಇಲ್ಲಿಯ ಜನರು ಹೊರದೇಶಗಳಿಗೆ ಹೋಗುವುದು ಜ್ಞಾನದ ಬೆಳಕನ್ನು ಪಸರಿಸುವುದಕ್ಕೆ ಮಾತ್ರ.

ಇದು ಈ ಮಹಾ ದಾರ್ಶನಿಕನು ಕನಸು ಕಂಡ ಆದರ್ಶ ರಾಜ್ಯ!

ಜ್ಞಾನಿಗಳು ಅರಸರಾಗಬೇಕು; ಇಲ್ಲವಾದರೆ ಅರಸರು ಜ್ಞಾನಿಗಳಾಗಬೇಕು ಎಂದು ಪ್ಲೇಟೋ ಸಾರಿದ್ದನು. ಜ್ಞಾನಿಗಳ ಕೈಗೆ ಅಧಿಕಾರ ಬಗಬೇಕು ಎಂಬ ಈ ಕೂಗನ್ನು ಮತ್ತೊಮ್ಮೆ ಬೇಕನ್ ಜಾಗೃತಗೊಳಿಸಿದನು. ಆದರೆ ಇಂದಿನ ಜಗತ್ತು ಅದಕ್ಕೆ ಸಿದ್ಧವಾಗಿದೆಯೆ? ಅಥವಾ ಮುಂದೆ ಸಿದ್ಧವಾಗುವುದೆ?

ಬೇಕನ್ ಬರಿಯ ತಾತ್ವಿಕನೆಂದರೆ ಅಸ-

ಮಂಜಸವಾದೀತು. ಜೀವನದ ದೈನಂದಿನ ಹೋರಾಟದಲ್ಲಿ ಜಯವನ್ನು ಹೇಗೆ ಗಳಿಸಬೇಕು ಎಂಬುದನ್ನೂ ಬೇಕನ್ ಹೇಳಿದ್ದಾನೆ. ಪದವಿಯನ್ನು ಪಡೆಯಲು ಮಿತ್ರರನ್ನು ಉಪಯೋಗಿಸಿಕೊಳ್ಳಬೇಕೆಂಬ ಅವನ ಮಾತಿನಲ್ಲಿ ಅನುಭವದ ತಿರುಳಿದೆ. ಮದುವೆಯಾದ ಮರುದಿನ ಪುರುಷನು ಅನುಭವದಲ್ಲಿ ಏಳು ವರ್ಷಗಳಷ್ಟು ಮುಂದುವರಿದಿರುತ್ತಾನೆ ಎಂದು ಬೇಕನ್ ಮಾರ್ಮಿಕವಾಗಿ ನುಡಿದಿದ್ದಾನೆ.

ಐರೋಪ್ಯ ಜನಾಂಗದ ವಿಚಾರ ಪ್ರವಾಹದಲ್ಲಿ ಬೇಕನ್ನನ ಪ್ರಭಾವ ಅಸಾಧಾರಣವಾದುದು. ಅವನ ವಿಚಾರಗಳು ಹೊಸತೊಂದು ಕ್ರಾಂತಿಯನ್ನುಂಟುಮಾಡಿದುವು. 1662ರಲ್ಲಿ ಮುಂದೆ ಜಗದ್ವಿಖ್ಯಾತವಾಗಲಿದ್ದ ರಾಯಲ್ ಸೊಸೈಟಿ ಸ್ಥಾಪಿಸಲ್ಪಟ್ಟಾಗ ಬೇಕನ್ ಈ ಸಂಸ್ಥೆಯ ಆದರ ವ್ಯಕ್ತಿಯಾಗಿ ಗಣಿಸಲ್ಪಟ್ಟನು. ದಾರ್ಶನಿಕರಲ್ಲಿ ಬೇಕನ್ ಶ್ರೇಷ್ಠತಮನಾದವನೆಂದು ಒಬ್ಬ ಮೇಧಾವಿ ಹೇಳಿದ್ದಾನೆ. ಬೇಕನ್ನನ ಕೃತಿಗಳು ಸರಕಾರದ ಖರ್ಚಿನಿಂದ ಪ್ರಕಟಿಸಲ್ಪಟ್ಟವು. ಹದಿನೇಳನೆಯ ಶತಮಾನದಿಂದ ಸಮಗ್ರ ಆಂಗ್ಲ ವಿಚಾರಪ್ರವಾಹವು ಬೇಕನ್ ತೋರಿದ ಹಾದಿಯಲ್ಲಿ ಹರಿಯಿತು. ಹಾಬ್ಸ್, ಲಾಕ್, ಬೆಂತಮ್ ಮೊದಲಾದ ಲೇಖಕರ ಕೃತಿಗಳಲ್ಲಿ ಬೇಕನ್‌ನ ಪ್ರಭಾವವನ್ನು ಸುಲಭವಾಗಿ ಗುರುತಿಸಬಹುದು.

ಬೇಕನ್ ಇಹಲೋಕವನ್ನು ತ್ಯಜಿಸುವ ಮೊದಲು ಹೃದಯಸ್ಪರ್ಶಿಯಾದ ಮಾತನ್ನು ಬರೆದಿದ್ದಾನೆ:

''ನನ್ನ ಆತ್ಮವನ್ನು ದೇವರಿಗೆ ಅರ್ಪಿಸಿದ್ದೇನೆ. ಶರೀರವನ್ನು ಆಡಂಬರವಿಲ್ಲದೆ ಹೂಳಿಡುವುದು. ನನ್ನ ಕೀರ್ತಿ ಮತ್ತು ನನ್ನ ಸ್ಮರಣೆಯನ್ನು ಜನರ ಔದಾರ್ಯದ ಆಸರೆಯಲ್ಲಿ, ವಿದೇಶದ ಜನತೆಯಲ್ಲಿ ಕಾಲಪುರುಷನ ಅಡಿಗಳಲ್ಲಿ ಅರ್ಪಿಸಿದ್ದೇನೆ.''

## ಕಾರ್ಬೋನೇಟೆಡ್ ಹಾಲು

*ಶೀಸೆಗಳಲ್ಲಿ ತುಂಬುವುದು, ಪ್ಯಾಶ್ಚರೈಸ್ ಮಾಡುವುದು, ವಿಟಮಿನ್ 'ಡಿ' ಸೇರಿಸುವುದು, ಕೊಬ್ಬು ಬೇರ್ಪಡಿಸುವುದು, ಹುಡಿ ತಯಾರಿಸುವುದು, ಪರಿಮಳವಿತ್ತು ಪ್ಲಾಸ್ಟಿಕ್ ಕರಂಡಕಗಳಲ್ಲಿ ತುಂಬುವುದು ಹೀಗೆ ಹಾಲನ್ನು ಸಂಸ್ಕರಿಸಿ ಉಪಯೋಗಿಸಲು ಹಲವಾರು ವಿಧಾನಗಳನ್ನು ಬಳಸಲಾಗುತ್ತಿದೆ.*

*ಇದೀಗ ಹಾಲನ್ನು ಕಾರ್ಬೋನೇಟ್‌ಗೊಳಿಸುವ ಮೂಲಕ ಕುಡಿಯಲು ಕಾದಿಡುವ ವಿಧಾನವನ್ನು ಕಂಡು ಹಿಡಿಯಲಾಗಿದೆ. ಈ ವಿಧಾನದ ಮೂಲಕ ಕೃತಕ ಸ್ಟ್ರಾಬೆರಿ ಸ್ವಾದದೊಂದಿಗೆ ಅಥವಾ ಶೋಧಿಸಿದ ಏಪ್ರಿಕಾಟ್ ಹಣ್ಣಿನ ರಸದೊಂದಿಗೆ ಹೀಗೆ ಎರಡು ರೀತಿಯ ಪಾನೀಯಗಳನ್ನು ತಯಾರಿಸಲಾಗುತ್ತಿದೆ.*

*ಕೊಬ್ಬು ತೆಗೆದ ಹಾಲಿನ ಹುಡಿ, ನೀರು, ಏಪ್ರಿಕಾಟ್ ಹಣ್ಣಿನ ರಸ ಮತ್ತಿತರ ವಸ್ತುಗಳನ್ನು ಮಿಶ್ರಗೊಳಿಸಿ ಕಾರ್ಬನ್ ಡೈಆಕ್ಸೈಡ್‌ನ್ನು ಬುರುಗು ವಿಧಾನದಲ್ಲಿ ಪ್ರವಹಿಸಿ ಆ ಮಿಶ್ರಣವನ್ನು ಒತ್ತಡದಲ್ಲಿರಿಸಿ, ಶೀಸೆಗಳಲ್ಲಿ ತುಂಬಿಸಿ ನೇರವಾಗಿ ಮಾರುಕಟ್ಟೆಗೆ ಕಳಿಸಲಾಗುತ್ತಿದೆ.*

*ಇತರ ಕಾರ್ಬೋನೇಟೆಡ್ ಪಾನೀಯಗಳಂತೆ ರುಚಿಕರವಾಗಿರುವ ಈ 'ಕಾರ್ಬೋನೇಟೆಡ್ ಹಾಲು' ಕ್ಯಾಲ್ಸಿಯಂ, ಪ್ರೋಟೀನ್ ಹಾಗೂ ವಿಟಮಿನ್ 'ಸಿ'ಗಳನ್ನು ಒಳಗೊಂಡಿರುವುದರಿಂದ ಆರೋಗ್ಯಕ್ಕೂ ಉತ್ತಮವೆನಿಸಿದೆ.*

*– ಧನಂಜಯ ಮೂಡಬಿದಿರೆ*

ಸತ್ಯ ಘಟನೆ

# ನಲವತ್ತು ಸಾವಿರ ಜನರ ಅಗ್ನಿಸಮಾಧಿ

"ಸವ್ಯಸಾಚಿ"

**1932**ರ ಬೇಸಗೆ ಕಾಲ. ವೆಸ್ಟ್ ಇಂಡೀಜಿನ ಮಾರ್ಟೆನಿಕ್ ದ್ವೀಪದಲ್ಲಿ ಪಿಲೇ ಪರ್ವತದ ತಪ್ಪಲಿನ ಅಡಿಯಲ್ಲಿದ್ದ ಮಣ್ಣಿನ ರಸ್ತೆಯ ಮೇಲೆ ಅಲ್ಲಿಯ ಸಕ್ಕರೆ ಕಾರ್ಖಾನೆಯ ಮಾಲಿಕ ಫರ್ನಾಂಡನ ಕುದುರೆಗಾಡಿ ವೇಗವಾಗಿ ಸಾಗುತ್ತಿತ್ತು. ಆತ ಪಿಲೇಯ ಇಳಿಜಾರಿನಲ್ಲಿದ್ದ ವಿವೇಗಾಂವ್‌ದಲ್ಲಿ ತನ್ನ ಹೊಲ ನೋಡಲು ಹೋಗುತ್ತಿದ್ದ.

ಆಕಸ್ಮಾತ್ತಾಗಿ ಅವನು ಕುದುರೆಯ ಕಡಿವಾಣವನ್ನೆಳೆದ. ವೇಗವಾಗಿ ಓಡುತ್ತಿದ್ದ ಕುದುರೆಗಳೆರಡೂ ಗಕ್ಕನೆ ನಿಂತವು. ಫರ್ನಾಂಡನ ದೃಷ್ಟಿ ಪಿಲೇ ಪರ್ವತದ 4500 ಅಡಿ ಎತ್ತರದ ಶಿಖರದತ್ತ ಹೊರಳಿದಾಗ ಅಲ್ಲಿಂದ ಹೊಗೆಯ ತೆಳುರೇಖೆ ಮೇಲೇರುತ್ತಿರುವುದು ಕಾಣಿಸಿತು. ಒಡನೆಯೇ ಎಷ್ಟೋ ಸಂಗತಿಗಳು ಅವನ ಮಿದುಳಿನಲ್ಲಿ ಸುಳಿದಾಡಿದವು. ಮೌಂಟ್ ಪಿಲೇಯ ಹೊಟ್ಟೆಯಲ್ಲಿ ನಿದ್ರಿಸುತ್ತಿದ್ದ ಜ್ವಾಲಾಮುಖಿ ಮೆಲ್ಲಮೆಲ್ಲನೆ ಕಣ್ಣು ತೆರೆಯುತ್ತಿದೆ ಎಂಬುದು ಅವನ ಗಮನಕ್ಕೆ ಬಾರದಿರಲಿಲ್ಲ.

ಹಿಂದೆ ಜ್ವಾಲಾಮುಖಿ ಸಿಡಿದೆದ್ದಾಗ, ಅದರ ಬಾಯಿಯಿಂದ ಹೊರಟ ಲಾವಾರಸ ಇಳಿಜಾರು ಪ್ರದೇಶದ ಮನೆಗಳ ಜೊತೆಗೆ ನಳನಳಿಸುವ ಬೆಳೆಯನ್ನು ನುಂಗಿ ಬಿಟ್ಟಿತ್ತು. ಆದರೆ ಇದು ಬಹುಕಾಲದ ಹಿಂದಿನ ಮಾತು. ಇಂದು ಆ ಪ್ರದೇಶ ಕೆಳಗಿನಿಂದ ಮೇಲಿನವರೆಗೆ ಹಸುರಿನಿಂದ ಕಂಗೊಳಿಸುತ್ತಿದೆ. 4500 ಅಡಿ ಎತ್ತರದ ಆ ಶಿಖರದ ಮೇಲೆ ಸುಂದರ ಸರೋವರವೊಂದು ನಿರ್ಮಾಣಗೊಂಡಿತ್ತು. ಸರೋವರದ ಸುತ್ತಲೂ ಎತ್ತರವಾದ ತಾಳೆ ಮರಗಳು ನಿಬಿಡವಾಗಿ ಬೆಳೆದಿದ್ದವು. ಸರೋವರ ಹಾಗೂ ಅದರ ಅಕ್ಕಪಕ್ಕದ ಪ್ರದೇಶ ಪ್ರವಾಸಿಗರನ್ನು ಆಕರ್ಷಿಸುತ್ತಿತ್ತು.

ಫರ್ನಾಂಡ್ ಮರುದಿನ ಬೆಳಿಗ್ಗೆ ನೋಡಿದಾಗ ಮೌಂಟ್ ಪಿಲೇಯ ಶಿಖರದ ಸುತ್ತ ಬಿಳಿ ಹೊಗೆ ದಟ್ಟೈಸಿದುದು ಕಾಣಿಸಿತು. ಎರಡು ದಿನಗಳಲ್ಲೇ ಪರಿಸ್ಥಿತಿ ಸಾಕಷ್ಟು ಬದಲಾಯಿತು. ಬಿಳಿ ಮೋಡ ಮೆಲ್ಲಮೆಲ್ಲನೆ ಕಪ್ಪು ಬಣ್ಣಕ್ಕೆ ತಿರುಗುತ್ತಿತ್ತು. ಈಗ ಆ ಸರೋವರವಾಗಲಿ ಅದರ ಸುತ್ತಮುತ್ತಲಿನ ಹಸಿರಾಗಲಿ ಕಾಣಿಸುತ್ತಿರಲಿಲ್ಲ. ಕಪ್ಪು ಬೂದಿ ಅವನ್ನು ನುಂಗಿ ಹಾಕಿತ್ತು. ಆ ರಾತ್ರಿ ಜನ ಶಿಖರದ ಮೇಲೆ ಬೆಂಕಿಯ ಜ್ವಾಲೆಯನ್ನು ಕಂಡರು. ಆಗಾಗ ಗಡಗಡ ಸದ್ದಿನೊಂದಿಗೆ ತೀವ್ರ ಪ್ರಕಾಶವೂ ಅಲ್ಲಿಂದ ಹೊಮ್ಮುತ್ತಿತ್ತು.

ಮರುದಿನ, ಅಂದರೆ ಜೂನ್ 24ರಂದು ಗಾಳಿಯ ದಿಕ್ಕು ಬದಲಾಗಿ ಕಪ್ಪುಹೊಗೆಯ ಮೋಡಗಳು ಕಣಿವೆಯತ್ತ ಚಲಿಸಿದವು. ಅದನ್ನು ಹಿಂಬಾಲಿಸಿ ಹೊರಟ ಲಾವಾರಸ ಕ್ಷಣಾರ್ಧದಲ್ಲಿ ಸಕ್ಕರೆ ಕಾರ್ಖಾನೆ ಹಾಗೂ ಹೊಲಗಳನ್ನು ಆವರಿಸಿತು. ಇದು ಎಷ್ಟೊಂದು ಆಕಸ್ಮಿಕವಾಗಿತ್ತೆಂದರೆ ಕಾರ್ಖಾನೆಯಲ್ಲೂ ಹತ್ತಿರದ ಹೊಲಗಳಲ್ಲೂ ಕೆಲಸಮಾಡುತ್ತಿದ್ದ 57 ಮಂದಿ ಸುಟ್ಟುಹೋದರು.

ಈಗ ಜನ ಇಳಿಜಾರಿನ ಹಳ್ಳಿಗಳಲ್ಲಿರುವುದು ಅಸಾಧ್ಯವಾಯಿತು. ಯಾವ ಕ್ಷಣದ

ಲ್ಲಾದರೂ ಲಾವಾರಸ ಅಲ್ಲಿಗೆ ಹರಿದು ಬರಬಹುದಿತ್ತು. ಫರ್ನಾಂಡನ ಜೊತೆಗೆ ಹಳ್ಳಿಯ ಇತರ ನಿವಾಸಿಗಳೂ ಸಮುದ್ರ ತೀರದ ಸೆಂಟ್ ಪೀರೀ ನಗರಕ್ಕೆ ಹೋದರು. ಅಕ್ಕಪಕ್ಕದ ಊರುಗಳಿಂದಲೂ ಸುಮಾರು 15 ಸಾವಿರ ಜನ ಅಲ್ಲಿಗೆ ತಲುಪಿದರು. 25 ಸಾವಿರ ಜನಸಂಖ್ಯೆಯ ಆ ಪಟ್ಟಣ ಒಂದೇ ದಿನದಲ್ಲಿ 40 ಸಾವಿರ ಜನಸಂಖ್ಯೆಯದಾಯಿತು. ಜೂನ್ 27ರ ರಾತ್ರಿ ಪಿಲೇ ಶಿಖರದಿಂದ ಹೊರಹೊಮ್ಮುತ್ತಿದ್ದ ಅಗ್ನಿಜ್ವಾಲೆ ಇನ್ನಷ್ಟು ತೀವ್ರವಾಯಿತು. ಸೆಂಟ್ ಪೀರೀಯಲ್ಲಿ ಚಲಿಸುವ ಗಾಳಿಯೂ ಕುದಿಯುವ ಲಾವಾರಸದ ವಾಸನೆಯಿಂದ ತುಂಬಿಹೋಯಿತು.

ಮರುದಿನ ಬೆಳಿಗ್ಗೆ ಫರ್ನಾಂಡ್ ತನ್ನ ಕೆಲ ಗೆಳೆಯರನ್ನು ಮನೆಗೆ ಕರೆಯಿಸಿ, ''ಈ ನಗರ ಈಗ ಗಂಡಾಂತರದಲ್ಲಿದೆ. ಇದನ್ನು ತ್ಯಜಿಸಿ ಬೇರೆಲ್ಲಾದರೂ ಹೋಗಬೇಕು,'' ಎಂದು ಸಲಹೆಯಿತ್ತ. ಆದರೆ ಅವರಿಗೆ ಅವನು ಹೇಳಿದ್ದರಲ್ಲಿ ನಂಬಿಕೆ ಬರಲಿಲ್ಲ.

ಅಕಸ್ಮಾತ್ತಾಗಿ ಫರ್ನಾಂಡ್ ಗೋಡೆಗೆ ತೂಗು ಹಾಕಿದ್ದ ಬೆರೋಮೀಟರಿನತ್ತ ನೋಡಿದ. ಸೂಜಿ ಬಲುವೇಗವಾಗಿ ಅಲ್ಲಾಡುತ್ತಿತ್ತು. ಫರ್ನಾಂಡನ ಮುಖ ಬಿಳಿಚಿಕೊಂಡಿತು. ಕೂಡಲೆ ಆತ ಆಳುಗಳಿಗೆ ಬೆಲೆಬಾಳುವ ಸಾಮಾನುಗಳನ್ನು ಕಟ್ಟಲು ಹೇಳಿದ. ತುಸು ಹೊತ್ತಿನಲ್ಲೇ ಪರಿವಾರ ಸಹಿತ ಗಾಡಿಯಲ್ಲಿ ಕುಳಿತು ಹೊರಟೇ ಬಿಟ್ಟ.

ಜೂನ್ 28ರಂದು ಬೆಳಿಗ್ಗೆ 8 ಗಂಟೆಗೆ ಪಿಲೇ ಶಿಖರದಿಂದ ಬಿಳಿ ಉಗಿಯ ಬಹುದೊಡ್ಡ ಮೋಡ ಮೇಲೆದ್ದಿತು. ಆ ಬಳಿಕ ಕಿವಿ ಗಡಚಿಕ್ಕುವಂತಹ ಭಯಂಕರ ಶಬ್ದದೊಂದಿಗೆ ಶಿಖರ ಮೇಲಕ್ಕೆ ಹಾರಿಹೋಯಿತು. ಪೀರೀಯ ಕಡೆಗಿದ್ದ ಪಿಲೇಯ ಭಾಗದಲ್ಲಿ ಬಲು ದೊಡ್ಡ ಬಿರುಕುಂಟಾಯಿತು. ಅದರಿಂದ ಉಸಿರುಗಟ್ಟಿಸುವಂತಹ ಕಪ್ಪು ಹೊಗೆಯ ಮೋಡ ಹೊರಬಿತ್ತು. ಇಳಿಜಾರಿನಲ್ಲಿದ್ದ ಕಾರ್ಬೆಟ್ ಹಾಗೂ ಲಾಪ್ರೋಶೇಗಳನ್ನು ನುಂಗುತ್ತ ಲಾವಾರಸ ಸಮುದ್ರತೀರದತ್ತ ಸಾಗಿತು. ಮೂರೇ ಮೂರು ನಿಮಿಷದಲ್ಲಿ ನಡೆದ ಈ ದುರ್ಘಟನೆಯಲ್ಲಿ ಪಟ್ಟಣದ 40 ಸಾವಿರ ನಾಗರಿಕರು ಅಸುನೀಗಿದರು.

ಪೀರೀ ಬಂದರಿನಲ್ಲಿ ತಂಗಿದ್ದ 18ರ ಪೈಕಿ ಹದಿನಾರು ಹಡಗುಗಳ ಪತ್ತೆಯೇ ಹತ್ತಲಿಲ್ಲ.

ರೋರಿಮಾದ ಕಪ್ತಾನ ಹಡಗನ್ನು ಹೊರಡಿಸಲು ಪ್ರಯತ್ನಿಸಿದಾಗ, ಹಡಗಿನಲ್ಲಿ ಕೆಲ ಮಕ್ಕಳು ಹಾಗೂ ಹೆಂಗಸರನ್ನುಳಿದು ಐವರು ಗಂಡಸರು ಮಾತ್ರ ಬದುಕಿದ್ದರು. ಇಷ್ಟು ಕಡಿಮೆ ಜನರಿಂದ ಲಂಗರು ಎತ್ತುವುದು ಅಸಾಧ್ಯವಾದುದರಿಂದ ಆತ ನಾವೆಯನ್ನು ಕೆಳಗಿಳಿಸುವಂತೆ ಅಪ್ಪಣೆಯಿತ್ತ. ಆದರೆ ನಾವೆಯನ್ನು ಕೆಳಗಿಳಿಸುವಾಗ ಕಪ್ತಾನನೇ ಸಮುದ್ರಕ್ಕೆ ಬಿದ್ದ. ಅಷ್ಟರೊಳಗೆ ಇಡೀ ಹಡಗೇ ಉರಿಯತೊಡಗಿತ್ತು.

ಮುಂದೆ ಫ್ರೆಂಚ್ ಕ್ರೂಜರ್ 'ಶೂಟ್' ಅಲ್ಲಿಗೆ ಬರುವ ವೇಳೆಗೆ ಒಬ್ಬಳು ಪುಟ್ಟ ಹುಡುಗಿ ಹಾಗೂ ಅವಳ ಆಯಾ ಮಾತ್ರ ಉಳಿದಿದ್ದರು.

ಫ್ರಾನ್ಸಿನಿಂದ ಡಾಕ್ಟರರ ಹಾಗೂ ನರ್ಸುಗಳ ಒಂದು ತಂಡ ಕಷ್ಟಪಟ್ಟು ಪಿರೀ ಪಟ್ಟಣವನ್ನು ತಲುಪಿದಾಗ ಅದು ಕಪ್ಪು ಬೂದಿಯಲ್ಲಿ ಹೂತುಹೋಗಿತ್ತು. ಮರಗಿಡಗಳೆಲ್ಲ ನಾಮಾವಶೇಷಗಳಾಗಿದ್ದವು.

ಜನ ತಮ್ಮ ತಮ್ಮ ಕೆಲಸ ಮಾಡುತ್ತಿದ್ದ ಸ್ಥಿತಿಯಲ್ಲೇ ಸತ್ತು ಹೋಗಿದ್ದರು. ಒಬ್ಬ ಮನುಷ್ಯ ಮೇಜಿನೆದುರು ಮೊಣಕೈಯೂರಿ ಕುಳಿತಿದ್ದ. ಎದುರಿಗೆ ಅರೆಸುಟ್ಟ ಕಾಗದಗಳಿದ್ದವು. ಒಂದು ಮನೆಯಲ್ಲಿ ಒಬ್ಬ ಹೆಂಗಸಿನ ಹೆಣ ಬಿದ್ದಿತ್ತು. ಅವಳ ರುಂಡ ಮಾಯವಾಗಿತ್ತು. ಅದು ಸಿಡಿತದಿಂದ ಹಾರಿಹೋಗಿರಬಹುದು.

40 ಸಾವಿರ ವ್ಯಕ್ತಿಗಳಲ್ಲಿ ಯಾರೂ ಬದುಕಿ ಉಳಿಯಲಿಲ್ಲ! ●

# ವ್ಯವಸ್ಥೆ

ಸತ್ತ ನಾಯಿಯಂತೆ ದರದರನೆ ರಸ್ತೆಯುದ್ದಕ್ಕೂ ಎಳೆದುಕೊಂಡು ಬಂದ ಪೋಲೀಸ್ ಪೇದೆ ಹುಡುಗನನ್ನು ಬಂದಿಖಾನೆಯೊಳಗೆ ನೂಕಿ ಬಾಗಿಲಿಗೆ ಬೀಗ ಜಡಿದ. ನೂಕಿದ ರಭಸಕ್ಕೆ ನೆಲ ಕಚ್ಚಿ ಹಲ್ಲು ಮುರಿದುಕೊಳ್ಳಬೇಕಾಗಿದ್ದ ಹುಡುಗ ಹೇಗೋ ಸಾವರಿಸಿಕೊಂಡು ಕುತ್ತಿಗೆ ತಿರುಗಿಸಿ ಬಾಗಿಲತ್ತ ಕಣ್ಣು ಹಾಯಿಸಿದ. ಯಾಂತ್ರಿಕವಾಗಿ ಬಿಗಿದುಕೊಂಡ ಮುಷ್ಟಿಗಳು ತನ್ನನ್ನು ಒಳ ದಬ್ಬಿದ ಪೋಲೀಸ್ ಪೇದೆ ಆದಾಗಲೇ ಹೊರಟು ಹೋಗಿರುವುದನ್ನು ಮನಗಂಡು ಹಾಗೆಯೇ ಸಡಿಲಗೊಂಡವು. ಕೆಂಡ ಕಾರುತ್ತಿದ್ದ ಹುಡುಗನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಹುಡುಗ ತನ್ನ ಅಸಹಾಯಕತೆಗೆ ಮನಸ್ಸಿನಲ್ಲೇ ಮರುಕಪಟ್ಟ. ರಕ್ತ ಜಿನುಗುತ್ತಿದ್ದ ಮೈಯನ್ನೊಮ್ಮೆ ತೀಕ್ಷ್ಣವಾಗಿ ಪರಿಶೀಲಿಸಿದ. ಮೈಯೆಲ್ಲಾ ಉರಿಯುತ್ತಿತ್ತು. ಮನಸ್ಸು ಕುದಿಯುತ್ತಿತ್ತು. ದಾರಿಯಲ್ಲಿ ಬರುವಾಗ ಪೋಲೀಸ್ ಪೇದೆಯ ಕೈಯಿಂದ ತಪ್ಪಿಸಿಕೊಳ್ಳಲು ಮಿಸುಕಾಡಿ ಮುಖ ಮೂತಿ ನೋಡದೆ ಪೆಟ್ಟು ತಿಂದದ್ದರಿಂದ ಮೈ ತುಂಬಾ ಬಾಸುಂಡೆಯೆದ್ದು ಬೀಗಿಕೊಂಡಿತ್ತು!

ಇಷ್ಟೆಲ್ಲಾ ಆಗಿಯೂ ಹುಡುಗ ತಾನಿಲ್ಲಿಂದ ಪಾರಾಗುವ ಬಗೆ ಹೇಗೆ? ಎಂದು ಯೋಚಿಸುವ ಗೊಡವೆಗೆ ಹೋಗಲಿಲ್ಲ. ಸದ್ಯ ಅವನಿಗೆ ಭವಿಷ್ಯತ್ತಿನಲ್ಲಿ ಏನೂ ಆಸೆ ಉಳಿದಿರಲಿಲ್ಲ. ಇದ್ದ ಒಂದೇ ಒಂದು ಆಸೆಯನ್ನು ಈಡೇರಿಸಿಕೊಳ್ಳಲಿಕ್ಕಾಗದೆಯೇ ಇಷ್ಟೆಲ್ಲಾ ಅನಾಹುತಕ್ಕೆ ಸಿಕ್ಕಿಬಿದ್ದಿದ್ದ. ಬದುಕಿನಲ್ಲಿ ಅವನಿಗೆ ಜಿಗುಪ್ಸೆ ಬಂದುಹೋಗಿತ್ತು. ತಾನೆಣಿಸಿಕೊಂಡದ್ದೇನು, ಆದದ್ದೇನು ಅಂತ ತನ್ನ ಅದೃಷ್ಟವನ್ನು ಹಳಿದುಕೊಂಡ. ಯಾರಾದರೂ ಇವನ ಕೈಗೆ ಈ ಮುಂಚೆಯೇ ಒಂದು ರೂಪಾಯಿ ಹಾಕಿದ್ದಲ್ಲಿ ಈ ಪರಿಸ್ಥಿತಿ ಖಂಡಿತಕ್ಕೂ ಅವನ ಪಾಲಿಗೆ ಒದಗಿ ಬರುತ್ತಿರಲಿಲ್ಲ. ಎಲ್ಲಾ ಹುಡುಗರಂತೆ ತಾನೂ ಮುಂಚಿನ ದಿನದಿಂದ ಏನೇನೋ ಆಸೆಗಳನ್ನೆಲ್ಲಾ ಕಟ್ಟಿಕೊಂಡು ರಾತ್ರಿಯಿಡೀ ಕನಸು ಕಂಡಿದ್ದ. ಆದರೆ ಎಲ್ಲಾ ತದ್ವಿರುದ್ಧವಾಗಿತ್ತು. ತನ್ನ ಸುತ್ತ ಕವಿದ ಕತ್ತಲೆಯಲ್ಲಿ ಆತ ಒಂದೇ ಒಂದು ಆಸೆಯ ಬೆಳಕನ್ನು ಹುಡುಕತೊಡಗಿದ. ಅಮ್ಮ ನೆನಪಿಗೆ ಬಂದಳು. ಬಂದ ಹಾಗೆಯೆ ಮರೆಯಾದಳು. ಅದರ ಬೆನ್ನಲ್ಲೇ ನೆನಪುಗಳು ಕಾಡತೊಡಗಿದವು. ವರ್ತಮಾನದ ಅಸಹನೀಯ ವೇದನೆಯಲ್ಲಿ ಹುಡುಗ ಅತೀತವನ್ನು ಮೆಲುಕು ಹಾಕತೊಡಗಿದ.

ಹುಡುಗ ಕೆಲವು ದಿನಗಳಿಂದ ಒಂದು ರೂಪಾಯಿ ಶೇಖರಿಸಲು ಶಕ್ತಿಮೀರಿ ಪ್ರಯತ್ನಿಸಿ ಸೋತಿದ್ದ. ಮನಸ್ಸು ಮಾಡಿದ್ದರೆ ಒಂದೇನು ನೂರೂ ರೂಪಾಯಿ ಬೇಕಾದರೂ 'ಯ್ಯುಂ' ಒಟ್ಟು ಮಾಡುತ್ತಿದ್ದ. ಆದರೆ ಅಮ್ಮ ಅಡ್ಡ ಬರುತ್ತಿದ್ದಳು. ಅಮ್ಮನ ಕೊನೆಯ ಮಾತುಗಳು ಅವನನ್ನು ತಡೆಯುತ್ತಿದ್ದವು. ಅದೇ ಕಾರಣಕ್ಕಾಗಿ ಹುಡುಗ ಮೋಸ, ಕಳ್ಳತನ, ಭಿಕ್ಷೆ ಅಂತ ಯಾವ ಅನೈತಿಕ ಕಾರ್ಯಕ್ಕೂ ಮನಸ್ಸು ಮಾಡದೆ ನಿರ್ಲಿಪ್ತನಾ

ಗಿದ್ದ. ಅಮ್ಮ ಹೇಗೂ ಇಲ್ಲ. ಅಪ್ಪನಾದರೂ ಈ ಪರಿಸ್ಥಿತಿಯಲ್ಲಿ ಹತ್ತಿರ ಇರಬಾರದಿತ್ತೇ ಅಂತ ಹುಡುಗನ ಮನಸ್ಸು ಕೂಗಿ ಹೇಳಿತು. ಕಳೆದ ವರ್ಷ ಹುಡುಗನಿಗೆ ಇಂತಹ ಸಂದರ್ಭದಲ್ಲಿ ಒಂದು ರೂಪಾಯಿ ಸಂಗ್ರಹಿಸಲು ಏನೇನೂ ಕಷ್ಟವಾಗಿರಲಿಲ್ಲ. ಒಂದು ರೀತಿಯ ಪವಾಡದಂತೆ ಅದಾಗಿಯೇ ಅವನ ಕೈಗೆ ಬಂದಿತ್ತು. ಆದದ್ದಿಷ್ಟೆ: ಹೇಗಾದರೂ ಮಾಡಿ ಅಪ್ಪಯ್ಯನಿಂದ ಒಂದು ರೂಪಾಯಿ ಪಡೆಯಲು ಹುಡುಗ ಹವಣಿಸಿದ. ಹೀಗೆಯೇ ಕೇಳಿದರೆ ಅಪ್ಪಯ್ಯ ಐದು ಪೈಸೆಯೂ ಕೊಡುವುದಿಲ್ಲ ಅಂತ ಗೊತ್ತಿದ್ದ ಹುಡುಗ ಒಂದು ಉಪಾಯ ಮಾಡಿದ. ರಾತ್ರಿಯ ಊಟ

ಜೆ. ಎ. ಕಂಚುಗಾರ



ಮುಗಿಸಿ ಅಂಗ್ಳೆಯಲ್ಲಿ ತಂಬಾಕು ಹಾಗೂ ಸುಣ್ಣ ಹಾಕಿಕೊಂಡು ಹೆಬ್ಬೆರಳಿನಿಂದ ಅರೆಯುತ್ತಾ ಅಪ್ಪ ಹಾಸಿಗೆಗೆ ಬರುವುದನ್ನೇ ನಿರೀಕ್ಷಿಸಿಕೊಂಡಿದ್ದ ಆತ, ''ನಂಗೆ ಒಂದು ರೂಪಾಯಿ ಬೇಕು.... ಒಂದೇ ರೂಪಾಯಿ .... ಒಂದೇ ಒಂದು'' ಅಂತ ಕನಸಿನಲ್ಲಿ ಕನವರಿಸುವವನಂತೆ ನಟಿಸಿ ರಾತ್ರಿಯಿಡೀ ಬಡಬಡಿಸುವ ನಾಟಕವಾಡಿದ್ದ. ಹುಡುಗನ ಐಡಿಯಾ ಹುಸಿಯಾಗಲಿಲ್ಲ. ಮರುದಿನ ಅಪ್ಪ ಕೆಲಸಕ್ಕೆ ಹೊರಡುವ ಮೊದಲು ಹುಡುಗನ ಕೈಗೆ ಒಂದು ರೂಪಾಯಿ ತುರುಕಿ ಹೋಗಿದ್ದ!

ಹುಡುಗನಿಗೆ ಅಂತಹ ವೇದನೆಯಲ್ಲೂ ಒಂದು ರೀತಿಯ ನಗು ಒತ್ತರಿಸಿ ಬಂತು. ಈಗ ಇಂತಹ ಹೀನಾಯ ಪರಿಸ್ಥಿತಿ ಬಂದೊದಗಿದರೇನಾಯಿತು? ಒಂದು ಕಾಲದಲ್ಲಿ ನಾನೂ ಕೆಲವಿಷ್ಟು ಕಿಲಾಡಿ ಕೆಲಸ ಮಾಡಿ 'ಸೈ' ಎನಿಸಿಕೊಂಡವನೇ ಅಂತ ಮನಸ್ಸಿನಲ್ಲೇ ಒಣ ಹೆಮ್ಮೆಪಟ್ಟ. ಎದುರಿನ ರಸ್ತೆಯಲ್ಲಿ ವಾಹನ ಓಡಾಟ ಕಡಿಮೆಯಾಗಿ ಹುಡುಗರು, ಮಕ್ಕಳು, ಹೆಂಗಸರು, ಗಂಡಸರು ಅಂತ ಎಲ್ಲರೂ ಕಲೆತು ಬಣ್ಣ ಚಿಮುಕಿಸುತ್ತಾ, ಪಿಚಕಾರಿ ಹಾರಿಸುತ್ತಾ ಕುಣಿದುಕುಪ್ಪಳಿಸಿ ಮುಂದೆ ಸಾಗುವುದು ಮಂಜು ಮುಸುಕಿದಂತಿದ್ದ ಕಣ್ಣುಗಳಿಗೆ ಅಸ್ಪಷ್ಟವಾಗಿ ತೋರಿ ಬರುವುದರೊಂದಿಗೆ ಇಂದು ಹೋಳಿ ಹಬ್ಬ ಎನ್ನುವುದು ಹುಡುಗನಿಗೆ ಪುನಃ ನೆನಪಿಗೆ ಸುಳಿದು ಚಿಂತೆಗೆ ಮೂಲವಾಯಿತು.

ಹುಡುಗ ಕಾತರದಿಂದ ನಿರೀಕ್ಷಿಸಿಕೊಂಡಿದ್ದ ದಿನ ಕೊನೆಗೂ ಬಂದಿತ್ತು! ಅದೇ ಹೋಳಿ ಹಬ್ಬ. ತಾನೂ ಇತರರೊಂದಿಗೆ ಹೋಳಿಯಾಡಬೇಕು. ಬಣ್ಣ ಹಚ್ಚಿಕೊಳ್ಳಬೇಕು. ನೀರು ಚಿಮುಕಿಸಬೇಕು. ಪಿಚಕಾರಿ ಹಾರಿಸಬೇಕು. ಬಣ್ಣ ಬಣ್ಣದ ಪುಗ್ಗೆಗಳಲ್ಲಿ ನೀರು ತುಂಬಿ ದಾರಿಹೋಕರ ಮೇಲೆ ಎಸೆಯಬೇಕು ಅಂತೆಲ್ಲಾ ಆಸೆ ಕಟ್ಟಿಕೊಂಡಿದ್ದ ಹುಡುಗ ಧುತ್ತೆಂದು ಒಂದು ರೂಪಾಯಿ ಸಮಸ್ಯೆ ಎದುರಾದ ಕೂಡಲೇ ಪೂರ್ತಿ ಇಳಿದು ಹೋಗಿದ್ದ. ಅವನ ಸರಿಜೋಡಿಯ ಹುಡುಗರು ಕಳೆದ ವರ್ಷದಂತೆ ಈ ವರ್ಷವೂ ಹೋಳಿಹಬ್ಬದಲ್ಲಿ ಪಾಲುಗೊಳ್ಳಲು ಒಂದು ರೂಪಾಯಿ ವಂತಿಕೆ ನೀಡುವಂತೆ ತಾಕೀತು ಮಾಡಿದ್ದರು. ಹುಡುಗ ಒಪ್ಪಿದ್ದ ಕೂಡ! ಆದರೆ ಕೊನೆ ಗಳಿಗೆಯ ತನಕವೂ ಅವನಿಗೆ ಒಂದು ರೂಪಾಯಿ ಜಮಾ ಮಾಡಲು ಆಗಿರಲಿಲ್ಲ. ಪರಿಣಾಮವಾಗಿ ಹುಡುಗನ ಹೆಸರು ಲಿಸ್ಟ್‌ನಿಂದ ಹೊರಬಿತ್ತು. ಹುಡುಗ ತಬ್ಬಲಿಯಾದ. ಒಂದು ಕ್ಷಣ ಹುಡುಗನಿಗೆ ಪ್ರಪಂಚವೇ ಶೂನ್ಯವಾಗಿ ಕಂಡಿತ್ತು. ಮತ್ತೆ ಸಾವರಿಸಿಕೊಂಡವ ಜಾಗೃತಾವಸ್ಥೆಗೆ ಬಂದಿದ್ದ. ಆಸೆ ಚಿಗುರೊಡೆಯತೊಡಗಿ, ತಾನು ಹೋಳಿಯಾಡಿಯೇ ತೀರುತ್ತೇನೆ ಎಂದು ಒಂದು ರೀತಿಯ ಛಲಹೊತ್ತ.

ಹುಡುಗ ಮತ್ತೆ ಅಲ್ಲಿ ಒಂದು ಕ್ಷಣವೂ ನಿಲ್ಲಲಿಲ್ಲ. ಕಾಲು ಬಂದತ್ತ ಹೆಜ್ಜೆ ಕಿತ್ತ. ರೂಪಾಯಿ ಹೇಗೊ ಕನಸಿನ ಮಾತಾಯಿತು. ಹೇಗಾದರೂ ಮಾಡಿ ಬಣ್ಣವನ್ನಾದರೂ ಸಂಗ್ರಹಿಸಬೇಕು ಅಂತ ಯೋಚಿಸುತ್ತಿದ್ದಂತೆಯೇ ಮೊದಲಿಗೆ ನೆನಪಾದದ್ದು ಅಮ್ಮ ಸತ್ತು ಅಪ್ಪ ತನ್ನನ್ನು ಅನಾಥನನ್ನಾಗಿ ಮಾಡಿಬಿಟ್ಟು ಹೋದ ನಂತರ ತನ್ನದೆಂಬ ಆಸ್ತಿಯಾಗಿ ಉಳಿದುಕೊಂಡಿದ್ದ ಒಂದೇ ಒಂದು ವಸ್ತ್ರದ ಗಂಟು. ಹುಡುಗ ತಡಮಾಡಲಿಲ್ಲ. ಅದನ್ನು ಸುರಕ್ಷಿತವಾಗಿರಿಸಿದ್ದ ರಸ್ತೆಯ ಒಂದು ಮೂಲೆಯಲ್ಲಿ ಚಪ್ಪಲಿ ಹೊಲಿಯಲು ಕುಳಿತುಕೊಳ್ಳುವ ಚಮ್ಮಾರನ ಅಂಗಡಿಯತ್ತ ಧಾವಿಸಿದ. ರಸ್ತೆಯ ಧೂಳೆಲ್ಲಾ ಕುಳಿತು ಕೆಂಪು ಬಣ್ಣಕ್ಕೆ ತಿರುಗಿದ್ದ ಗಂಟು ಬಿಡಿಸಿ ಚಿಂದಿವಸ್ತ್ರಗಳನ್ನೆಲ್ಲಾ ಚದುರಿದಾಗ ಅಮ್ಮನ ಕುಂಕುಮದ ಕರಡಿಗೆ 'ಟನ್' ಎಂದು ಹಾರಿ ಮುಚ್ಚಳ ಕಳಚಿಕೊಂಡು ಅಷ್ಟು ದೂರ ಹೋಗಿ ಬಿತ್ತು. ಹುಡುಗ ನಿರಾಶನಾದ. ಒಂದು ಚಿಟಿಕೆಯಷ್ಟು ಕುಂಕುಮವೂ ಇಲ್ಲದೆ ತೊಳೆದು ಒಣಗಿಸಿದಂತಿದ್ದ ಕರಡಿಗೆಯನ್ನು ಹುಡುಗ ಎತ್ತುವ

ಗೋಜಿಗೂ ಹೋಗಲಿಲ್ಲ. ಅವನ ದೃಷ್ಟಿ ಮತ್ತೆ ಗಂಟಿನತ್ತ ಹೋಯಿತು. ಅಪ್ಪ ಇದ್ದಷ್ಟು ದಿನ ಅಪ್ಪನಷ್ಟೇ ಕುತೂಹಲ ಹುಟ್ಟಿಸಿ ಅಪ್ಪನ ಕಿಸೆಯಲ್ಲಿ ಸದಾ ಕಂಡುಬರುತ್ತಿದ್ದ ಫೌಂಟನ್ ಪೆನ್ನನ್ನು ಗಂಟಿನಲ್ಲಿ ನೋಡಿ ಹುಡುಗನಿಗೆ ಒಂದು ರೀತಿಯ ಹುಮ್ಮಸ್ಸು ಪುನಃ ಗರಿಗೆದರಿತು. ಅಮ್ಮನ ಕುಂಕುಮ ಮುಖಕ್ಕೆ ಹಚ್ಚಿಕೊಳ್ಳದ ಭಾಗ್ಯವಿಲ್ಲದಿದ್ದರೇನಾಯಿತು, ತಂದೆಯ ಫೌಂಟನ್ ಪೆನ್ನಿನ ಶಾಯಿಯನ್ನೇ ಮುಖಕ್ಕೆ ಹಚ್ಚಿಕೊಂಡು ಹೋಳಿಯಾಡಿದರಾಯಿತು ಅಂತ ಹುಡುಗ ಪೆನ್ನಿನ 'ಟೋಪ್' ತೆರೆದ. 'ತ್ರಿಬ್ಬಲ್ ಪೈಪ್' ಪ್ಯಾಕೆಟಿನಲ್ಲಿ ಪನಾಮ ತುಂಬಿಕೊಂಡು ಎದುರು ಕಿಸೆಯಲ್ಲಿ ಇಟ್ಟುಕೊಂಡು ತಿರುಗಾಡುತ್ತಿದ್ದ ಅಪ್ಪಯ್ಯನ ಚಡ್ಡಿ ದೊಸ್ತ ಜಾನ್ ಡಿಕೋಸ್ತಾ ಕಣ್ಣ ಮುಂದೆ ಹಾದು ಹೋದ. ಅವನ ಪ್ರಭಾವ ತಂದೆಯ ಮೇಲೆ ಸರಿಯಾಗಿಯೇ ಬಿದ್ದಿದೆ. ಎಲ್ಲಾ ಬರೀ 'ಶೋ' ಅಂತ ಹುಡುಗನ ಮುಖ ಬಾಡಿ ಇಷ್ಟು ಸಣ್ಣದಾಯಿತು. ಯಾರೋ ಕೈಯಲ್ಲಿ ಹಿಡಿಯಲಿಕ್ಕಾಗದಷ್ಟು ಚಿಕ್ಕದಾಗಿದ್ದ ಪೆನ್ಸಿಲಿನ ತುಂಡನ್ನು ಬಿಸಾಡಿರಬೇಕು. ಅಪ್ಪಯ್ಯ ಅದನ್ನೇ ಈ ಪೊಕ್ಕು ಪೆನ್ನಿಗೆ ಸಿಕ್ಕಿಸಿ ದೊಡ್ಡಸ್ತಿಕೆ ತೋರಿಸುತ್ತಿದ್ದನಲ್ಲಾ ಅಂತ ಹುಡುಗನಿಗೆ ನಾಚಿಕೆಯಾಗಿ ಅವನ ಉತ್ಸಾಹವೆಲ್ಲಾ ಜರ್ರನೆ ಇಳಿದು ಹೋಗಿತ್ತು. ವಸ್ತ್ರದ ಗಂಟನ್ನು ಹಾಗೆಯೇ ಮುದ್ದೆ ಮಾಡಿ ಇದ್ದ ಜಾಗದಲ್ಲೇ ಸಿಕ್ಕಿಸಿ ರಸ್ತೆಗೆ ಬಂದಿದ್ದ.

ಬಣ್ಣ ಸಂಪಾದಿಸುವುದೆಂದರೆ ನಾನೆಣಿಸಿಕೊಂಡಷ್ಟು ಸುಲಭವಲ್ಲ ಅಂತ ಹುಡುಗನಿಗೆ ನಿಧಾನವಾಗಿ ಮನವರಿಕೆಯಾಗಲಾರಂಭಿಸಿತ್ತು. ಹಾಗೆಂದು ಹುಡುಗ ಅಷ್ಟಕ್ಕೇ ಸುಮ್ಮನಾಗಲಿಲ್ಲ. ಮುಂಚಿನ ದಿನ ರಾತ್ರಿ ಶಿವಸೇನೆ ಆಫೀಸಿನ ಎದುರುಗಡೆ ಮೈದಾನದಲ್ಲಿ ಹೋಳಿ ಹಬ್ಬದ ಅಂಗವಾಗಿ ಬೃಹತ್ ಪ್ರಮಾಣದಲ್ಲಿ ಏನೇನೋ ಎಲ್ಲಾ ಒಟ್ಟು ಮಾಡಿ ಸುಟ್ಟದ್ದು ನೆನಪಿಗೆ ಬಂದು ಹಿಡಿ ಬೂದಿಯನ್ನಾದರೂ ತೆಗೆದುಕೊಂಡು ಬಂದರೆ ನನ್ನ ಕೆಲಸ ಆದ ಹಾಗೆಯೇ ಅಂತ ಯೋಚಿಸಿ ಅತ್ತ ನಡೆದವನಿಗೆ ಹೆಚ್ಚಿಗೆ ಏನೂ ಪ್ರಯೋಜನ



ಆಗುವ ಹಾಗೆ ಕಂಡು ಬರಲಿಲ್ಲ. ಕೆಲವಿಷ್ಟು ಬಲಿಷ್ಟ ಹುಡುಗರು ಹೋಳಿ ಹೊಂಡದಲ್ಲಿ ಬೀಸಾಡಿದ್ದ ಚಿಲ್ಲರೆ ಪುಡಿಗಾಸಿಗಾಗಿ ಬಕಪಕ್ಷಿಗಳಂತೆ ಕಾದು ಕುಳಿತಿರುವುದನ್ನು ಕಂಡು ಹುಡುಗ ಅಷ್ಟಕ್ಕೆ ತೆಪ್ಪಗಾಗಿ ವಾಪಸು ಬರಬೇಕಾಯಿತು. ಹಿಂದಿರುಗಿ ಬರುವಾಗ ರಸ್ತೆಯಲ್ಲಿ ಕೆಲವರು ಹೋಳಿಯಾಡುತ್ತಾ ಸಾಗುತ್ತಿರುವುದು ಗಮನಕ್ಕೆ ಬಂದು ಹುಡುಗ ಅವರು ಸಾಗಿ ಬಂದ ದಾರಿಯುದ್ದಕ್ಕೂ ಕಣ್ಣೋಡಿಸಿದ. ರಸ್ತೆಯ ಮಧ್ಯೆ ಅಲ್ಲಲ್ಲಿ ಕೆಲವು ಕಡೆ ಬೇರೆ ಬೇರೆ ಬಣ್ಣ ಸಣ್ಣ ಸಣ್ಣ ರಾಶಿಯಾಗಿ ಬಿದ್ದಿರುವುದನ್ನು ನೋಡಿ ಹುಡುಗನ ಮುಖದಲ್ಲಿ ಇನ್ನೊಮ್ಮೆ ಆಶಾಕಿರಣ ಮಿಂಚಿತು. ಅದನ್ನು ಶೇಖರಿಸಿಕೊಂಡರೆ ನನ್ನ ಕೆಲಸ ಆದ ಹಾಗೆಯೇ. ಆದರೆ ಇಷ್ಟೆಲ್ಲಾ ಜನರೆದುರಿಗೆ ಅದನ್ನು ಶೇಖರಿಸುವುದು ಹೇಗೆ? ನಾಚಿಕೆ ಬಿಡುವುದಿಲ್ಲವಲ್ಲ ಅಂತ ಹುಡುಗ ಒಂದು ಕ್ಷಣ ಚಿಂತೆಗೊಳಗಾದ. ಅಮ್ಮ ತೀರಿಕೊಂಡಿದ್ದಾಳೆ. ಅಪ್ಪ ಜವಾಬ್ದಾರಿಯನ್ನು ಬೀದಿಗೆ ತಳ್ಳಿ ಅದ್ಯಾವಳನ್ನೋ ಕಟ್ಟಿಕೊಂಡು ಓಡಿ ಹೋಗಿದ್ದಾನೆ. ಇನ್ನು ನಾನೇಕೆ ನಾಚಿಕೆ, ಮಾನ-ಮರ್ಯಾದೆ ಅಂತ ಕೈಕಟ್ಟಿಕುಳಿತುಕೊಳ್ಳಬೇಕು? ಅಂತ ಒಂದು ನಿರ್ಧಾರಕ್ಕೆ ಬಂದ. ಎದುರುಗಡೆ ಮತ್ತೊಮ್ಮೆ ಕಣ್ಣು ಹಾಯಿಸಿದ. ಎದುರಿನ ದೃಶ್ಯ ನೋಡಿ ಅವನ ಕಾಲುಗಳು ನಿಂತಲ್ಲೇ ಮರಗಟ್ಟಲಾರಂಭಿಸಿ ಹೆಣಭಾರವಾಗಿ ಕಂಡವು. ಬೇರೆ ಬೇರೆ ತಂಡಗಳ ಹೋಳಿಯಾಟ, ಕುಣಿತ, ನೀರು, ಚೆಲ್ಲಾಟಗಳಲ್ಲಿ ನೆಲಕ್ಕೆ ಬಿದ್ದ ಬಣ್ಣಗಳೆಲ್ಲಾ ಚದುರಿ ಕರಗಿ ಮಾಯವಾಗುತ್ತಿರುವುದನ್ನು ಕಂಡು ಹುಡುಗನ ಕರುಳು ಕಿವುಚಿ ಬಂತು. ಹುಡುಗ ನಿರ್ಲಿಪ್ತನಾದ. ಒಂದೆರಡು ಸಲ ಅವರೊಂದಿಗೆ ಸೇರಿ ಹೋಳಿಯಾಡುವ ಮನಸ್ಸು ಮಾಡಿದರೂ ತನ್ನ ಕಣ್ಣೆದುರಿನಲ್ಲೇ ಒಂದಿಬ್ಬರು ಭಿಕಾರಿ ಹುಡುಗರು ಪೆಟ್ಟು ತಿಂದು ಗುಂಪಿನಿಂದ ಹೊರ ಬಿದ್ದುದನ್ನು ಕಣ್ಣಾರೆ ಕಂಡ ಹುಡುಗ ಅಷ್ಟಕ್ಕೆ ತಟಸ್ಥನಾದ. ಅವನಿಗೆ ಹೆಚ್ಚು ಹೊತ್ತು ಅಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಮತ್ತೆ ಪ್ರಾರಂಭವಾಯಿತು ಬಣ್ಣದ ಬೇಟೆ.

ಟಾರೋಡು ರಸ್ತೆಯ ಇಕ್ಕೆಲಗಳಲ್ಲಿ ಹರಡಿರುವ ಮಣ್ಣನ್ನೆ ಮುಖಕ್ಕೆ ಹಚ್ಚಿಕೊಂಡರಾಯಿತು ಅಂತ ಒಂದು ಕ್ಷಣ ಅನ್ನಿಸಿದರೂ ಹುಡುಗ ಅದೇಕೋ ಹಿಮ್ಮೆಟ್ಟಿದ. ಹೊತ್ತು ಮೇಲೇರಿ ಬಂದರೂ ಹೇಸದೆ ಚಡ್ಡಿಯನ್ನು ಮಂಡಿಯ ತನಕ ಕೆಳಗಿಳಿಸಿ ರಸ್ತೆ ಬದಿಯಲ್ಲಿ ಕುಳಿತುಕೊಳ್ಳುವ ಪುಂಡ ಹುಡುಗರು ಕಣ್ಣಿಗೆ ಗೋಚರಿಸಿದಂತಾಗಿ ಕ್ಯಾಕರಿಸಿ ಉಗುಳಿ ಬಣ್ಣಕ್ಕಾಗಿ ಮತ್ತೇನು ಮಾಡುವುದು ಅಂತ ತಲೆ ಕೆರೆದುಕೊಂಡು ಮತ್ತಿಷ್ಟು ಆಳವಾಗಿ ಯೋಚಿಸಲು ಮೊದಲುಮಾಡಿದ.

ಅಷ್ಟು ಹೊತ್ತಿಗೆ ಸರಿಯಾಗಿ ಹುಡುಗನ ಪಕ್ಕದಲ್ಲೇ ಲಾರಿಯೊಂದು ಬುಸುಗುಟ್ಟುತ್ತಾ ಬಂದು ದಟ್ಟಗಿನ ಕಪ್ಪು ಹೊಗೆಯನ್ನು ಗುಳುತ್ತಾ ಗಕ್ಕನೆ ನಿಂತುಬಿಟ್ಟಿತು. ಅದನ್ನು ನೋಡಿದ ಹುಡುಗನ ತಲೆ ಚುರುಕಾಯಿತು. ಡ್ರೈವರ್ ಹಾಗೂ ಕ್ಲಿನರ್ ಲಾರಿಯಿಂದಿಳಿದು ರಸ್ತೆದಾಟಿ ಆಚೆ ಹೋದದ್ದೇ ತಡ; ಹುಡುಗ ಬಣ್ಣ ತುಂಬಲಿಕ್ಕಾಗಿ ಮುಂಚೆನಿಂದ ರೆಡಿ ಮಾಡಿ ಇಟ್ಟುಕೊಂಡಿದ್ದ ಪ್ಲಾಸ್ಟಿಕ್ ಚೀಲವನ್ನು ಚಡ್ಡಿಕಿಸೆಯಿಂದ ಹೊರತೆಗೆದು ಯಾರೂ ತನ್ನನ್ನು ಗಮನಿಸುತ್ತಿಲ್ಲ ಎನ್ನುವುದನ್ನು ಖಾತ್ರಿ ಮಾಡಿಕೊಂಡು ಲಾರಿಯಡಿ ಬಗ್ಗಿದ. ಇನ್ನೇನು ಕಾರ್ಯಪ್ರವೃತ್ತನಾಗಬೇಕು ಎಂದುಕೊಳ್ಳುತ್ತಿದ್ದಂತೆಯೇ ಬಲಿಷ್ಠ ಕೈಯೊಂದು ತನ್ನ ಕಾಲರ್ ಹಿಡಿದು ಹಿಂದಕ್ಕೆ ಜಗ್ಗುತ್ತಿರುವುದು ಅನುಭವಕ್ಕೆ ಬಂದು ಆತ ಬೆವರಲಾರಂಭಿಸಿದ. ಕೈಕಾಲುಗಳು ಕಂಪಿಸತೊಡಗಿದವು.

''ಏನಲಾ ಸೂಳೆ ಮಗನೆ, ನೀನೇನಾ? ಇಷ್ಟುದಿನ ನಮ್ಮೆಲ್ಲರ ಕಣ್ಣಿಗೆ ಮಣ್ಣೆರಚಿ

ಇಂತಹ ಹಲ್ಕಾ ಕೆಲ್ಸ ಮಾಡ್ತಿದ್ದವ, ನಡಿಯೋ ಸ್ಟೇಶನ್ನಿಗೆ. ಕಲಿಸ್ತೇನೆ ನಿನಗೆ....."

ಅಂತ ಸರಿಯಾಗಿ ಬೆನ್ನಿಗೆ ನಾಲ್ಕು ಬಾರಿಸಿದ ಪೋಲೀಸ್ ಪೇದೆ ಹಲವು ದಿನಗಳ ಮೇಲೆ ಕೊನೆಗೂ ಒಂದು ಕೇಸನ್ನು ತನ್ನದಾಗಿ ಮಾಡಿ ಕೊಂಡೆನಲ್ಲಾ ಎಂಬ ಖುಷಿಯಲ್ಲಿ ಹುಡುಗ ನಿಗೆ ತುಟಿ ತೆರೆಯಲಿಕ್ಕೂ ಆಸ್ಪದ ಕೊಡದೆ ಸಿಕ್ಕಸಿಕ್ಕಲ್ಲಿ ಒದೆಯುತ್ತಾ ದರದರನೆ ಪೋಲೀಸ್ ಸ್ಟೇಶನ್ನಿಗೆ ಎಳೆದು ತಂದಿದ್ದ.

ಕಪ್ಪು ಹೊಗೆಯುಗುಳುತ್ತಾ ಲಾರಿ ತನ್ನ ಹತ್ತಿರವೇ ಬಂದು ನಿಂತಾಗ ಹುಡುಗನಿಗೆ ಅಮ್ಮನ ನೆನಪಾಗಿತ್ತು. ತಾನು ಚಿಕ್ಕವನಿರು ವಾಗ ಕಾಡಿಗೆ ತರಲು ಹಣವಿಲ್ಲದ ಅಮ್ಮ ಚಿಮಣಿ ದೀಪದ ಹೊಗೆಯನ್ನೇ ತಾಟಿನಲ್ಲಿ ಮಸಿಯ ರೂಪದಲ್ಲಿ ಶೇಖರಿಸಿ ತನ್ನ ಗಲ್ಲಕ್ಕೆ, ಹುಬ್ಬಿಗೆ ಅಂತ ಹಚ್ಚುತ್ತಿದ್ದುದು ನೆನಪಾಗಿ ಲಾರಿಯ ಹೊಗೆ ಕೊಳವೆಯಲ್ಲಿ ತಡಕಾಡಿದರೆ ಕಾಡಿಗೆಯಂತಹ ಮಸಿ ದೊರೆಯುವುದು ಆ ಬಾಲಕನ ಮನಸ್ಸಿಗೆ ಹೊಳೆದು ಬಂದಿತ್ತು. ಹುಡುಗ ಅದೇ ದೃಷ್ಟಿಯಿಂದ ಲಾರಿಯಡಿ ನುಸುಳಿದ್ದ. ಅದೃಷ್ಟ ಚೆನ್ನಾಗಿರಲಿಲ್ಲ. ಅದೆಲ್ಲಿ ಅಡಗಿದ್ದನೋ ಏನೋ. ಇದೇ ಅವಕಾಶಕ್ಕಾಗಿ ಕಾದುಕೊಂಡಿದ್ದವನಂತೆ ಪೋಲೀಸ್ ಪೇದೆ ಹುಡುಗನನ್ನು ಹಿಡಿದು ಅವನ ಮೇಲೆ ಪೆಟ್ರೋಲ್ ಟ್ಯಾಂಕಿನಿಂದ ಪೆಟ್ರೋಲ್ ಕದಿ ಯುವ ಆರೋಪ ಹೊರಿಸಿ ಪೋಲೀಸ್ ಠಾಣೆಗೆ ತಳ್ಳಿದ್ದ.

ಯೋಚನಾಲಹರಿಯಿಂದ ಕಡಿದುಕೊಂಡು ಹುಡುಗ ವಾಸ್ತವಕ್ಕೆ ಬಂದ. ಮೈಯೆಲ್ಲಾ ಹೋಳಿಯಾಡಿದಂತೆ ವಿವರ್ಣವಾಗಿರುವು ದನ್ನು ನೋಡಿ ಅಂತಹ ಅಸಹನೀಯ ವೇದನೆ ಯಲ್ಲೂ ಸಂತೃಪ್ತಿಯ ನಿಟ್ಟುಸಿರುಬಿಟ್ಟ. ಅವನ ಮುಖ ಉತ್ಸಾಹದ ಬುಗ್ಗೆಯಾಗಿ ಹೋಳಿಯ ನಗು ಚಿಮ್ಮಿತು. ಹುಡುಗ ರಕ್ತ ದಲ್ಲೇ ಹೋಳಿಯಾಡಿದ್ದ!

●

## ಭಂಡ ಪಂಡನ ಬನಿಯನ್

*ಗೋಕರ್ಣ ಅಥವಾ ವಾರಾಣಾಸಿಗೆ ಹೋದಾಗ ಬೇಡವೆಂದರೂ ನಮಗೆಲ್ಲ ಪಂಡಗಳ ದರ್ಶನ ಆಗಿಯೇ ಆಗುತ್ತೆ. ಒಮ್ಮೆ ಇಂತಹ ಒಬ್ಬ ಪಂಡಾಮಹಾಶಯನನ್ನು ಮಾನ್ಯ ದ.ರಾ.ಬೇಂದ್ರೆಯವರು ಧಾರವಾಡದಲ್ಲಿ ಭೇಟಿಯಾದರಂತೆ. ಅವನ ಸನಿಹದಲ್ಲಿ ಮೂಗು ಮುಚ್ಚಿಕೊಳ್ಳುವಂಥ ಗಬ್ಬು ವಾಸನೆ ಹರಡಿದ್ದರಿಂದ ಈತನನ್ನು ಮನೆಗೆ ಕರೆದೊಯ್ದು ಹೇಗಾ ದರೂ ಮಾಡಿ ಶುಭ್ರನನ್ನಾಗಿ ಮಾಡಬೇಕೆಂಬ ಅಭಿಲಾಷೆ ಬೇಂದ್ರೆಯವರಿಗೆ ಉಂಟಾಯಿತಂತೆ. ಬಚ್ಚಲುಮನೆಯಲ್ಲಿ ಕುಳ್ಳಿರಿಸಿ ಸೇವಕನ ಸಹಾಯದಿಂದ ಆತನ ಮೇಲೆ ಅವರು ಬಕೆಟ್ ಮೇಲೆ ಬಕೆಟ್ ಬಿಸಿ ನೀರು ಸುರಿಸಿ, ಸೀಗೇಪುಡಿಯಿಂದ ಮೈತೊಳೆಸಿ, ಪುನಃ ನಾಲ್ಕಾರು ಬಕೆಟ್ ನೀರು ಸುರಿಸಿದರಂತೆ. ಬ್ರಷ್‌ನಿಂದ ಮೈ ಉಜ್ಜಿಸಿದರಂತೆ. ಮತ್ತೊಮ್ಮೆ ಸಾಬೂನು ಉಪಯೋಗಿಸಿ, ಚೆನ್ನಾಗಿ ತೊಳೆದು ಪುನಃ ನಾಲ್ಕಾರು ಬಕೆಟ್ ನೀರು ಹುಯಿಸಿದರಂತೆ. ಆಗ..... ಆತನ ಮೈಯೆಲ್ಲಾ ಕೊಳೆಯಿಂದ ಮುಕ್ತವಾಗಿರಬಹುದೆಂಬ ನಂಬಿಕೆ ಬಂದು ನೋಡಿದಾಗ..... ಕಣ್ಣಿಗೆ ಬಿತ್ತಂತೆ, ಆತ ಎಷ್ಟೋ ವರ್ಷಗಳ ಹಿಂದೆ ತೊಟ್ಟಿರಬಹುದಾದ, ಆತನ ಮೈಗೆ ಗಟ್ಟಿಯಾಗಿ ಅಂಟಿಕೊಂಡಿದ್ದ ಬನಿಯನ್!*

*ಎಸ್.ಸಿ.ಶಿವನಂಜಪ್ಪ*

(ಶ್ರೀ.ಅ.ರಾ.ಮಿತ್ರರು ತಮ್ಮ ಭಾಷಣದಲ್ಲಿ ಹೇಳಿದ ಹಾಸ್ಯ)

# ಬೀಜಾಣು ಬೆಸುಗೆ

'ಪ್ರಭಾ'

ಮನೆಯಲ್ಲಿ ವಿದ್ಯುತ್ ಇಲ್ಲ, ವಿದ್ಯುತ್ತಿಗೆ ಕಾಯದೆ ಮನೆಯಲ್ಲಿನ ವಿದ್ಯುತ್ ಉಪಕರಣಗಳನ್ನು ಉಪಯೋಗಿಸುವಹಾಗಿದ್ದರೆ ಹೇಗೆ? ವಿದ್ಯುತ್ತಿಗಾಗಿ ಕಾಯದೆ ಬಾವಿಯ ಪಂಪ್ ಸೆಟ್ ಚಾಲಿಸುವಂತಾದರೆ, ಮನೆಯಲ್ಲಿನ ಗೀಸರು, ಹೀಟರು, ಪಂಪ್ ಇತ್ಯಾದಿಗಳನ್ನು ನಡೆಸುವಂತಾದರೆ....

ಈ ಸಲ ರೇಶನ್ ಅಂಗಡಿಯಲ್ಲಿ ಸೀಮೆ ಎಣ್ಣೆ ಬಂದಿಲ್ಲ; ಜೊತೆಗೆ ಗ್ಯಾಸೂ ಮುಗಿದಿದೆ. ಸೌದೆ ಕೂಡ ಸಿಕ್ಕದೇ ಇರೋ ಪರಿಸ್ಥಿತಿ. ಇಂತಹ ಪರಿಸ್ಥಿತಿಯಲ್ಲಿ ತಲೆ ಬಿಸಿ ಮಾಡಿ-ಕೊಳ್ಳುವುದರ ಬದಲು ಒಂದು ಬದಲೀ ವ್ಯವಸ್ಥೆ ಇದ್ದರೆ ಹೇಗೆ?

ರಸ್ತೆಯಲ್ಲಿ ವಾಹನದಲ್ಲಿ ಹೋಗುತ್ತಿದ್ದೀರಿ. ವಾಹನ ಇದ್ದಕ್ಕಿದ್ದಂತೆ ನಿಲ್ಲುತ್ತದೆ. ನೋಡಿದರೆ ಪೆಟ್ರೋಲೇ ಇಲ್ಲ. ಹತ್ತಿರದಲ್ಲಿ ಎಲ್ಲೂ ಪೆಟ್ರೋಲು ದೊರೆಯದು. ವಾಹನ ತಳ್ಳಿಕೊಂಡು ಹೋಗಬೇಕು. ಇಲ್ಲವೇ ಯಾರಾದರೂ ಪೆಟ್ರೋಲು ದಾನ ಮಾಡುವವರೆಗೆ ಕಾದು ನಿಂತು ನಿಮ್ಮ ತುರ್ತು ಕೆಲಸ ಕೆಡಿಸಿಕೊಳ್ಳಬೇಕು. ಪೆಟ್ರೋಲಿಗೆ ಈ ರೀತಿ ಪರದಾಡುವ ಬದಲು ನಿಮ್ಮ ಮನೆಯಲ್ಲೇ ತಯಾರಿಸಬಹುದಾದ ಒಂದು 'ಇಂಧನ' ನಿಮ್ಮ ಪಾಲಿಗಿದ್ದರೆ... ಹೀಗೆಯೆ ವಿಚಾರಗಳು ಕಲ್ಪನಾ ಪ್ರಪಂಚದಲ್ಲಿ ವಿಹರಿಸುತ್ತವೆ. ಆದರೆ ವೈಜ್ಞಾನಿಕ ಪ್ರಯತ್ನಗಳಿಂದಾಗಿ ಕಲ್ಪನೆ ವಾಸ್ತವ ರೂಪ ತಾಳಿದರೆ ಆಶ್ಚರ್ಯವಿಲ್ಲ.

ನಿಸರ್ಗದಲ್ಲಿ ಭಾರಜಲದ ಕಣಗಳು ಹೇರಳವಾಗಿ ದೊರೆಯುತ್ತವೆ. ಭಾರಜಲವು ಸಮುದ್ರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಲಭ್ಯ. ಈ ಭಾರ ಜಲದ ಕಣಗಳನ್ನು ಕೊಠಡಿಯ ಉಷ್ಣತೆಯಲ್ಲಿ ಹಗುರ ಕಣಗಳೊಡನೆ ಬೆಸೆದರೆ ಹೇರಳವಾದ ಇಂಧನವನ್ನು ಪಡೆಯಬಹುದೆ? ಎಂಬುದನ್ನು ಅರಿಯಲು ವಿಜ್ಞಾನಿಗಳ ತಂಡ ಈಗ ಕಾರ್ಯನಿರತವಾಗಿದೆ. ಈ ಚಿಂತನೆಗೆ ಪ್ರೇರಣೆ ಹೀಗಿದೆ:

ಯುರೇನಿಯಂ ಮತ್ತಿತರ ಭಾರ ಲೋಹಗಳ ಕಣಗಳನ್ನು ವಿದಳನ ಕ್ರಿಯೆಗೆ ಒಳಪಡಿಸಿದಾಗ ಈ ಭಾರಲೋಹಗಳ ಪರಮಾಣುಗಳು ಒಡೆದು ಅಗಾಧ ಪ್ರಮಾಣದಲ್ಲಿ ಶಕ್ತಿ ಉತ್ಸರ್ಜಿತವಾಗುತ್ತದೆ. ಈ ಭಾರ ಲೋಹದ ಪರಮಾಣುಗಳು ಒಡೆಯುತ್ತಿರುವಂತೆಯೇ ಅತ್ಯಂತ ಹಗುರವಾದ ಪರಮಾಣುಗಳನ್ನು ಹೊಂದಿರುವ ಜಲಜನಕದ ಜೊತೆಗೆ ಅದೇ ಪರಮಾಣುವನ್ನು ಬೆಸುಗೆ ಮಾಡುವ ಮೂಲಕ ಸಾಕಷ್ಟು ದೀರ್ಘ ಕಾಲ ಉಷ್ಣತೆಯನ್ನು ಪಡೆಯುವುದು ಸಾಧ್ಯವೆ? ಹೈಡ್ರೋಜನ್ ಬಾಂಬ್ ತಯಾರಿಸಿದಾಗ ದಟ್ಟವಾದ ಹೈಡ್ರೋಜನ್ ಅನಿಲದಲ್ಲಿ ವಿದಳನ ಬಾಂಬ್ ಸಿಡಿಸಿ ಬೇಕಾದ ಉಷ್ಣತೆ ನಿರ್ಮಿತವಾಗಿತ್ತು. ಆದರೆ ಕೊಠಡಿಯ ಉಷ್ಣತೆಯಲ್ಲಿಯೇ ಈ ಸಮ್ಮಿಳನ ಕ್ರಿಯೆ ಸಾಧ್ಯವೇ? ಎಂಬುದು ಈಗಿರುವ ಪ್ರಶ್ನೆ.

ವಿಜ್ಞಾನಿಗಳು ಈ ನಿಟ್ಟಿನಲ್ಲಿ ಪ್ರಯೋಗ ನಿರತರಾಗಿದ್ದು ಹೆಚ್ಚು ಕಡಿಮೆ ಪ್ರತಿ ವಾರವೂ ಈ ಸಂಬಂಧದಲ್ಲಿ ಹೇಳಿಕೆ ಮತ್ತು ಪ್ರತಿ ಹೇಳಿಕೆಗಳು ಬರುತ್ತಿವೆ. ಈ ಪ್ರಯೋಗಗಳನ್ನು ಪ್ರಪಂಚದ ಸರಿಸುಮಾರು ಎಲ್ಲಾ ಮುಂದುವರೆದ ರಾಷ್ಟ್ರಗಳೂ ನಡೆಸುತ್ತಿವೆ. ಈ

ಪ್ರಯೋಗಕ್ಕಾಗಿ ಹೈಡ್ರೋಜನ್ ಅನಿಲವನ್ನು ಆಯ್ದುಕೊಳ್ಳಲಾಗಿದೆ. ಲೇಸರ್ ಕಿರಣಗಳ ಮೂಲಕ ಭಾರದ ಹೈಡ್ರೋಜನ್ (ಪರಮಾಣುತೂಕ ಎರಡು ಇರುವ ಹೈಡ್ರೋಜನ್. ಸಾಧಾರಣ ಹೈಡ್ರೋಜನ್ನಿನ ಪರಮಾಣು ತೂಕ ಒಂದು) ಕಣಗಳ ಮೇಲೆ ಒಂದೇ ಸಲ ಹತ್ತು ಕೋಟಿ ವ್ಯಾಟುಗಳಷ್ಟು ವಿದ್ಯುತ್ತನ್ನು ಹರಿಸಿದರೂ ಒಂದೇ ಒಂದು ಸೆಕೆಂಡಿನಷ್ಟು ಅಲ್ಪಾವಧಿಯಲ್ಲೂ ಬೆಸುಗೆಯನ್ನುಂಟು ಮಾಡಲು ಸಾಧ್ಯವಾಗಿಲ್ಲ.

ಈ ಪ್ರಯೋಗಗಳು ಮುಂದುವರೆದಂತೆ 1989ರ ಮಾರ್ಚ್ ತಿಂಗಳ ಕೊನೆಯಲ್ಲಿ ಅಮೇರಿಕದ ಉಟಾ ವಿಶ್ವವಿದ್ಯಾಲಯದ ಸ್ಟಾನ್ಲಿ ಫ್ರಾನ್ಸ್ ಮತ್ತು ಬ್ರಿಟನ್ನಿನ ಸೌಥಾಂಪ್ಟನ್ನಿನ ಮಾರ್ಲ್ಟಿನ್ ಫ್ಲೆಷ್‌ಮನ್‌ರು 'ಬೆಸುಗೆ' ಸಾಧಿಸಿರುವುದಾಗಿ ಘೋಷಿಸಿದರು. ಇಂತಹ ಬೆಸುಗೆಯಿಂದ ಅತ್ಯಂತ ಕ್ರಾಂತಿಕಾರಕ ಪರಿಣಾಮಗಳನ್ನುಂಟುಮಾಡುವ ಯೋಚನೆಯಲ್ಲಿರುವ ವಿಜ್ಞಾನಿಗಳಿಗೆ ಇದನ್ನು ಕೇಳಿ ಆಶ್ಚರ್ಯವೇ ಆಶ್ಚರ್ಯ. ಬೆಸುಗೆಯ ವಿವರಗಳು ನಿಧಾನಕ್ಕೆ ಬರಲಾರಂಭಿಸಿದವು. ಆ ಪ್ರಕಾರ, ಒಂದು ಜಾಡಿಯಲ್ಲಿ ಪೆಲೇಡಿಯಂ ಲೋಹದ ಕಡ್ಡಿಯನ್ನು ಧನಧ್ರುವದಲ್ಲೂ ಪ್ಲಾಟಿನಂ ತಂತಿಯನ್ನು ಋಣಧ್ರುವದಲ್ಲೂ ಇಟ್ಟು ದ್ರಾವಣ ತಯಾರಿಸಲು ಭಾರ ಜಲ ಉಪಯೋಗಿಸಲಾಯಿತು. (ಭಾರ ಜಲದಲ್ಲಿ ಪರಮಾಣು ತೂಕ 2 ಇರುವ ಜಲಜನಕದಿಂದಾದ ನೀರು ಇರುತ್ತದೆ.) ಈ ಪ್ರಯೋಗದಲ್ಲಿ ಇವರು ಹಾಯಿಸಿದ ವಿದ್ಯುತ್ತಿನ ನಾಲ್ಕರಷ್ಟು ಶಕ್ತಿ ಹೊರಹೊಮ್ಮಿತಂತೆ. ವಿಜ್ಞಾನಿಗಳು ಹೈಡ್ರೋಜನ್ ಪರಮಾಣು ಬೀಜಗಳ ಸಮ್ಮಿಳನಗೊಂಡಿದ್ದೇ ಇದಕ್ಕೆ ಕಾರಣ ಎಂದು ಹೇಳಿದ್ದಾರೆ. ಪ್ರಯೋಗದಲ್ಲಿ ಸ್ವಲ್ಪಮಟ್ಟಿಗೆ ಹೀಲಿಯಂ ಕೂಡ ಉತ್ಪಾದನೆಗೊಂಡಿತಂತೆ.

ಈ ವರದಿ ಬಂದ ಕೂಡಲೇ ಇದೇ ಪ್ರಯೋಗಗಳನ್ನು ಬೇರೆ ಬೇರೆ ಪ್ರಯೋಗಾಲಯಗಳಲ್ಲಿ ಕೈಕೊಳ್ಳಲಾಯಿತು. ಆದರೆ ಅದರಿಂದ ಹೊರಬಂದ ಫಲಿತಾಂಶಗಳು ಮಾತ್ರ ಒಂದೇ ಆಗಿರಲಿಲ್ಲ. ಕೆಲವು ಪ್ರಯೋಗಗಳಲ್ಲಿ ಬರೇ ಶಾಖ ಹೊಮ್ಮಿದರೆ ಮತ್ತೆ ಕೆಲವೆಡೆ ಶಾಖ ಹೊಮ್ಮಲಿಲ್ಲ. ವೈಜ್ಞಾನಿಕ ವಲಯಗಳಲ್ಲಿ ಚರ್ಚೆ, ವಿವಾದಗಳು ಆರಂಭವಾದವು. ಅವರವರ ಪ್ರಯೋಗಗಳಿಗೆ ತಕ್ಕಂತೆ ವಿವರಣೆಗಳೂ ಪ್ರಕಟಗೊಳ್ಳತೊಡಗಿದವು. ಈವರೆಗೆ ತಿಳಿದಿರದಿದ್ದ ಒಂದು ಅತ್ಯಪೂರ್ವ ಸಂಗತಿ ಈ ಪ್ರಯೋಗಗಳಿಂದ ತಿಳಿದು ಬಂತು. ಸಾಮಾನ್ಯ ಉಷ್ಣತೆಯಲ್ಲಿ ಸಮ್ಮಿಳನ ಕ್ರಿಯೆ ನಡೆಸಬಹುದೆ? ಎಂಬ ಬಗೆಗೆ ಸಂದೇಹವಿದ್ದರೂ ಸಾಧ್ಯವಿಲ್ಲ ಎನ್ನುವಂತಿಲ್ಲ ಎನ್ನುತ್ತದೆ ಅದು. ಪೆಲೇಡಿಯಂ ಲೋಹಕ್ಕೆ ಉಳಿದ ಯಾವ ಲೋಹಕ್ಕೂ ಇಲ್ಲದ ಒಂದು ಗುಣಧರ್ಮವಿದೆ: ಅದು ತನ್ನ ಗಾತ್ರದ ಸುಮಾರು ಮೂರುಸಾವಿರದಷ್ಟು ಪಾಲು ಹೈಡ್ರೋಜನ್ ಅನ್ನು ಹೀರಿಕೊಳ್ಳಬಹುದು. ಈ ಪ್ರಯೋಗಗಳಿಂದ ಸಾಮಾನ್ಯ ಉಷ್ಣತೆಯಲ್ಲಿ ಬೀಜಾಣು ಬೆಸುಗೆಗೆ ಭಾರ ಜಲ ಬೇಕು ಎಂಬ ಒಂದಂಶವಂತೂ ಸ್ಪಷ್ಟವಾಗುತ್ತದೆ.

1989ರ ಎಪ್ರಿಲ್ ಮೊದಲ ವಾರದಲ್ಲಿ ಮೇಲಿನ ಪ್ರಯೋಗಕ್ಕೆ ವಿರುದ್ಧವಾದ ಫಲಿತಾಂಶಗಳು ಹಂಗೇರಿ, ಟೆಕ್ಸಸ್ ಮತ್ತು ಜಾರ್ಜಿಯಾದಿಂದ ಬಂದರೆ ಮಾಸ್ಕೋ, ಬೊಂಬಾಯಿ ಮತ್ತು ಜಪಾನ್ ದೇಶಗಳಲ್ಲಿಯ ಪ್ರಯೋಗಾಲಯಗಳು ಬೇಸುಗೆ ಸಾಧ್ಯ ಎಂದು ವರದಿ ಮಾಡಿವೆ.

ಈ ಮಧ್ಯೆ ಮತ್ತೊಂದು ಭೌತ ವಿಜ್ಞಾನಿಗಳ ಗುಂಪು 'ಉಟಾ'ದ ಪ್ರಯೋಗ ಪ್ರಯೋಗವೇ ಅಲ್ಲ; ಅದು ಬೆಸುಗೆಯ ಲಕ್ಷಣಗಳೇ ಅಲ್ಲ ಎಂದು ಹೇಳಿಕೆ ನೀಡಿತು. ವಿದ್ಯುತ್ತು ಹರಿಸಿದ್ದ ಜಾಡಿಯಲ್ಲಿ ಮೊದಲೇ ಭಾರ ಜಲದ ಅಣುಗಳು ಇದ್ದಿರಬಹುದು ಮತ್ತು ಜಾಡಿಯನ್ನು ಚೆನ್ನಾಗಿ ಕುಲುಕಾಡಿಸಿಲ್ಲ

ವಾದ್ದರಿಂದ ಮೇಲಿನ ಫಲಿತಾಂಶ ಬಂದಿದ್ದರೂ ಬಂದಿರಬಹುದು ಎಂದು ಈ ವಿಜ್ಞಾನಿಗಳು ಅನುಮಾನಪಟ್ಟರು.

ಬೀಜಾಣು ಬೆಸುಗೆಯ ವಿವಾದಕ್ಕೆ ತೆರೆ ಬಿತ್ತು ಎಂದುಕೊಳ್ಳುವಷ್ಟರಲ್ಲಿ 1989ರ ಮೇ ಕಡೆಯ ವಾರದಲ್ಲಿ ಇದೇ ಪ್ರಯೋಗದ ವಿಡಿಯೋ ಚಿತ್ರವೊಂದು ಬಿತ್ತರಗೊಂಡಿತು. ರಸಾಯನ ವಿಜ್ಞಾನಿಗಳ ಸಮ್ಮೇಳನವೊಂದರಲ್ಲಿ ಬೀಜಾಣು ಬೆಸುಗೆಯ ಜಾಡಿಯನ್ನು ಮತ್ತೆ ಮತ್ತೆ ಕದಡಿ, ಕುಲುಕಿಸಿ ಶಾಖ, ಹೊಮ್ಮುವುದನ್ನು ಲಾಸ್ ಏಂಜೆಲೆಸ್ಸಿನಲ್ಲಿ ಪ್ರದರ್ಶಿಸಲಾಯಿತು. ಆದರೂ ವಿವಾದಕ್ಕೆ ಇನ್ನೂ ತೆರೆ ಬಿದ್ದಿಲ್ಲ!

ಈ ಮಧ್ಯೆ ಅಗಸ್ಟ್ 89ರಲ್ಲಿ ಜಪಾನ್ ದೇಶವು ಇದೊಂದು ಮೃಗ ಮರೀಚಿಕೆಯೆಂದು ತನ್ನ ಪ್ರಯೋಗಗಳನ್ನು ನಿಲ್ಲಿಸಿದೆ. ಭಾರತದಲ್ಲೂ ಈ ಬಗ್ಗೆ ಭಾಭಾ ಪರಮಾಣು ಕೇಂದ್ರದಲ್ಲೂ ಕಲ್ಪಾಕಂನ ಇಂದಿರಾಗಾಂಧಿ ಪರಮಾಣು ಸಂಶೋಧನಾ ಕೇಂದ್ರದಲ್ಲೂ ಪ್ರಯೋಗಗಳು ಮುಂದುವರೆದಿದ್ದು ಅವುಗಳಿಂದ ಉತ್ತೇಜಕವಾದ ಫಲಿತಾಂಶಗಳು ಬಂದಿವೆ.

ಮೇ 1989ರಲ್ಲಿ ಇಲ್ಲಿನ ವಿಜ್ಞಾನಿಗಳೂ ಈ ಬಗ್ಗೆ ಒಂದು ಸಮ್ಮೇಳನ ನಡೆಸಿದ್ದಾರೆ. ಭಾರತದ ಹಲವು ಕಡೆಗಳಲ್ಲಿ ಹೀಲಿಯಂ ಪತ್ತೆಯಾಗಿದ್ದು ನಿಸರ್ಗದಲ್ಲಿ ತಂತಾನೇ ಬೆಸುಗೆಕಾರ್ಯ ನಡೆಯುತ್ತಿದೆಯೆಂದೂ ಕೆಲವು ವಿಜ್ಞಾನಿಗಳು ಹೇಳುತ್ತಿದ್ದಾರೆ. ಅಲ್ಪ ಶಕ್ತಿಯನ್ನು ಉಪಯೋಗಿಸಿ ಭಾರೀ ಶಕ್ತಿಯನ್ನು ಪಡೆಯಲು ಸಾಧ್ಯವಾದರೆ ಮಾನವ ಜನಾಂಗಕ್ಕೆ ಅದೊಂದು ವರವಾಗಿ ಪರಿಣಮಿಸಬಲ್ಲದು.

ಬೆಸುಗೆಗೆ ಅಗತ್ಯವಾದ ಭಾರಜಲದ ಕಣಗಳು ಸಾಗರದಲ್ಲಿ ಹೇರಳವಾಗಿ ದೊರೆಯುವುದರಿಂದ ಸಾಗರದ ನೀರೇ ಮೂಲ ವಸ್ತುವಾಗಿ ಸಾಗರವೇ ಶಕ್ತಿಯ ಅಕ್ಷಯ ಪಾತ್ರೆಯಾಗಬಹುದು. ಈ ಪ್ರಯೋಗಗಳು ಯಶಸ್ವಿಯಾದಲ್ಲಿ ಪ್ರತಿ ದೇಶದಲ್ಲೂ ಒಂದು ಮಿನಿ ಸೂರ್ಯನನ್ನೇ ಸ್ಥಾಪಿಸಬಹುದು. ಆಗ ವಿದ್ಯುತ್ತಿಗಾಗಲಿ, ಸೀಮೆಎಣ್ಣೆ, ಪೆಟ್ರೋಲುಗಳಿಗಾಗಲಿ, ಗೊಬ್ಬರಗಳಿಗಾಗಲಿ, ಅಷ್ಟೇ ಏಕೆ, ಖನಿಜ ಸಂಪತ್ತಿಗಾಗಲಿ ಪರದಾಡಬೇಕಾದ ಪ್ರಮೇಯವೇ ಇರಲಾರದು. ಜೊತೆಗೆ ಇಂಧನಕ್ಕಾಗಿ ಪರದಾಡಬೇಕಾದ ಪರಿಸ್ಥಿತಿಯೇ ಇರದು.

ಮುಂದುವರೆದ ರಾಷ್ಟ್ರಗಳಿಗೆ ಮಾತ್ರ ಈ ತಂತ್ರ ದೊರೆತಲ್ಲಿ ಮಿಕ್ಕ ರಾಷ್ಟ್ರಗಳ ಮೇಲೆ ಹಿಡಿತ ಸಾಧಿಸಬಹುದೆಂಬ ಸಂಶಯ ಮೇಲುನೋಟಕ್ಕೆ ಎದ್ದು ಕಂಡರೂ ವೈಜ್ಞಾನಿಕ ಸತ್ಯಗಳು ಯಾರೊಬ್ಬರ ಸೊತ್ತೂ ಅಲ್ಲದ ಈ ಕಾಲದಲ್ಲಿ ಈ ತಂತ್ರ ಅತಿ ಬೇಗ ವಿಶ್ವವ್ಯಾಪಿಯಾಗಬಲ್ಲದೆನ್ನುವುದರಲ್ಲಿ ಸಂಶಯವಿಲ್ಲ.

ಆದರೂ ಯಶಸ್ಸು ಸುಲಭವಾಗಿ ಸಿಕ್ಕೀತು ಎಂಬ ನಂಬಿಕೆಯಿಲ್ಲ. ನಿಸರ್ಗ ತನ್ನ ರಹಸ್ಯವನ್ನು ಸುಲಭವಾಗಿ ಬಿಟ್ಟುಕೊಡುವ ಹಾಗಿದ್ದರೆ 'ಬೀಜಾಣು ಬೆಸುಗೆ' ಎಂದೋ ಪ್ರಯೋಗಶಾಲೆಯಲ್ಲಿ ನಡೆದು ಈ ವೇಳೆಗೆ ನಾವು ಅದರ ಪ್ರಯೋಜನವನ್ನು ಉಣ್ಣಬೇಕಾಗಿತ್ತು.

ಒಂದು ಚಿಕ್ಕ ಸೂರ್ಯನನ್ನು ಮನೆಯಲ್ಲಿ ತಂದಿಟ್ಟುಕೊಂಡರೆ ಅದರಿಂದಾಗುವ ಪ್ರಯೋಜನವನ್ನು ನೆನೆಯಿರಿ: ವಿದ್ಯುತ್ತು ಬೇಡ, ಸೌರಶಕ್ತಿಯಿಂದ ಬ್ಯಾಟರಿಗಳನ್ನು ತಯಾರಿಸಬಹುದು, ಸೌರಶಕ್ತಿಯಿಂದ ಒಲೆ ಹತ್ತಿಸಬಹುದು, ಅದೇ ರೀತಿ ಸೌರಶಕ್ತಿಯಿಂದಲೇ ಗೊಬ್ಬರ ಇತ್ಯಾದಿಗಳನ್ನೂ ತಯಾರಿಸಬಹುದು... ಪ್ರಯೋಜನದ ಪಟ್ಟಿಯನ್ನು ಹೀಗೆಯೆ ಬೆಳೆಸುತ್ತಾ ಹೋಗಬಹುದು.

ಕೊಠಡಿಯ ಉಷ್ಣತೆಯಲ್ಲಿ ಬೀಜಾಣು ಬೆಸುಗೆ ಸಾಧ್ಯವಾದದ್ದೇ ಆದಲ್ಲಿ ಪರಮಾಣು ಕ್ರಿಯೆಯ ದುರಂತದ ಹಂತದಿಂದ ಮುಕ್ತವಾಗಿರುವ ಮತ್ತೊಂದು ಮಜಲಿಗೆ ಈ ಪ್ರಪಂಚ ಮುಟ್ಟಲಿದೆ. ಆ ದಿನ ಬೇಗ ಬರಲಿ, ಎಂದು ಆಶಿಸೋಣ. (ವಿವಿಧ ಮೂಲಗಳಿಂದ) ●



ನಾನು ಹೊರಡಿಸುತ್ತಿದ್ದ 'ಸಮಾಜ' ಮಾಸಪತ್ರಿಕೆ ಆಗ ತಾನೆ ಮೂರನೇ ವರ್ಷದಲ್ಲಿ ಕಾಲಿರಿಸಿತ್ತು. ನನ್ನ ಪತ್ರಿಕೆಯ ಪ್ರಚಾರದ ಜೊತೆಗೆ ಬೆಂಗಳೂರಿನ 'ಪ್ರಜಾಮತ' ಮತ್ತು ಹುಬ್ಬಳ್ಳಿಯ 'ತರುಣ ಕರ್ನಾಟಕ' ದಿನಪತ್ರಿಕೆಯ ಏಜನ್ಸಿಯನ್ನೂ ಮಾಡುತ್ತಿದ್ದೆ. ಅದರಿಂದಾಗಿ ನಾನು ಮೇಲಿಂದ ಮೇಲೆ 'ತರುಣ ಕರ್ನಾಟಕ' ಆಫೀಸಿಗೆ ಹೋಗಿ ಬರುತ್ತಿದ್ದೆ. ಆಗ ಬಸವರಾಜರು 'ಸಂಯುಕ್ತ ಕರ್ನಾಟಕ'ದಲ್ಲಿ ಕೆಲವು ದಿನ ಸೇವೆ ಸಲ್ಲಿಸಿ 'ತರುಣ ಕರ್ನಾಟಕ'ಧಲ್ಲಿ ಕೆಲಸಕ್ಕೆ ಬಂದು ಸೇರಿದ್ದರು. ಅಲ್ಲಿಯೇ ನನ್ನ ಅವರ ಸ್ನೇಹಕ್ಕೆ ನಾಂದಿಯಾದದ್ದು.

''ನಿಮ್ಮ ಒಂದಾಣೆ ಮಾಲೆಯ ಕಥೆಗಳನ್ನೆಲ್ಲ ಓದಿದ್ದೇನೆ. ತುಂಬಾ ಚೆನ್ನಾಗಿವೆ,'' ಎಂದವರು ಮಾತನ್ನಾರಂಭಿಸಿದ್ದರು.

# ಮರೆಯಲಾಗದ ಕಟ್ಟೀಮನಿಯವರು

*ಭಾಲಚಂದ್ರ ಘಾಣೇಕರ*

ಬಸವರಾಜ ಕಟ್ಟೀಮನಿಯವರು ದಿವಂಗತರಾಗಿ ದಿನಗಳ ಮೇಲೆ ದಿನಗಳು ಉರುಳುತ್ತಿದ್ದಂತೆ ಅವರು ನನಗಿತ್ತ ಸಹಕಾರ ಮತ್ತು ಸಹೋದರನಂತೆ ತೋರುತ್ತಿದ್ದ ಸವಿನೆನಹುಗಳು ಮರುಕಳಿಸಿ ಬರುತ್ತಲಿವೆ.

ನನ್ನ ಅವರ ಪ್ರಥಮ ಪರಿಚಯವಾದದ್ದು 1937ರ ಪ್ರಾರಂಭದಲ್ಲಿ. ಅವರಿಗಾಗ ಕೇವಲ ಹದಿನೇಳು ವರ್ಷ ವಯಸ್ಸು. ನಾನು ಇಪ್ಪತ್ತಾರು ವರುಷದವನಾಗಿದ್ದೆ. ನನಗಿಂತ ಒಂಭತ್ತು ವರ್ಷಕ್ಕೆ ಕಿರಿಯರಾಗಿದ್ದರೂ ಸಾಮಾಜಿಕ ಪ್ರಜ್ಞೆ ಮತ್ತು ಸೃಜನಶೀಲತೆಯಲ್ಲಿ ಅವರು ನನಗಿಂತ ಪ್ರೌಢರಾಗಿದ್ದರೆಂದೇ ಹೇಳಬೇಕು.

''ಸಾಹಿತ್ಯದಲ್ಲಿ ನಿಮ್ಮಷ್ಟು ಪಳಗಿದವನಲ್ಲ. ಏನೋ ರಾಜಕೀಯ ಪರಿಸರದಲ್ಲಿ ಸ್ಫೂರ್ತಿ ಬಂದು ಕೆಲವು ಕತೆಗಳನ್ನು ಬರೆದಿದ್ದೇನೆ ಅಷ್ಟೆ,'' ಎಂದು ನಾನು ಹೇಳಿದ್ದೆ.

''ನಿಮ್ಮ 'ಸಮಾಜ' ಪತ್ರಿಕೆಯೂ ಚೆನ್ನಾಗಿದೆ, ಒಳ್ಳೇ ಸಾಹಸ ನಿಮ್ಮದು,'' ಮತ್ತಷ್ಟು ಹೊಗಳಿದರು.

''ಅದೇನು ಮಹಾ, ನಿಮ್ಮಂಥ ಬರಹಗಾರರ ಲೇಖನಗಳನ್ನು ಪಡೆದು ಒಂದು ಸ್ವತಂತ್ರ ಉದ್ಯೋಗ ಮಾಡಬೇಕೆಂದು ಬಯಸಿ

ಇದನ್ನು ನಡೆಸುತ್ತಾ ಇದ್ದೇನೆ,'' ಎಂದು ಉತ್ತರಿಸಿದೆ.

ಮುಂದೆ ಒಂದು ವಾರದಲ್ಲೇ 'ಸಮಾಜ'ಕ್ಕಾಗಿ ಒಂದು ಕಥೆಯನ್ನು ಬರೆದುಕೊಂಡು ಕಟ್ಟೀಮನಿಯವರು ಧಾರವಾಡಕ್ಕೆ ಬಂದು ನನ್ನನ್ನು ಕಂಡರು. ಪತ್ರಿಕೆಯ ಸುಧಾರಣೆಗಾಗಿ ಕೆಲವು ಸೂಚನೆಗಳನ್ನೂ ಮಾಡಿದರು. ಮೆಲ್ಲನೆ ತಮ್ಮ ಸ್ನೇಹಹಸ್ತವನ್ನು ಚಾಚತೊಡಗಿದರು.

ಮತ್ತೊಂದು ಸಲ ಬಂದಾಗ, ''ನಾನು ಸಹ ಸಂಪಾದಕನಾಗಿ ನಿಮ್ಮ ಜೊತೆಗೆ ಪತ್ರಿಕೆಯ ಕೆಲಸ ಮಾಡಲು ಬರಬಹುದೇ?'' ಎಂದು ಸಂಕೋಚಪಡುತ್ತ ಕೇಳಿದರು.

ನಾನು ಹಿಂದೆ ಮುಂದೆ ನೋಡದೆ ''ಅವಶ್ಯವಾಗಿ ಬನ್ನಿ,'' ಎಂದು ಹೇಳಿದೆ. ಆದರೂ ಇಬ್ಬರ ಜೀವನ ಇದರ ಮೇಲೆ ಸಾಗಬಹುದೇ ಎಂಬ ವಿಚಾರ ನನ್ನ ತಲೆಯಲ್ಲಿ ಸುಳಿಯುತ್ತಲಿತ್ತು. ಅವರು ಸಂಬಳದ ಬಗ್ಗೆ ಯಾವ ವಿಚಾರವನ್ನೂ ಮಾಡದೆ ಆತ್ಮ ವಿಶ್ವಾಸದಿಂದ ಗಂಟುಮೂಟೆ ಕಟ್ಟಿಕೊಂಡು ಧಾರವಾಡಕ್ಕೆ ಬಂದೇ ಬಿಟ್ಟರು.

ಕೆರೆ ಕೆಳಗಿನ ಓಣಿಯಲ್ಲಿ ನಮ್ಮ ಕಾರ್ಯಾಲಯವಿತ್ತು. ಅಲ್ಲಿಯೇ ಅವರು ಮಲಗುತ್ತಿದ್ದರು. ಖಾನಾವಳಿಯಲ್ಲಿ ಊಟ, ನಮ್ಮ ಮನೆಯಲ್ಲಿಯೇ ಸ್ನಾನ, ಉಪಾಹಾರ. ಅವರ ಎಲ್ಲ ವೆಚ್ಚವನ್ನೂ ನಾನು ನೋಡಿಕೊಳ್ಳುತ್ತಿದ್ದೆ. ಅವರು ಒಳ್ಳೆಯ ಉತ್ಸಾಹದಿಂದ ಪತ್ರಿಕೆಯ ಏಳ್ಗೆಗಾಗಿ ದುಡಿಯತೊಡಗಿದರು. ಮೇಲು ಕೀಳೆನ್ನದೆ ಇಬ್ಬರೂ ಕೂಡಿಯೇ ಪತ್ರಿಕೆಯ ಅಂಚೆಯ ಕೆಲಸ, ಪಾರ್ಸಲ್ ಕಟ್ಟುವ ಕೆಲಸ ಎಲ್ಲವನ್ನೂ ಮಾಡುತ್ತಿದ್ದೆವು.

''ನೀವು ನನಗಿಂತ ಹಿರಿಯರು. ಏಕವಚನದಲ್ಲಿ ಕರೆಯುವುದನ್ನು ಬಿಟ್ಟು ಬಹುವಚನದಲ್ಲಿ ಏಕೆ ಕರೆಯುತ್ತೀರಿ? ಅದು ಸರಿ ಕಾಣುವುದಿಲ್ಲ,'' ಎಂದು ಕೇಳಿದ್ದರು. ಅದು ಅವರ ಸೌಜನ್ಯದ ನುಡಿಯಾಗಿತ್ತು. ಆದರೆ ಏಕವಚನದಲ್ಲಿ ಹಾಗೆ ಕರೆಯುವುದು ನನಗೆ ಹಿಡಿಸುತ್ತಿರಲಿಲ್ಲವಾದುದರಿಂದ ಬಹುವಚನದಲ್ಲೇ ಕರೆಯುತ್ತಿದ್ದೆ.

1937ರ ಜೂನ್ ತಿಂಗಳಲ್ಲಿ 'ಪ್ರಜಾಮತ'ದ ಸಂಪಾದಕರಾಗಿದ್ದ ಶ್ರೀ ಬಿ.ಎನ್.ಗುಪ್ತರು ಧಾರವಾಡಕ್ಕೆ ಬಂದಿದ್ದರು. ಅವರಿಗೆ ಮರಾಠಿ ಹಾಗೂ ಹಿಂದಿಯಿಂದ ಅನುವಾದಿಸಬಲ್ಲ ಬರಹಗಾರರೊಬ್ಬರು ಬೇಕಾಗಿದ್ದರು. ನಾನು ಆ ಕೆಲಸಕ್ಕೆ ಬರಬೇಕೆಂದು ಅವರ ಅಪೇಕ್ಷೆಯಿತ್ತು. ಅನಾಯಾಸ ನನಗಾಗಿ ಬಂದ ಕೆಲಸ ಬಿಡಬಾರದೆಂದು ನನಗನಿಸಿತು. 'ಸಮಾಜ'ದ ಮೇಲೆಯೇ ಅವಲಂಬಿಸುವ ಒಬ್ಬನ ಭಾರವಾದರೂ ತಪ್ಪುವದೆಂದು, ಕಟ್ಟೀಮನಿಯವರ ಒಪ್ಪಿಗೆ ಪಡೆದು ಬೆಂಗಳೂರಿಗೆ ಹೋಗಲು ನಿರ್ಧರಿಸಿದೆ. 'ಸಮಾಜ'ವನ್ನು ಆಗ ವಿಜಯ ಪ್ರೆಸ್ಸಿನಲ್ಲಿ ಮುದ್ರಿಸುತ್ತಿದ್ದೆವು. ಪ್ರೆಸ್ಸಿನವರಿಗೂ ಕಟ್ಟೀಮನಿಯವರಿಗೂ ಗಂಟು ಹಾಕಿ ಎಲ್ಲ ಹೊಣೆಯನ್ನು ಅವರಿಗೆ ಒಪ್ಪಿಸಿದೆ. ನನ್ನ ಏಜನ್ಸಿ ಕೆಲಸ ನೋಡಿಕೊಳ್ಳಲು ನನ್ನ ತಮ್ಮ ಶ್ರೀನಿವಾಸನಿಗೆ ಹೇಳಿ ನಾನು ಬೆಂಗಳೂರಿಗೆ ಪ್ರಯಾಣಿಸಿದೆ.

ಎರಡು ತಿಂಗಳು ಕಳೆಯುವಷ್ಟರಲ್ಲಿ ಕಟ್ಟೀಮನಿ ಅವರಿಗೆ ಒಂದು ಹೊಸ ವಿಚಾರ ಹೊಳೆಯಿತು. ಪತ್ರಿಕೆಯ ಪ್ರಚಾರ ಹಾಗೂ ಮಾರಾಟವನ್ನು ಹೆಚ್ಚಿಸಲು ಧಾರವಾಡಕ್ಕಿಂತ ಬೆಂಗಳೂರು ನಗರವೇ ಎಲ್ಲ ದೃಷ್ಟಿಯಿಂದ ಒಳ್ಳೆಯದು. ಬೆಂಗಳೂರಿನಲ್ಲಿಯೇ ಮುದ್ರಣದ ಏರ್ಪಾಟು ಮಾಡಬೇಕು, ಅಲ್ಲಿಂದಲೇ ಪತ್ರಿಕೆ ಹೊರಡಿಸುವ ವ್ಯವಸ್ಥೆ ಮಾಡಬೇಕೆಂದು ಪತ್ರ ಬರೆದರು. ಒಂಟಿಗರಾಗಿ ಧಾರವಾಡದಲ್ಲಿರಲು ಬೇಸರ ಬಂದಿರಬೇಕೆಂದು ನನಗನಿಸಿತು

ನನ್ನ ಮತ್ತೊಬ್ಬ ಬಾಲ್ಯ ಸ್ನೇಹಿತರಾದ ಶ್ರೀ ಗುರುನಾಥ ಜೋಶಿ ಅವರು ಆಗ ಕಾರಂತರ 'ಬಾಲ ಪ್ರಪಂಚ'ದ ಹಿಂದೀ ಅನುವಾದದ ಕೆಲಸಕ್ಕಾಗಿ ಬೆಂಗಳೂರಿನಲ್ಲಿಯೇ ಬೀಡು ಬಿಟ್ಟಿದ್ದರು. ದಿನಾಲು ಸಾಯಂಕಾಲ ನಾವಿಬ್ಬರೂ ಒಂದು ಕಡೆ ಸೇರುತ್ತಿದ್ದೆವು. ಕಟ್ಟೀ



ಮನಿ ಅವರಿಂದ ಬಂದ ಪತ್ರದ ವಿಷಯವನ್ನು ಅವರಿಗೆ ತಿಳಿಸಿದೆ. ಅವರು ಅದು ಯೋಗ್ಯ ವಿಚಾರವೇ ಎಂದರು.

ಜೋಶಿಯವರ ಪ್ರಯತ್ನದಿಂದಾಗಿ ಹೊಸಾಳಿ ಪ್ರಿಂಟಿಂಗ್ ಪ್ರೆಸ್ಸಿನವರಿಂದ 'ಸಮಾಜ' ಪತ್ರಿಕೆಯ ಮುದ್ರಣ ಮಾಡಿಕೊಡುವ ಆಶ್ವಾಸನೆಯು ದೊರೆಯಿತು. ವಿಶ್ವೇಶ್ವರಪುರ ಸರ್ಕಲ್ಲಿನಲ್ಲಿ ಶಿಂಧೆಯವರ ವಠಾರದಲ್ಲಿ ಒಂದು ಬಾಡಿಗೆ ಮನೆಯೂ ದೊರೆಯಿತು. ಸಮಸ್ಯೆ ಬಗೆಹರಿದಂತಾಯಿತು.

ಕಟ್ಟೀಮನಿಯವರಿಗೆ ಇದನ್ನು ತಿಳಿಸುವುದೇ ತಡ, ಅವರು 'ಸಮಾಜ'ದ ಎಲ್ಲ ಸಾಮಗ್ರಿಗಳೊಂದಿಗೆ ಬೆಂಗಳೂರಿಗೆ ಬಂದು ನನ್ನನ್ನು ಕೂಡಿಕೊಂಡರು. ಅಲ್ಲಿಂದಲೇ ಪತ್ರಿಕೆಯ ಕೆಲಸವನ್ನು ಜೊತೆಜೊತೆಯಾಗಿ ಮುಂದುವರೆಸಿದೆವು. ಕಟ್ಟೀಮನಿಯವರು ನಿತ್ಯವೂ ಊಟ ಮುಗಿಸಿ ಪ್ರೆಸ್ಸಿಗೆ ಹೋಗಿ ಬರುತ್ತಿದ್ದರು. ಇಬ್ಬರೂ ಕೈಯಿಂದಲೇ ಅಡಿಗೆ ಮಾಡಿಕೊಂಡು ಹಾಯಾಗಿ ಇದ್ದೆವು. ಒಮ್ಮೊಮ್ಮೆ ನಾನು ಅಡಿಗೆಯಲ್ಲಿ ತೊಡಗಿದ್ದರೆ 'ಪ್ರಜಾಮತ'ಕ್ಕಾಗಿ ಅನುವಾದ ಮಾಡಲು ತಂದ ಲೇಖನಗಳನ್ನು ತಾವೇ ಅನುವಾದ ಮಾಡಿ ಇಟ್ಟು ಬಿಡುತ್ತಿದ್ದರು. ಈ ಬಗೆಯ ಗಾಢವಾದ ಸ್ನೇಹ ನಮ್ಮಲ್ಲಿ ಬೆಳೆಯ ತೊಡಗಿತ್ತು.

ದಿನಾಲು ಸಾಯಂಕಾಲ ವಾಯುವಿಹಾರಕ್ಕೆಂದು ನಾನು, ಕಟ್ಟೀಮನಿ ಮತ್ತು ಗುರುನಾಥ ಜೋಶಿ ಮೂವರೂ ಸೇರಿ ಲಾಲಬಾಗಿಗೆ ಹೋಗುತ್ತಿದ್ದೆವು. ರಜಾ ದಿನದಲ್ಲಿ ನಾವಿಬ್ಬರೂ ಸೇರಿ ಅಲ್ಲಿಯೇ ಸಮೀಪದಲ್ಲಿದ್ದ ಶ್ರೀ ಅ.ನ.ಕೃ ಅವರನ್ನು ಭೇಟಿಯಾಗಿ ಬರುತ್ತಿದ್ದೆವು.

ಕಟ್ಟೀಮನಿಯವರಿಗೆ ಓದುವುದರಲ್ಲೂ ಬರೆಯುವುದರಲ್ಲೂ ತುಂಬ ಆಸಕ್ತಿ.

ಅಂದು ಮುಂಜಾನೆ ಒಂಬತ್ತರ ಸುಮಾರಿಗೆ ಶಿವಾನಂದ ಗಾಳಿ ಫೋನಿಸಿ ಬ.ಕ.ನಿಧನರಾದರೆಂದು ತಿಳಿಸಿದಾಗ ನಂಬಲಾಗಲಿಲ್ಲ. ತಕ್ಷಣ ನಾನು, ಹೇಮಾ ಹೋದೆವು. ನಾವು ಹೋದಾಗ ಬಾಗಿಲಲ್ಲಿ ಕುಳಿತಿದ್ದ ಸ್ವಾಮಿಯೊಬ್ಬರು ನಮ್ಮನ್ನು 'ಸ್ವಾಗತಿಸಿದರು'. ಆ ಮನೆಯಲ್ಲಿ ಯಾವಾಗಲೂ ಮುಗುಳ್ನಗುತ್ತ ಸ್ವಾಗತಿಸುತ್ತಿದ್ದ ಬ.ಕ. ಹೆಣವಾಗಿ ಕುಳಿತಿದ್ದು ನೋಡಲಾಗದ ದೃಶ್ಯವಾಗಿತ್ತು. ಎಂದೂ ಯಾರನ್ನೂ ಯಾವುದಕ್ಕೂ ಅವಲಂಬಿಸದ ಬ.ಕ. ಈಗ ಎಲ್ಲದಕ್ಕೂ ಇತರರನ್ನು ಅವಲಂಬಿಸಿ ಕುಳಿತಿದ್ದರು. ಹೂ ಅರ್ಪಿಸಿ ಹೊರಗೆ ಬಂದು ಕುಳಿತೆವು. ಅವರ ಕಳೆದ ದಿನಗಳು, ಮಾಡಿದ ಪ್ರವಾಸಗಳು, ಆಡಿದ ಮಾತು-ಜಗಳ-ಪ್ರೀತಿಗಳು ಸುಳಿಸುಳಿಯಾಗಿ ರೀಲು ಬಿಚ್ಚತೊಡಗಿದವು. ಕಣ್ತುಂಬಿ ಕೂತುಬಿಟ್ಟೆ.

ದೊಡ್ಡ ದೊಡ್ಡ ಅಧಿಕರಿಗಳು ಬಂದರು. ನಾವು ಕೆಲವರು ಬ.ಕ. ಅವರಿಗೆ ಯೋಗ್ಯ ಸನ್ಮಾನವನ್ನು ತೋರಿಸಿ ಸರಕಾರ ತನ್ನನ್ನು ಗೌರವಿಸಿಕೊಳ್ಳಬೇಕು ಎಂದು ಹೇಳಿದೆವು. ಹೌದು ಎಂದರು. ಹೋದರು. ಮರಳಲಿಲ್ಲ. ಆದರೆ ದಯೆ ತೋರಿಸಿ ಶವ ಸಾಗಿಸಲು ಟ್ರಕ್ಕಿನ ವ್ಯವಸ್ಥೆ ಮಾತ್ರ ಮಾಡಿದರು. 1-30ಕ್ಕೆ ಶವ ಸಾಗಿಸುವುದು, ಬೆಳಗಾವಿ ಮೂಲಕ ಮಲಾಮರಡಿ ತಲುಪಲು ತಡವಾಗಬಾರದು ಎಂದು ನಿಶ್ಚಯವಾಗಿತ್ತು. ಸುಮಾರಾಗಿ ಅದೇ ಹೊತ್ತಿಗೆ ಒಂದಿಬ್ಬರು ಸಂಗಾತಿಗಳೊಂದಿಗೆ ಮಾಜಿ ಶಾಸಕರೊಬ್ಬರು ಆಗಮಿಸಿದರು. ಸ್ವಲ್ಪ ಹೊತ್ತು ವಿರಮಿಸಿದರು. ಟ್ರಕ್ಕನ್ನು ಬಾಗಿಲಲ್ಲಿ ನಿಲ್ಲಿಸಲಾಗಿತ್ತು. 1-55ಕ್ಕೆ ಶವವನ್ನು ಹೊರಗಿನ ಕಟ್ಟೆಯ ಮೇಲೆ ತಂದು ಕೂಡಿಸಿದರು. ಹೆಣ್ಣು ಮಕ್ಕಳು ಇತ್ಯಾದಿ ಕಾರಿನಲ್ಲಿ ಕೂತರು. ಮನೆ ಬಾಗಿಲು ಹಾಕಿದರು. ''ಕಟ್ಟೀಮನಿ ಅವರಿಗೆ ರಾಜಕೀಯ ಸನ್ಮಾನ ಆಗಲೇಬೇಕು, ಪೋಲೀಸು ವ್ಯಾನಿನಲ್ಲಿಯೇ ಶವ ಸಾಗಿಸಬೇಕು,'' ಎಂದು ಶಾಸಕರಿಗೆ ಸಂಗಡಿಗರು ಬಹುಶಃ ಸಮಯೋಚಿತ ಸಲಹೆ ನೀಡಿರಬೇಕು. ಸರಿ, ಮೂರ್ನಾಲ್ಕು ಜನರೊಡನೆ ಹತ್ತಿರದಲ್ಲೇ ಹೋಗಿ ಫೋನಿಸಿ ಬಂದರು ಗೆಲುವಿನ ವಿಜಯೋಲ್ಲಾಸ ಮುಖದ ಮೇಲೆ. ಮುಂದೆ ಒಂದು ತಾಸು ಎಲ್ಲರೂ ರಣಗುಟ್ಟುವ ಬಿಸಿಲಿನಲ್ಲಿ ರಸ್ತೆಯ ಬಂಡೆಯ ಮೇಲೆ; ಬ.ಕ. ಶವ ಹೊರಗಿನ ಕಟ್ಟೆಯ ಮೇಲೆ. ಯಾವುದಕ್ಕೂ ಯಾರ ಹಂಗೂ ಇಲ್ಲದೆ ಬದುಕಿದ್ದ ಬ.ಕ. ಈಗ ಇದನ್ನೆಲ್ಲ ನೋಡಿದ್ದರೆ ತಮ್ಮ ಶವ ತಾವೇ ಹೊತ್ತು ನಡೆದುಬಿಡುತ್ತಿದ್ದರೇನೊ? ಅಂತೂ ಮೂರು ಗಂಟೆಗೆ ಯಾರದೋ ಒಂದು, ಸರಿಯಾದ ಸ್ಥಿತಿಯಲ್ಲಿರದ, ಖಾಸಗಿ ವ್ಯಾನ್ ಕಳಿಸಲ್ಪಟ್ಟಿತು. ಅದರಲ್ಲಿ ಸಾಗಿಸುವ ಧೈರ್ಯ ಯಾರಿಗೂ ಆಗಲಿಲ್ಲ. ಈಗೇನು ಮಾಡುವುದು? ಶಾಸಕರಿಗೆ ಮತ್ತೆ ಸಲಹೆ: '' ಈ ಪ್ರಸಂಗವನ್ನು ನೀವು ಸರಿಯಾಗಿ ಉಪಯೋಗಿಸಲಿಕ್ಕೇ ಬೇಕು. ಕೂಡಲ ಪ್ರಸಂಗದ ಹಂಗ ಇದೂ ಕೀರ್ತಿ ತರುವ ಪ್ರಸಂಗ.'' ಹೌದು ಎಂದರು. ಆದರೆ ಜನ ಕೇಳಬೇಕಲ್ಲ. ಬಾಗಿಲಲ್ಲಿ ಹೆಣ ಕೂಡಿಸಿ ಒಂದು ತಾಸಾಗಿತ್ತು. ನಾವು ನಾಲ್ಕಾರು ಜನ ಕೂಡಿ ಕಟ್ಟೆಯಿಂದ ಎತ್ತಿ ಬ.ಕ.ರನ್ನು ಟ್ರಕ್ಕಿಗೆ ಹತ್ತಿಸಿದೆವು. ಸ್ವಾಮಿ - ಶಾಸಕ-ಸಂಗಡಿಗರು ಕಾರಸ್ಥರಾದರು. ನಾನು ಟ್ರಕ್ ಮುಟ್ಟಿ ನಮಸ್ಕರಿಸಿದೆ. ಅಳು ತಡೆಯಲಾಗಲಿಲ್ಲ.....

*ಸಿದ್ಧಲಿಂಗ ಪಟ್ಟಣಶೆಟ್ಟಿ*

('ಸಂಕ್ರಮಣ'ದಿಂದ ಸಂಗ್ರಹೀತ)

ರೆಗೂ ವಿಚಾರ ಮಾಡುತ್ತ, ಕಥೆ-ಕಾದಂಬರಿಯ ಹೊಳಹು ಹಾಕುತ್ತ ಕುಳಿತಿರುತ್ತಿದ್ದರು. ಪೆನ್ನಿಗೆ ಬಿಡುವೇ ಇರುತ್ತಿರಲಿಲ್ಲ. ಆ ಎಳೆ ವಯಸ್ಸಿನಲ್ಲಿಯೇ 'ಗಾರ್ಕಿ'ಯಂತೆ ದೊಡ್ಡ ಕಾದಂಬರಿಕಾರನಾಗಬೇಕೆಂದು ಗುರಿ ಇಟ್ಟು ಕೊಂಡಿದ್ದರು. ನನ್ನ ಹಾಗೂ ಗುರುನಾಥ ಜೋಶಿಯವರ ಎದುರಿನಲ್ಲಿ ಒಂದೆರಡು ಸಲ ಆ ಮಾತು ಸಹ ಆಡಿ ತೋರಿಸಿದ್ದರು. ನನಗೂ ಏನಾದರೂ ಬರೆಯಿರಿ ಎನ್ನುತ್ತಿದ್ದರು. 'ಪ್ರಜಾಮತ'ದ ಕೆಲಸವೇ ನನಗೆ ಸಾಕಾಗಿ ಹೋಗುತ್ತಿತ್ತು. ಮೇಲಾಗಿ ನಾನು ಸಂಸಾರಿಗ. ಬನವಾಸಿಯಲ್ಲಿ ನನ್ನ ಹಿರಿಯ ಮಗ ಮನೋಹರನ ಜನನವಾಗಿತ್ತು. ಬೇಗನೆ ಮನೆಯವರನ್ನು ಬೆಂಗಳೂರಿಗೆ ಕರೆದು ತರುವ ವಿಚಾರ ನಡೆದಿತ್ತು. ಬರವಣಿಗೆಗಿಂತ ನನ್ನ ಒಂದಾಣೆ ಮಾಲೆಯ ಪುಸ್ತಕಗಳನ್ನು ಅಲ್ಲಿ-ಇಲ್ಲಿ ಮಾರಾಟಕ್ಕಿಟ್ಟು ಹಣ ಕೂಡಿಸುವುದರ ಕಡೆಗೇ ನನ್ನ ಗಮನ ಹರಿಯುತ್ತಿತ್ತು.



'ಸಮಾಜ' ಪತ್ರಿಕೆಯನ್ನು ಉಚ್ಚಮಟ್ಟಕ್ಕೆ ತಂದು ನಾವಿಬ್ಬರೂ ಜೊತೆಯಾಗಿರುವುದು ಕೆಲವೇ ತಿಂಗಳಲ್ಲಿ ಮೈಸೂರು ರಾಜಕೀಯ ಆಂದೋಲನದಿಂದಾಗಿ 'ಪ್ರಜಾಮತ'ಕ್ಕೆ ಸರಕಾರದವರು ಮುಟ್ಟುಗೋಲು ಹಾಕಿ ಅದನ್ನು ನಿಲ್ಲಿಸಿಬಿಡಬೇಕೆಂದು ಆಜ್ಞೆ ಹೊರಡಿಸಿದರು. ಆದ್ದರಿಂದ ಶ್ರೀ ಗುಪ್ತರು ಹುಬ್ಬಳ್ಳಿಯಿಂದ 'ಪ್ರಜಾಮತ'ವನ್ನು ಹೊರಡಿಸಬೇಕೆಂದು ನಿರ್ಧರಿಸಿ ತಮ್ಮ ಸರಂಜಾಮಿನೊಂದಿಗೆ ಪ್ರೆಸ್ಸನ್ನು ಹುಬ್ಬಳ್ಳಿಗೆ ಸ್ಥಳಾಂತರಿಸಿದರು. ಜೊತೆಗೆ ನಾನೂ ಹೊರಡಬೇಕಾಯಿತು.

ಹೊಸಾಳಿಯವರಿಗೆ ಈ ಎಲ್ಲ ಪರಿಸ್ಥಿತಿಯನ್ನು ತಿಳಿಸಿದಾಗ ಅವರು ಕಟ್ಟೀಮನಿಯವರು ತಮ್ಮಲ್ಲಿಯೇ ಇದ್ದು ಕೆಲಸ ಮಾಡಲಿ ಎಂದರು. ವಾಸವಾಗಿರಲು ಒಂದು ಪ್ರತ್ಯೇಕ ರೂಮನ್ನೂ ಕೊಟ್ಟರು. ಹೊಸಾಳಿಯವರಿಗೂ ಪತ್ರಿಕೆಯ ಬಗ್ಗೆ ತುಂಬಾ ಆಸ್ಥೆಯಿತ್ತು. ತಾವೂ ಅದರ ಪಾಲುಗಾರರಾಗಬೇಕೆಂಬ ಅಪೇಕ್ಷೆಯೂ ಇತ್ತು. ಅಂತೆಯೇ ಬಸವರಾಜರಿಗೆ ಎಲ್ಲ ಸೌಕರ್ಯವನ್ನೂ ಮಾಡಿಕೊಟ್ಟರು. ಆದರೂ ಕಟ್ಟೀಮನಿಯವರಿಗೆ ಈ ಕೆಲಸ ಭಾರವೆನಿಸತೊಡಗಿತು. ತಮ್ಮ ಬರವಣಿಗೆಯ ಕೆಲಸಕ್ಕೆ ಬಿಡುವು ದೊರೆಯುವುದಿಲ್ಲವೆಂದು ಮರುಗಿದರು. ನನ್ನ ಒಪ್ಪಿಗೆ ಪಡೆದು ಮುಂದೆ ಎರಡು ಮೂರು ತಿಂಗಳಲ್ಲೇ ಕೆಲವು ಕರಾರುಗಳೊಂದಿಗೆ ಹೊಸಾಳಿಯವರಿಗೇ ಪತ್ರಿಕೆ ಒಪ್ಪಿಸಿ ತಮ್ಮೂರಿಗೆ ಮರಳಿದರು. ಅವರಿಗೂ ಉಪಜೀವನದ ಸಮಸ್ಯೆ ಕಾಡುತ್ತಿತ್ತು. ಅದಕ್ಕಾಗಿ ಕೆಲವು ದಿನ ಬಿ.ಶಿವಮೂರ್ತಿಶಾಸ್ತ್ರಿಗಳ 'ಸ್ವತಂತ್ರ ಕರ್ನಾಟಕ'ದಲ್ಲಿಯೂ, ಗದುಗಿನ 'ಕರ್ನಾಟಕ ಬಂಧು'ವಿನಲ್ಲಿಯೂ ಮತ್ತೆ ಕೆಲವು ದಿನ ಧಾರವಾಡದ 'ರಾಜ ಹಂಸ'ದಲ್ಲಿಯೂ ಕೆಲಸ ಮಾಡುತ್ತ ತಮ್ಮ ಲೇಖನ ವ್ಯವಸಾಯ ನಡೆಸಿದ್ದರು. ಎಲ್ಲಿದ್ದರೂ ಪರಸ್ಪರ ಭೆಟ್ಟಿಯಾದಾಗಲೇ ಇಬ್ಬರಿಗೂ ಸಮಾಧಾನವೆನಿಸುತ್ತಿತ್ತು. ರಜಾ ದಿನಗಳಲ್ಲಿ ಒಮ್ಮೊಮ್ಮೆ ಗದುಗಿನವರೆಗೆ ಹೋಗಿ ಅವರನ್ನು ಕಂಡು ಬರುತ್ತಿದ್ದೆ. ನಾನಾ

# ಕಡೆಯ ಭೆಟ್ಟಿ

ಬಸವರಾಜ ಕಟ್ಟೀಮನಿಯವರು ಧಾರವಾಡದಲ್ಲಿ ಇದ್ದಾಗಲೆಲ್ಲ ಅವರೊಂದಿಗೆ ಕಾಲ ಕಳೆಯುವುದು ನನ್ನ ಇತ್ತೀಚಿನ ವಾಡಿಕೆಯಾಗಿತ್ತು. ಅಕ್ಟೋಬರ್ 21 ಹಾಗೂ 22ರಂದು ಅವರೊಂದಿಗೆ ಇದ್ದದ್ದು ಕಡೆಯ ಭೆಟ್ಟಿಯಾಗುತ್ತದೆಂದು ಅನಿಸಿರಲಿಲ್ಲ.

ಈ ಎರಡು ದಿನಗಳಲ್ಲಿ ಕಟ್ಟೀಮನಿಯವರು ನನ್ನೆದುರು ಕನ್ನಡನಾಡು ನುಡಿಯ ಬಗ್ಗೆ ಹಲವಾರು ವಿಷಯಗಳನ್ನು ಹೇಳಿದ್ದರು. ಧಾರವಾಡ ಹಾಗೂ ಕೆಲ ಸಾಹಿತಿಗಳನ್ನು ನೆನಪಿಸಿಕೊಂಡಿದ್ದರು. ದಿ. 21ರಂದು, ಶನಿವಾರ, ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಅವರ ಮನೆಗೆ ಹೋದೆ. ಮರುದಿನ ರವಿವಾರ. ರಜೆಯಾದ್ದರಿಂದ ನಮ್ಮೂರಿಗೆ ಹೋಗಿ ಬರುವೆ ಎಂದೆ. ಬೇಡ ಎಂದರು. "ನಾಳೆ ಮುಂಜಾನೆ ಎಂಟಕ್ಕೆ ನಮ್ಮನೀಗೆ ಬರ್ರಿ. ಒಂದು ರಿಕ್ಷಾ ಮಾಡಿಕೊಂಡು ಧಾರವಾಡದ ಸಾಹಿತಿಗಳನೆಲ್ಲಾ ಭೆಟ್ಟಾಗಿ ಬರೂಣು," ಎಂದರು. ನಂತರ ತಮ್ಮ ಎದೆ ನೋವಿನ ಬಗ್ಗೆ, ಹುಬ್ಬಳ್ಳಿಗೆ ಹೋಗಿ ನವೀಕರಿಸಿಕೊಂಡು ತಂದ ಸ್ವಾತಂತ್ರ್ಯಯೋಧರ ಉಚಿತ ರೇಲ್ವೆ ಪಾಸಿನ ಬಗ್ಗೆ ಹೇಳಿದ್ದರು. "ಮನೆಯಲ್ಲಿ ಕೂತುಕೊಳ್ಳಲಾಗದು, ಹೋಗಿ ಕಲ್ಯಾಣನಗರದ ಸಾಹಿತಿಗಳನ್ನ ಭೆಟ್ಟಾಗೂಣು ನಡೀರಿ," ಎಂದರು. ಸಂಜೆ ಏಳರವರೆಗೂ ಕಲ್ಯಾಣನಗರದಲ್ಲಿ ಅವರೊಂದಿಗೆ ತಿರುಗಾಡಿದೆ.

ಮರುದಿನ ರವಿವಾರ, ಅವರು ಹೇಳಿದ್ದಂತೆ ಮುಂಜಾನೆ ಎಂಟು ಗಂಟೆಗೆ ಅವರ ಮನೆ ಸೇರಿದೆ. "ಧಾರವಾಡ ನಗರದಿಂದ ಕನ್ನಡ ಕಾರ್ಯಕರ್ತರ ವತಿಯಿಂದ ವಿಧಾನಸಭಾಕ್ಕೆ ಸ್ಪರ್ಧಿಸಬೇಕೆಂದು ಕೊಂಡೀನಿ. ದಿ. 31ಕ್ಕ ನಾಮಪತ್ರ ಸಲ್ಲಸತೀನಿ" ಎಂದು ಹೇಳಿ ಮಾತು ಪ್ರಾರಂಭಿಸಿದ ಕಟ್ಟೀಮನಿಯವರೊಂದಿಗೆ ಮಧ್ಯಾಹ್ನ ಒಂದು ಗಂಟೆಯವರೆಗೂ ಮಾತನಾಡುತ್ತಿದ್ದೆ.

ಅಂದು ಸಂಜೆ ಐದು ಗಂಟೆಗೆ ಮತ್ತೆ ಅವರ ಮನೆಗೆ ಹೋದೆ. ಅವರ ಸೊಸೆ "ಈಗ, ಯುನಿವರ್ಸಿಟಿ ಕಡಿಗೆ ಅಡ್ಡ್ಯಾಡಾಕ ಹೋಗ್ಯಾರ ನೋಡ್ರಿ." ಎಂದರು. ನಾನು ಭರಭರನೇ ಅತ್ತ ಹೆಜ್ಜೆ ಹಾಕಿದೆ. (ಕರ್ನಾಟಕ ವಿಶ್ವವಿದ್ಯಾಲಯದ ಸಮೀಪದ ಬಡಾವಣೆ ನವೋದಯ ನಗರದಲ್ಲಿಯೇ ಕಟ್ಟೀಮನಿಯವರ ಮನೆ.) ಯುನಿವರ್ಸಿಟಿಯ ಬಸ್ ನಿಲ್ದಾಣದಲ್ಲಿ ಅವರು ಕಾಣಲಿಲ್ಲ. ನಾವು ವಾಕಿಂಗ್ ಹೋದಾಗ ಕೂಡುತ್ತಿದ್ದ ಸ್ಥಳವಾದ ಡಾ. ಪಾವಟೆಯವರ ಪ್ರತಿಮೆಯ ಬಳಿ ಹೋದೆ. ಕಪ್ಪು ಕನ್ನಡಕ ಹಾಕಿದ್ದ ಕೈಕೋಲು ಕುಣಿಸುತ್ತ, ಮೀಸೆಯ ಮೇಲೆ ಕೈ ಆಡಿಸುತ್ತ ಪೂರ್ವದಿಕ್ಕಿಗೆ ಮುಖ ಮಾಡಿ ಕುಳಿತಿದ್ದ ಕಟ್ಟೀಮನಿಯವರು ಕಂಡರು. ಎದುರಿಗೆ ಕಾಣುವ ಆಕಾಶವನ್ನೇ ನೋಡುತ್ತಿದ್ದ ಅವರನ್ನು ಮಾತಿಗೆಳೆದೆ. ನಂತರ ಕೈಗಡಿಯಾರ ನೋಡಿಕೊಂಡು, "ಆರೂವರಿ ಆತು. ಮನೀಗ್ಹೋಗೂಣು ನಡೀರಿ" ಎಂದು ಎದ್ದು ನಿಂತು ನಡೆಯತೊಡಗಿದರು. ಅವರ ಜತೆಗೆ ಹೆಜ್ಜೆ ಹಾಕುತ್ತಿದ್ದಂತೆಯೆ ನಿಂತು, "ನಾ ಹ್ಯಾಂಗ ಕಾಣ್ತೇನಿ? ದೂರದಿಂದ ನೋಡೀದ್ರ ಮುದುಕನಂಗ ಕಾಣ್ತೇನ್ಯಾ?" ಎಂದು ನನ್ನನ್ನು ಕೇಳಿದರು. "ನೀವು ಸಿಗರೇಟು ಸೇದೂದ ಬಿಟ್ರ ಯುವಕನಂಗ ಕಾಣ್ತೀರಿ" ಎಂದೆ. ನಕ್ಕು ಮುಂದೆ ಸಾಗಿದರು.

ನಡು ದಾರಿಯಲ್ಲೊಬ್ಬರು ಕಟ್ಟೀಮನಿಯವರಿಗೆ ಕೈ ಜೋಡಿಸಿ, ಅವರ ಕೈ ಹಿಡಿದು ತಮ್ಮ ತಲೆಗಿಟ್ಟುಕೊಂಡು "ಆಶೀರ್ವಾದ ಮಾಡ್ರಪಾ" ಎಂದರು. ಅವರೂ ಚುನಾವಣೆಯಲ್ಲಿ ಸ್ಪರ್ಧಿಸಬಯಸಿದ್ದವರೇ. ಕಟ್ಟೀಮನಿ ನಕ್ಕರು. "ಅಂಥಂಗ ಕಟ್ಟೀಮನಿಯವರಿಗೆ ಯಾವಾಗ ಸತ್ಕಾರಾ ಮಾಡ್ತೀರೀ ಡಾಕ್ಟರ್?" ಎಂಬ ಅವರ ಪ್ರಶ್ನೆಗೆ "ಎಪ್ಪತ್ತೈದು ವರ್ಷ ಆದಾಗ" ಎಂದೆ ನಾನು. "ಪುಣ್ಯೇಕ್ಕ ಸಂಟಿನರೀಗೆ ಅನ್ನಲ್ಲಾ" ಎಂದು ಕಟ್ಟೀಮನಿ ನಕ್ಕದ್ದೇ ನಕ್ಕದ್ದು.

ಸಂಜೆ ಏಳಾಗಿತ್ತು, ಅವರನ್ನು ಅವರ ಮನೆಗೆ ತಂದು ಬಿಟ್ಟಾಗ.

ಆದರೆ ಮರು ಮುಂಜಾನೆಯ ಏಳೂ ಐದರ ಪ್ರದೇಶ ಸಮಾಚಾರ ಅವರ ಕಣ್ಮರೆಯ ಕೆಟ್ಟ ಸುದ್ದಿಯನ್ನು ಬಿತ್ತರಿಸುತ್ತಿದ್ದಂತೆಯೇ ನಾನು 'ಅನಾಥ ಪ್ರಜ್ಞೆ' ಅನುಭವಿಸತೊಡಗಿದೆ.

**ಡಾ. ಆರ್. ಸಿ. ಅಗಡಿ**

ದರೂ 'ಪ್ರಜಾಮತ' ಮರಳಿ ಬೆಂಗಳೂರಿಗೆ ಹೋದ ಬಳಿಕ ಧಾರವಾಡದಲ್ಲೇ ಇದ್ದು ಕಾಗದ ವ್ಯಾಪಾರ, ಪುಸ್ತಕ ವ್ಯಾಪಾರ ಮಾಡುತ್ತ ಮುಂದೆ ಒಂದು ಚಿಕ್ಕ ಪ್ರೆಸ್ಸನ್ನು ಇಟ್ಟು ಪುಸ್ತಕ ಪ್ರಕಾಶನದ ಕಡೆಗೆ ಗಮನ ಹರಿಸಿದೆ.

1942ರಲ್ಲಿ ಕಟ್ಟೀಮನಿಯವರು 'ರಾಜ ಹಂಸ'ದಲ್ಲಿ ಕೆಲಸಕ್ಕಿರುವಾಗಲೇ ಚಲೇ ಜಾವ್ ಚಳುವಳಿಯ ಗುಪ್ತ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು. ಮುಂದೆ ಅವರು ಸ್ವಾತಂತ್ರ್ಯ ಯೋಧರಾಗಿ ಬಹಿರಂಗವಾಗಿ ಮೆರವಣಿಗೆಯಲ್ಲಿ ಭಾಗವಹಿಸಲು ಹೊರಟಾಗ ಅವರನ್ನು ಬೀಳ್ಕೊಡಲು ನಾನು ಹೋಗಿದ್ದೆ. ಗಾಂಧೀ ಜಯಂತಿಯ ದಿನ ನನ್ನನ್ನೂ ಸರಕಾರದವರು ಸಂಶಯದ ಮೇಲೆ ಕೈದು ಮಾಡಿ ಹಿಂಡಲಗಿ ಜೇಲಿಗೆ ಒಯ್ದಾಗ ಪುನಃ ನನ್ನ ಅವರ ಭೇಟಿಯಾಗಿತ್ತು. ಬಿಡುಗಡೆಯಾಗಿ ಬಂದ ಬಳಿಕ ಅವರು ಕೆಲವು ದಿನ ತಮ್ಮೂರಲ್ಲಿಯೂ ಕೆಲವು ದಿನ ಧಾರವಾಡದಲ್ಲಿಯೂ ಇದ್ದು ಒಂದರ ಮೇಲೊಂದು ಕಾದಂಬರಿ ಬರೆಯತೊಡಗಿದರು.

ನಾನಾದರೂ ಮತ್ತೆ ನನ್ನ ಪ್ರೆಸ್ಸಿನ ವ್ಯವಸಾಯ ಮಾಡುತ್ತ ಪ್ರತಿಭಾ ಗ್ರಂಥ ಮಾಲೆಯನ್ನು ಪ್ರಾರಂಭಿಸಿದೆ. ಕಟ್ಟೀಮನಿಯವರು ಆಗೊಮ್ಮೆ ಈಗೊಮ್ಮೆ ಬಂದು ನಮ್ಮಲ್ಲಿ ಉಳಿದು ಹೋಗುತ್ತಿದ್ದರು. ನಮ್ಮ ಗ್ರಂಥ ಮಾಲೆಯಲ್ಲಿ ಪ್ರಕಟಿಸಲು 'ಬೀದಿಯಲ್ಲಿ ಬಿದ್ದವಳು', 'ಮಣ್ಣು ಮತ್ತು ಹೆಣ್ಣು' ಕಾದಂಬರಿಗಳನ್ನು ಕೊಟ್ಟರು. ನಾನು ಏನೋ ಲೆಕ್ಕ ಹಾಕಿ ಸಂಭಾವನೆ ಕೊಟ್ಟೆ.

''ನೀವು ಬನಿಯಾ ಆಗಿದ್ದೀರಿ,'' ಎಂದು ತಮಾಷೆ ಮಾಡಿದರು. ಕೊನೆಗೆ ಅವರ ಅಪೇಕ್ಷೆಯಂತೆಯೇ ಸಂಭಾವನೆ ಸಲ್ಲಿಸಿದೆ.

ಕಟ್ಟೀಮನಿಯವರ ಹರಿತವಾದ ಲೆಕ್ಕಣಿಕೆಯಿಂದ ಒಂದರ ಮೇಲೊಂದು ಕಾದಂಬರಿಗಳು ಬೆಳಕಿಗೆ ಬರತೊಡಗಿದವು. 'ಜರತಾರಿ ಜಗದ್ಗುರು', 'ಮಾಡಿ ಮಡಿದವರು', 'ಜನಿವಾರ ಶಿವದಾರ', 'ನೀ ನನ್ನ ಮುಟ್ಟಬೇಡ', 'ಜ್ವಾಲಾಮುಖಿಯ ಮೇಲೆ' ಮೊದಲಾದ ಕಾದಂಬರಿಗಳು ಅವರಿಗೆ ಸಾಕಷ್ಟು ಕೀರ್ತಿಯನ್ನು ತಂದು ಕೊಟ್ಟವು. ಧರ್ಮದ ಹೆಸರಿನಲ್ಲಿ ನಡೆಯುವ ಅನಾಚಾರಗಳನ್ನೂ, ಸಮಾಜದಲ್ಲಿಯ ಡಾಂಭಿಕ ಮುಂದಾಳುಗಳು ನಡೆಸುವ ಸುಲಿಗೆ ಶೋಷಣೆಗಳನ್ನೂ ನಿರ್ದಾಕ್ಷಿಣ್ಯವಾಗಿ ಬೈಲಿಗೆಳೆಯುವ ಎದೆಗಾರಿಕೆ ಅವರದಾಗಿತ್ತು. 'ಜ್ವಾಲಾಮುಖಿಯ ಮೇಲೆ' ಕಾದಂಬರಿಗೆ ಸೋವಿಯೆಟ್ ದೇಶವು ನೆಹರೂ ಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿದಾಗ, ಅವರ ಸಾಹಿತ್ಯ ಸೇವೆಯನ್ನು ಮನ್ನಿಸಿ ಸಾಹಿತ್ಯ ಪರಿಷತ್ತಿನವರು ಬೆಳಗಾವಿಯ ಕನ್ನಡ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರನ್ನಾಗಿ ಅವರನ್ನು ಆಯ್ಕೆ ಮಾಡಿದಾಗ ನನಗಾದ ಆನಂದಕ್ಕೆ ಎಣೆಯೇ ಇರಲಿಲ್ಲ.

'ಮಾಡಿ ಮಡಿದವರು' ಪುಸ್ತಕ ಪ್ರಕಟವಾದನಂತರ ಅವರೊಮ್ಮೆ ಬಂದಾಗ ''ಇದು ತುಂಬ ರೋಮಾಂಚನಕಾರಿ ಕಾದಂಬರಿ. ಚೆನ್ನಾಗಿ ಬರೆದಿದ್ದೀರಿ,'' ಎಂದು ನಾನು ಅವರನ್ನು ಅಭಿನಂದಿಸಿದೆ.

''ನಿಮ್ಮ 'ಶಾಮನ ತಾಯಿ'ಯೂ ಶ್ರೇಷ್ಠವಾದ ಕಾದಂಬರಿ'' ಎಂದು ಪ್ರತಿಯಾಗಿ ನನ್ನನ್ನು ಶ್ಲಾಘಿಸಿದರು.

ನಾನು ಹೇಳಿದೆ, ''ಅದು ನನ್ನ ಸ್ವಂತ ಕೃತಿಯಲ್ಲ. ಸಾನೇ ಗುರೂಜಿಯವರ ಕಾದಂಬರಿಯ ಅನುವಾದ.''

''ಆದರೇನಾಯಿತು? ಮೂಲಕೃತಿಗೆ ಏನೂ ಅಪಚಾರವೆಸಗದಂತೆ ಅನುವಾದಿಸುವುದು ಸಾಮಾನ್ಯ ಕೆಲಸವಲ್ಲ,'' ಸಮಾಧಾನದ ನುಡಿಯಿಂದ ನನ್ನ ಬಾಯಿ ಮುಚ್ಚಿಸಿದರು. ಸ್ನೇಹಿತರನ್ನು ಗೌರವಿಸುವ ವಿಶಾಲ ದೃಷ್ಟಿ ಅವರದಾಗಿತ್ತು.

ಕಟ್ಟೀಮನಿಯವರು ಎಳೆವಯಸ್ಸಿನಲ್ಲಿಯೇ ಶಾಲಾ ಶಿಕ್ಷಣ ಮುಗಿಸಿ ಸಾಹಿತ್ಯ ರಂಗದಲ್ಲಿ ಕಾಲಿಟ್ಟು ಒಂದಕ್ಕಿಂತ ಒಂದು ಶ್ರೇಷ್ಠ ಕಾದಂಬರಿಗಳನ್ನು ಬರೆದು ಕನ್ನಡಕ್ಕೆ



ಅದ್ಭುತ ಸೇವೆ ಸಲ್ಲಿಸಿದ್ದು ನನಗೆ ಸೋಜಿಗವೆನಿಸಿತ್ತು.

ಒಂದು ದಿನ ನಾನೂ ಅವರೂ ನಮ್ಮ ಮನೆಯಲ್ಲಿ ಹರಟೆ ಹೊಡೆಯುತ್ತ ಚಹಾ ಪಾನ ಮಾಡುತ್ತಿದ್ದಾಗ ಸಹಜವಾಗಿ ನಾನು ನುಡಿದೆ,

''ಸರಸ್ವತಿಯು ನಿಮಗೆ ತುಂಬಾ ಒಲಿದಿರಬೇಕಲ್ಲವೇ? ಅಂತೆಯೇ ಆಕೆ ನಿಮ್ಮಿಂದ ಇಷ್ಟೊಂದು ಗ್ರಂಥಗಳನ್ನು ಬರೆಸಿದ್ದಾಳೆ.''

ಕೂಡಲೆ ಅವರ ಪ್ರತಿ ಉತ್ತರ ''ನನಗೆ ಸರಸ್ವತಿ ಒಲಿದರೆ ನಿಮಗೆ ಲಕ್ಷ್ಮಿಯೇ ಒಲಿದಿದ್ದಾಳೆ, ಇಷ್ಟೊಂದು ರಾಶಿ ಗ್ರಂಥಗಳನ್ನು ನಿಮ್ಮಿಂದ ಪ್ರಕಾಶನಗೊಳಿಸಿದ್ದಾಳೆ....... ಅಲ್ಲವೆ?'' ಇಬ್ಬರೂ ನಕ್ಕು ಬಿಟ್ಟೆವು.

ಹೊಸ ಕಾದಂಬರಿ ಸಿದ್ಧವಾದೊಡನೆ ನೇರವಾಗಿ ಸಮಾಜ ಪುಸ್ತಕಾಲಯಕ್ಕೆ ಬಂದು ''ಪ್ರಕಾಶನ ಮಾಡುವಿರಾ? ಮೊದಲ ಚಾನ್ಸ್ ನಿಮಗೇ'' ಎಂದು ತಮಾಷೆ ಮಾಡುತ್ತಿದ್ದರು. ನಮ್ಮ ಪ್ರೆಸ್ಸು ಬೇರೆ ಕೆಲಸದಲ್ಲಿ ತೊಡಗಿದ್ದರೆ ನಮ್ಮ ಅನಾನುಕೂಲವನ್ನು ತಿಳಿದು ಬೇರೆ ಪ್ರಕಾಶಕರಿಗೆ ಕೊಡುತ್ತಿದ್ದರು. ಇತ್ತೀಚಿನ ಆರೆಂಟು ವರ್ಷಗಳಲ್ಲಿ ಅವರು ನಮಗೆ 'ಹೆಂಡತಿ', 'ಮಾಜೀ ಮಂತ್ರಿ', 'ಹರಿಜನಾಯಣ', 'ಆಧುನಿಕ ಬಸವಣ್ಣ' ಮೊದಲಾದ ಕಾದಂಬರಿಗಳ ಪ್ರಕಾಶನದ ಪ್ರಥಮ ಚಾನ್ಸ್ ಕೊಟ್ಟು ಉಪಕರಿಸಿದ್ದಾರೆ.

ಮೊನ್ನೆ ಮೊನ್ನೆ (1989ರ ಅಕ್ಟೋಬರ್ 23) ಇದ್ದಕ್ಕಿದ್ದ ಹಾಗೆ ಈ ಜಗತ್ತನ್ನು ಬಿಟ್ಟು ಹೋದ ಶ್ರೀ ಬಸವರಾಜ ಕಟ್ಟೀಮನಿಯವರು ಈಗ ಬರಿ ನೆನಪು. ●

---

ಧಾರವಾಡದಲ್ಲಿ ಕಟ್ಟೀಮನಿಯವರು ಭಾಗವಹಿಸಿದ ಕೊನೆಯ ಸಾರ್ವಜನಿಕ ಕಾರ್ಯಕ್ರಮ (ದಿ.6-10-1989) ದ ಸಂದರ್ಭದಲ್ಲಿ ಡಾ: ಆರ್.ಸಿ. ಅಗಡಿಯವರು ತೆಗೆದ ಚಿತ್ರ.

# ಬಾನಿನಿಂದ ಬಿದ್ದೂ ಬದುಕಿದವರು

1944ರ ಮಾರ್ಚ್ ತಿಂಗಳು ಬ್ರಿಟಿಷ್ ವಾಯುಪಡೆಯ ಸೈನಿಕರ ಪಾಲಿಗೆ ದುರ್ದಿನದ ತಿಂಗಳು. ಜರ್ಮನ್ನರು ಬ್ರಿಟನ್ನಿನ ಮೇಲೆ ಸತತವಾಗಿ ಬಾಂಬ್ ದಾಳಿ ನಡೆಸಿದ್ದರು. ಬ್ರಿಟಿಷ್ ವಾಯುಪಡೆಯ ಸುಮಾರು ಒಂದು ಸಾವಿರ ಸೈನಿಕರು ಆ ದಾಳಿಗಳಲ್ಲಿ ಅಸುನೀಗಿದ್ದರು. ಅಂಥ ಒಂದು ದಾಳಿಗೆ ತುತ್ತಾಗಿಯೂ ಬದುಕಿ ಉಳಿದ ಸುದೈವಿ ಬ್ರಿಟನ್ ವಾಯುಪಡೆಯ ಸಾರ್ಜೆಂಟ್ ನಿಕ್ ಆಲ್ಕೆಮೇಡ್. ನಿಕ್ ಆಲ್ಕೆಮೇಡ್ ಕೇವಲ ಬಾಂಬ್ ದಾಳಿಯಿಂದ ಮಾತ್ರ ಬದುಕಿ ಉಳಿದಿದ್ದು ಮಹತ್ವದ್ದಲ್ಲ; 5,500 ಮೀಟರ್ ಎತ್ತರದಿಂದ ಬಿದ್ದೂ ಬದುಕಿ ಉಳಿದದ್ದು ವಿಶೇಷ. ನಿಕ್ ಆಲ್ಕೆಮೇಡನಿದ್ದ ವಿಮಾನಕ್ಕೆ ಜರ್ಮನ್ ಬಾಂಬ್ ಶೆಲ್ ಬಂದು ಅಪ್ಪಳಿಸಿದ್ದರಿಂದ ವಿಮಾನದ ಹಿಂಭಾಗಕ್ಕೆ ಬೆಂಕಿ ಹತ್ತಿತು. ವಿಮಾನ ಚಾಲಕನ ಆದೇಶದಂತೆ ಆಲ್ಕೆಮೇಡ್ ತಕ್ಷಣ ಪ್ಯಾರಾಶೂಟನ್ನು ಎತ್ತಿಕೊಳ್ಳಲು ಹವಣಿಸಿದ. ಆದರೆ, ಅಷ್ಟರಲ್ಲಿ ಪ್ಯಾರಾಶೂಟಿಗೂ ಬೆಂಕಿ ಹತ್ತಿಕೊಂಡಿತ್ತು. ವಿಮಾನಿನಲ್ಲಿ ಎಲ್ಲೆಡೆ ಬೆಂಕಿ ವ್ಯಾಪಿಸತೊಡಗಿತ್ತು. ಯಾವ ಕ್ಷಣದಲ್ಲಾದರೂ ವಿಮಾನ ಸ್ಫೋಟಗೊಳ್ಳಬಹುದಿತ್ತು. ಬೆಂಕಿಯಲ್ಲಿ ಸಿಕ್ಕಿ ಉರಿದು ಹೋಗುವುದರ ಬದಲು ವಿಮಾನದ ಕೆಳಗೆ ಬಿದ್ದು ಸಾಯುವುದೇ ಒಳ್ಳೆಯದು ಎನ್ನಿಸಿರಬೇಕು ನಿಕ್ ಆಲ್ಕೆಮೇಡ್‌ನಿಗೆ. ಆತ ವಿಳಂಬಿಸದೆ ವಿಮಾನದಿಂದ ಜಿಗಿದ. ಮುಂದಿನ ಒಂದು-ಒಂದೂವರೆ ನಿಮಿಷದಲ್ಲಿ ಹೇಳಿಕೊಳ್ಳುವಂತಹ ಅನುಭವವೇನೂ ಆಗಲಿಲ್ಲ. ಎಲ್ಲವೂ ಸುಖಪ್ರದ ಎನ್ನಿಸಿತು, ಪ್ರಶಾಂತ ಎನ್ನಿಸಿತು.

''ಜರ್ಮನಿಯ ನೆಲದ ಮೇಲೆ, 5,500 ಮೀಟರು ಎತ್ತರದಿಂದ ನಾನು ಕೆಳಗುರುಳುತ್ತಿದ್ದೆ. ಒಂದು ಬಗೆಯ ವಿಚಿತ್ರ ಶಾಂತಿಯನ್ನು ನಾನಾಗ ಅನುಭವಿಸುತ್ತಿದ್ದೆ. ಕುಳಿರ್ಗಾಳಿ ನನ್ನ ಮುಖಕ್ಕೆ ಅಪ್ಪಳಿಸುತ್ತಿತ್ತು. ನನ್ನ ಕಾಲುಗಳ ನಡುವೆ ನಕ್ಷತ್ರಗಳಿರುವಂತೆ ಭಾಸವಾಗುತ್ತಿತ್ತು. ಬೀಳುತ್ತಿದ್ದೇನೆ ಎಂದು ನನಗನ್ನಿಸುತ್ತಿರಲೇ ಇಲ್ಲ. ನಾನಾಗ ಗಾಳಿಯಲ್ಲಿ ತೇಲುತ್ತಿದ್ದೆ. ಹೌದು ನಿಜಕ್ಕೂ ನಾನು ತೇಲುತ್ತಿದ್ದೆ. ಹೀಗೆಯೇ ತೇಲುತ್ತಾ ತೇಲುತ್ತಾ ಕೊನೆಗೊಮ್ಮೆ ನಾನು ಸಾಯುತ್ತೇನೆ. ಹಾಗೆ ಸಾಯುವುದೇ ನಿಜವಾದರೆ ಅದಕ್ಕಾಗಿ ಹೆದರುವ ಕಾರಣವೇನೂ ಇಲ್ಲ...... ನನ್ನ

ಟಿ. ಎಂ. ಸುಬ್ಬರಾಯ

ಯೋಚನೆ ಎಲ್ಲಿ ನಿಂತಿತೋ, ಯಾವಾಗ ನಿಂತಿತೋ ನನಗೆ ತಿಳಿಯದು. ಪ್ರಜ್ಞೆ ತಪ್ಪಿ ಹೋಗಿತ್ತು. ತುಸು ಸಮಯದ ನಂತರ ನನಗೆ ಪ್ರಜ್ಞೆ ಬಂತು. ತಂಪು.... ತಂಪು.... ಸುತ್ತಲೂ ತಂಪು. ನಾನೂ ತಣ್ಣಗಾಗುತ್ತಿದ್ದೇನೆ ಎನ್ನಿಸುತ್ತಿತ್ತು. ನಾನು ಕುಳಿತುಕೊಳ್ಳಲು ಯತ್ನಿಸಿದೆ. ಹೌದು... ನಾನು ಭೂಮಿಯನ್ನು ತಲುಪಿದ್ದೆ. ಅಷ್ಟೇ ಅಲ್ಲ, ಬದುಕಿ ಉಳಿದಿದ್ದೆ.'' ನಿಕ್ ಆಲ್ಕಮೇಡ್ ಬರೆದಿಟ್ಟ ಅನುಭವವಿದು.

ಐದೂವರೆ ಕಿಲೋಮೀಟರ್ ಎತ್ತರದಿಂದ ಬಿದ್ದಿದ್ದರೂ ಆಲ್ಕಮೇಡ್ ಬದುಕಿ ಉಳಿದಿದ್ದು ಒಂದು ಪವಾಡ. ಅದಕ್ಕೆ ಕಾರಣ; ಆತ ಬಿದ್ದದ್ದು ಹಿಮದ ಮೇಲೆ. ಆತನನ್ನು ಜಾರದಂತೆ ಬಳಿಯಲ್ಲಿದ್ದ ಪೊದೆಗಳು ತಡೆದಿದ್ದವು. ಆದರೂ ಆತನ ದೇಹದ ತುಂಬಾ ಸಾಕಷ್ಟು



ಗಾಯಗಳಾಗಿದ್ದವು. ಸೊಂಟ ಹಾಗೂ ತೊಡೆಯ ಎಲುವುಗಳೂ ಸೇರಿದಂತೆ ಹಲ ವಾರು ಎಲುವುಗಳು ಮುರಿದುಹೋಗಿದ್ದವು.

ಆಕಾಶದಿಂದ ಭೂಮಿಗೆ ಬಿದ್ದು ಬದುಕಿ ಉಳಿದಷ್ಟಕ್ಕೇ ಆಲ್ಕೆಮೇಡ್‌ನ ಕತೆ ಮುಗಿಯ ಲಿಲ್ಲ. ಆತ ಜರ್ಮನ್ ಸೈನಿಕರಿಂದ ಬಂಧಿಸ ಲ್ಪಟ್ಟ. ಪ್ಯಾರಾಶೂಟಿನ ಸಹಾಯವಿಲ್ಲದೆ ಆತ ಭೂಮಿಯನ್ನು ತಲುಪಿದ ಎಂಬುದನ್ನು ಜರ್ಮನ್ ಸೈನಿಕರು ನಂಬಲಿಲ್ಲ. ಆಕಾಶ ದಿಂದ ಭೂಮಿಗೆ ಉರುಳಿಬಿದ್ದೂ ಬದುಕುಳಿದ ನಿಕ್ ಆಲ್ಕೆಮೇಡ್‌ನಂತೆಯೇ ಇನ್ನೂ ಕೆಲವರು ಅತಿ ಎತ್ತರದಿಂದ ಬಿದ್ದೂ ಬದುಕಿ ಉಳಿದವರಿ ದ್ದಾರೆ. ಇಂಥವರ ಬಗ್ಗೆ ಅಮೇರಿಕದ ಲೇಖಕ ಜಾನ್ ಅಂತೋನ್ ಆಡಮ್ಸ್ ''ಡ್ಯಾಗ್ಲಿಂಗ್ ಫ್ರಂ ದಿ ಗೋಲ್ಡನ್ ಗೇಟ್ ಬ್ರಿಡ್ಜ್ ಆ್ಯಂಡ್ ಅದರ ನ್ಯಾರೋ ಎಸ್ಕೇಪ್ಸ್'' ಎನ್ನುವ ಪುಸ್ತಕ ವೊಂದನ್ನು ಬರೆದಿದ್ದಾನೆ.

ಝೆಕೋಸ್ಲೋವಾಕಿಯದ ಗಗನಸಖಿ ವೆಸ್ನಾ ವ್ಯುಲೋವಿಕ್ ಹತ್ತು ಸಾವಿರ ಮೀಟರ್ ಎತ್ತರದಿಂದ ಕೆಳಗುರುಳಿಯೂ ಬದುಕಿ ಉಳಿ ದಿದ್ದಾಳೆ. ಇದು ನಡೆದದ್ದು 1972ರ ಜನವರಿ 26ರಂದು. ಝೆಕೋಸ್ಲೋವಾಕಿಯದ ಮೇಲೆ ವಿಮಾನ ಸಾಗುತ್ತಿದ್ದಾಗ ಕೆಳಗೆ ಬಿದ್ದು ಸೊಂಟ, ಕಾಲು, ಕೈ ಮುರಿದುಕೊಂಡಿದ್ದ ವೆಸ್ನಾ ವ್ಯುಲೋವಿಕ್ ಮೂರುದಿನಗಳವರೆಗೆ ಮೂರ್ಛಾವಸ್ಥೆಯಲ್ಲಿಯೇ ಇದ್ದಳು. ಅನಂ ತರ ಸ್ವಲ್ಪ ಪ್ರಜ್ಞೆ ಬಂದಿತಾದರೂ ಬಹಳ ದಿನಗಳವರೆಗೆ ಆಕೆ ಅರೆಪ್ರಜ್ಞಾವಸ್ಥೆಯ ಲ್ಲಿಯೇ ಇದ್ದಳು. ಕ್ರಮೇಣ ಆಕೆ ಸಂಪೂರ್ಣ ವಾಗಿ ಗುಣಮುಖಳಾದುದ್ದಲ್ಲದೆ, ಈಗ ಅಲ್ಲಿನ ವಿಚಾರಣಾ ವಿಭಾಗದ ಮುಖ್ಯಾಧಿಕಾ ರಿಣಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಳೆ. ಗಂಟೆಗೆ 192 ಕಿಲೋಮೀಟರ್ ವೇಗದಲ್ಲಿ, ತಲೆಕೆಳಗಾಗಿ ಆಕೆ ಭೂಮಿಗೆ ಉರುಳಿದ್ದಳು.

370 ಮೀಟರ್ ಎತ್ತರದಿಂದ ಭೂಮಿಗೆ ಉರುಳಿಬಿದ್ದು ಬದುಕಿದ ಇನ್ನೊರ್ವ ಸುದೈವಿ ಹ್ಯಾರಿ ಆರ್ಮಸ್ಟ್ರಾಂಗ್. 'ವೇಗವಾಗಿ ಬೀಸು ತ್ತಿದ್ದ ಗಾಳಿಯಿಂದಾಗಿ ಕಣ್ಣುಗಳನ್ನು ತೆರೆ ಯಲು ನನಗೆ ಸಾಧ್ಯವಾಗಲಿಲ್ಲ. ಆದರೆ, ಏನೂ ತೊಂದರೆಯಿಲ್ಲದೆ ಉಸಿರಾಟ ಸರಾಗ ವಾಗಿ ನಡೆಯುತ್ತಿತ್ತು. ಆರಂಭದಲ್ಲಿ ನಾನು ಎಲ್ಲಿಯೋ ತೇಲುತ್ತಿದ್ದೇನೆ ಎನ್ನಿಸುತ್ತಿತ್ತು. ಬೀಳುವಿಕೆಯ ವೇಗ ಅಧಿಕವಾಗುತ್ತಿದ್ದಂತೆ ಏನನ್ನೂ ಯೋಚಿಸುವ ಶಕ್ತಿ ನನ್ನಲ್ಲಿರಲಿಲ್ಲ' ಎಂದು ಆತ ತನ್ನ ಅನುಭವವನ್ನು ನಿರೂಪಿಸಿ ದ್ದಾನೆ. ಬಲೂನೊಂದರಿಂದ, 31,300 ಮೀಟರ್ ಎತ್ತರದಿಂದ ಧುಮುಕಿದ್ದ ಅಮೇರಿ ಕದ ವಾಯುಪಡೆಯ ಜೋಸೆಫ್ ಕಿಸಿಂಜರ್ ಉರುಳಿದ್ದ ವೇಗ ಗಂಟೆಗೆ 988 ಕಿಲೋಮೀಟ ರುಗಳಷ್ಟು. ಅದೃಷ್ಟವಶಾತ್ ಆಮ್ಲಜನಕದ ವ್ಯವಸ್ಥೆ ಮಾಡಿಕೊಂಡೇ ಆತ ಜಿಗಿದದ್ದರಿಂದ ಸಾವಿಗೆ ತುತ್ತಾಗಲಿಲ್ಲ.

ಬಿದ್ದ ಜಾಗದಲ್ಲಿ ಹಿಮವಿದ್ದುದು ಮತ್ತು ಅದೃಷ್ಟದ ಬೆಂಬಲ - ಇವರೆಲ್ಲ ಬದುಕಿ ಉಳಿದದ್ದಕ್ಕೆ ಕಾರಣವಾದ ಪ್ರಮುಖ ಅಂಶ ಗಳು.

1985ರ ಜೂನಿನಲ್ಲಿ, ಕ್ಯಾಲಿಫೋರ್ನಿಯದ ಸ್ಯಾನ್‌ಗ್ಯಾಬ್ರಿಯಲ್ ಪರ್ವತವನ್ನೇರುತ್ತಿದ್ದ ತರುಣನೊಬ್ಬ ಸಮತೋಲ ತಪ್ಪಿ ಉರುಳಿದ. 45 ಮೀಟರಿನಷ್ಟು ಉರುಳಿಬಿದ್ದ ಆತ 120 ಸೆಂಟಿಮೀಟರ್ ಆಳದ ಕೊಳವೊಂದರಲ್ಲಿ ಹೋಗಿಬಿದ್ದ. ಸೊಂಟ, ಮೊಣಕಾಲು, ಮೊಣಕೈ, ಎಲುವುಗಳು ಮುರಿದು, ಆಸ್ಪತ್ರೆ ಯಲ್ಲಿ ಮೂರುವರೆ ತಿಂಗಳು ಚಿಕಿತ್ಸೆ ಪಡೆದು ಆ ತರುಣ ಮೊದಲಿನಂತಾದ.

ಚಲನಚಿತ್ರಗಳಲ್ಲಿ ಸ್ಟಂಟ್ ಪೈಲಟ್ ಆಫೀ ಸರನಾಗಿ ಕಾರ್ಯನಿರ್ವಹಿಸುತ್ತಿದ್ದ ಫ್ರಾಂಕ್ ಕ್ಲಾರ್ಕ್‌ನದು ಇನ್ನೊಂದು ಬಗೆಯ ಅನುಭವ.

ತನ್ನ ಸೊಂಟಕ್ಕೆ ಹಗ್ಗ ಕಟ್ಟಿಕೊಂಡು, ಅದನ್ನು ವಿಮಾನದ ರೆಕ್ಕೆಗೆ ಕಟ್ಟಿ ಆಲ್‌ವಿಲ್ ಸನ್ ಎನ್ನುವ ನಟ ಹಾರಾಡುತ್ತಿರುವ, ಅವ ನನ್ನು ರಕ್ಷಿಸಲು ಹಿಂದಿನಿಂದ ವಿಮಾನದಲ್ಲಿ

ಫ್ರಾಂಕ್ ಕ್ಲಾರ್ಕ್ ಸಾಗುವ ದೃಶ್ಯದ ಚಿತ್ರೀಕರಣ ನಡೆಯುತ್ತಿತ್ತು. ನಿರ್ದಿಷ್ಟ ಸಮಯ ಮತ್ತು ಸೂಚಿತ ಜಾಗದಲ್ಲಿ ಕ್ಲಾರ್ಕ್ ಆಲ್‌ವಿಲ್‌ಸನ್‌ನನ್ನು ಹಿಡಿದು ರಕ್ಷಿಸಬೇಕು..... ಮುಂದಿನ ವಿಮಾನದಿಂದ ಹಿಂದಿರುವ ತನ್ನ ವಿಮಾನಕ್ಕೆ ಅವನನ್ನು ಬದಲಿಸಿಕೊಳ್ಳಬೇಕು. ಆದರೆ, ಬದಲಾವಣೆಯ ಸಮಯದಲ್ಲಿ ಆಲ್ ವಿಲ್‌ಸನ್ ಹಿಡಿತ ತಪ್ಪಿದ. ಕ್ಲಾರ್ಕ್ ತನ್ನೆಲ್ಲಾ ಶಕ್ತಿ ಹಾಕಿ ಆಲ್‌ವಿಲ್‌ಸನ್‌ನ ದೇಹ ಹಿಡಿದು ಸುಮಾರು 15 ಮೀಟರಿನಷ್ಟು ಕೆಳಗೆ ಸಾಗಿದ. ಆದರೆ ಹಿಡಿತ ಸಡಿಲವಾಗಿ, ಆಲ್ ವಿಲ್‌ಸನ್ ಕೆಳಗುರುಳಿಬಿದ್ದ. 1,500 ಮೀಟರ್ ಎತ್ತರದಿಂದ ಕೆಳಗುರುಳಿ ಬಿದ್ದ ಈ ಸ್ಟಂಟ್ ಮಾಸ್ಟರ್ ಇನ್ನೂ ಜೀವಸಹಿತ ಇದ್ದಾನೆ - ಸೊಂಟ ಮುರಿದುಕೊಂಡು!

ಕೆಂಟುಕಿಯ ಲೂಸಿವಿಲ್ಲೆಯ ವಲ್ಲಾಸ್ ಸ್ಮಿತ್‌ನದು ಇನ್ನೊಂದು ಕಥೆ. 1942ರಲ್ಲಿ ಒಂದು ದಿನ ಈತ ತೀರಾ ಕೆಳಮಟ್ಟದಲ್ಲಿ ವಿಮಾನ ನಡೆಸುತ್ತಿದ್ದಾಗ, ಓರ್ವ ಯುವತಿಯನ್ನು ನೋಡಿದ. ಆ ಯುವತಿ ತನ್ನ ಪ್ರಿಯತಮೆ ಎಂದೇ ಭಾವಿಸಿದ ಸ್ಮಿತ್ ಆಕೆಯತ್ತ ಕೈಬೀಸಿದ. ಆ ಯುವತಿಯಿಂದ ಯಾವುದೇ ಬಗೆಯ ಪ್ರತಿಕ್ರಿಯೆ ಬಾರದಿದ್ದಾಗ ಸ್ಮಿತ್ ಅನ್ಯಮನಸ್ಕನಾದ. ಪರಿಣಾಮವಾಗಿ ವಿಮಾನ ಆಯತಪ್ಪಿ ಅಡ್ಡಾದಿಡ್ಡಿಯಾಗಿ ಓಡತೊಡಗಿತು. ಹೀಗೆ ಓಡುವಾಗ ಮರದ ತುದಿಗೆ ಬಡಿದು, ವಿದ್ಯುತ್ ತಂತಿಯನ್ನು ಹರಿದು ಇನ್ನೊಂದು ಮರದ ತುದಿಯಲ್ಲಿ ಸಿಕ್ಕಿಕೊಂಡಿತು. ವಿಮಾನದಿಂದ ಮರಕ್ಕೆ ಜಿಗಿದ ಸ್ಮಿತ್, ಅವಸರವಸರವಾಗಿ ಮರದಿಂದ ಇಳಿದು ತನಗೇನೂ ತೊಂದರೆ ಸಂಭವಿಸಿಲ್ಲವೆಂದು ಆಕೆಗೆ ತಿಳಿಸಲು ಆ ಯುವತಿಯ ಬಳಿ ಓಡಿದ! ಆದರೆ ಆ ಯುವತಿಯ ಬಳಿ ಹೋಗಿ ನಿಂತಾಗಲೇ ಆಕೆ ತನ್ನ ಪ್ರಿಯತಮೆ ಅಲ್ಲವೆಂದು ಅವನಿಗೆ ಅರಿವಾದದ್ದು. ●

(ವಿವಿಧ ಮೂಲಗಳಿಂದ)

---

## ಶಾಂತಿಪ್ರಿಯತೆ

'ಬ್ಲಿಟ್ಜ್' ಪತ್ರಿಕೆಯ ಹಿಂದಿ - ಉರ್ದು ಆವೃತ್ತಿಗಳಿಗೆ ಸಂಪಾದಕರಾದ ಮುನೀಶ ಸಕ್ಸೇನಾರವರು ಬಹಳ ಶಾಂತಿಪ್ರಿಯರೂ ವಿನಯಶೀಲರೂ ಆದ ವ್ಯಕ್ತಿ. ಒಮ್ಮೆ ಅವರು ಪ್ರಯಾಣ ಮಾಡುತ್ತಿದ್ದಾಗ ರೈಲಿನಲ್ಲಿ ತುಂಬ ರಷ್ ಇದ್ದರೂ ಹೇಗೋ ಕುಳಿತುಕೊಳ್ಳಲು ಜಾಗ ಸಿಕ್ಕಿತ್ತು. ಅವರು ಬಾತರೂಂಗೆ ಹೋಗಬೇಕಾಯಿತು. ಹೋಗಿ ಬರುವ ವೇಳೆಗೆ ಒಬ್ಬ ವ್ಯಕ್ತಿ ಅವರ ಸ್ಥಳದಲ್ಲಿ ಕುಳಿತಿದ್ದರು. ಇವರು ಬಂದರೂ ಏಳುವ ಸೂಚನೆ ಕಾಣಲಿಲ್ಲ. ಸಕ್ಸೇನಾ ಅವರು ಬಹಳ ವಿನಯದಿಂದ,

"ಸ್ವಾಮೀ, ನಿಮ್ಮ ಹೆಸರೇನು?" ಎಂದರು.

"ಆಂ ಊಂ... ನನ್ನ ಹೆಸರು ಶಾಂತಿಭಾಯಿ" ಎಂದರು ಆತ.

"ನಿಮ್ಮ ತಂದೆಯ ಹೆಸರು?

"ಶಾಂತಿಭಾಯಿ."

"ಶಾಂತಿಭಾಯಿ, ನಿಮ್ಮಲ್ಲಿ ನನ್ನದೊಂದು ಹೇಳಿಕೆ."

"ಏನದು?"

"ಈ ಜಾಗ ಶಾಂತಿಭಾಯಿಯವರದಲ್ಲ" ಎಂದರು ಸಕ್ಸೇನಾ.

● ಕೆ.ಶಾಂತಾಮಣಿ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

**1. ಕುಪ್ರಥೆ**
- (ಅ) ಅಪಕೀರ್ತಿ
- (ಆ) ವಿಶಾಲ
- (ಇ) ರಾಜಕುಮಾರಿ
- (ಈ) ದುರ್ಮಾರ್ಗ

**2. ಪ್ರಭೃತಿ**
- (ಅ) ಬೆಳಗ್ಗೆ
- (ಆ) ಊಟದ ಭತ್ತೆ
- (ಇ) ಅಳತೆ
- (ಈ) ಶ್ರೇಷ್ಠ

**3. ಇಬ್ಬಂದಿ**
- (ಅ) ಅತ್ತಿತ್ತ ಹೊಯ್ದಾಡುವ
- (ಆ) ತೋಳಿನ ಆಭರಣ
- (ಇ) ಎರಡೂ ಕಡೆ
- (ಈ) ಸಣ್ಣ ಹನಿ

**4. ಇರಿಸಿಲು**
- (ಅ) ಕಂದಾಯ
- (ಆ) ತುಂತುರು ಮಳೆ
- (ಇ) ನಡುಹಗಲಿನ ಬಿಸಿಲು
- (ಈ) ಹಡೆದ ರಾತ್ರಿ

**5. ಕಡೆಗಂದಿ**
- (ಅ) ಕಡೆಯ ಕರು
- (ಆ) ತಿರಸ್ಕರಿಸುವುದು
- (ಇ) ಕೊನೆಯ ಸ್ಥಾನ
- (ಈ) ಒಂದು ಜಾತಿ ಗಡ್ಡೆ

**6. ಚಮಡಾ**
- (ಅ) ಸವಟು
- (ಆ) ನೀರು ಚೇಪುವುದು
- (ಇ) ತೊಗಲು
- (ಈ) ಕಸ

**7. ಚೊಂಚ**
- (ಅ) ಕುರುಡ
- (ಆ) ಚೀಲ
- (ಇ) ಸೊಟ್ಟಗೈಯವನು
- (ಈ) ಗದ್ದಲ ಹಾಕುವವ

**8. ಪರಿಚ್ಛೇದ**
- (ಅ) ಪರೀಕ್ಷೆ
- (ಆ) ಪೂರಕ
- (ಇ) ಹೊದಿಕೆ
- (ಈ) ವಿಂಗಡಿಸುವುದು

**9. ಯಾಚಕ**
- (ಅ) ಪುರೋಹಿತ
- (ಆ) ಪಂಡಿತ
- (ಇ) ಓದುವವ
- (ಈ) ಬೇಡುವವ

**10. ಯಾಜಕ**
- (ಅ) ಭಿಕ್ಷುಕ
- (ಆ) ಒಡೆಯ
- (ಇ) ಯಜ್ಞಮಾಡಿಸುವವ
- (ಈ) ಪಂಡಿತ

**11. ರೇವು**
- (ಅ) ಬಂದರು
- (ಆ) ಇಡುಗಂಟು
- (ಇ) ಒಂದು ಭಕ್ಷ್ಯ
- (ಈ) ಅಂಟು ಮಣ್ಣು

**12. ಸವಲತ್ತು**
- (ಅ) ಪ್ರಶ್ನೆ
- (ಆ) ಸೌಕರ್ಯ
- (ಇ) ನ್ಯಾಯಾಲಯದಲ್ಲಿ ಸಾಕ್ಷಿ ವಿಚಾರಣೆ
- (ಈ) ಸಮವಾಗಿ ನಡೆಸಿಕೊಳ್ಳುವುದು

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಕುಪ್ರಥೆ**
(ಅ) ಅಪಕೀರ್ತಿ, ಅಪಖ್ಯಾತಿ, ಕೆಟ್ಟ ಹೆಸರು, ಕೆಟ್ಟ ರೂಢಿ. ಉದಾ:- ವಿಶ್ವಾಸಕ್ಕೆ ಅರ್ಹನಲ್ಲವೆಂಬ ಅವನ ಕುಪ್ರಥೆ. (ಸಂ. ಕು+ಪ್ರಥಾ=ಪ್ರಸಿದ್ಧಿ)

**2. ಪ್ರಭೃತಿ**
(ಈ) ಶ್ರೇಷ್ಠ, ಉತ್ತಮ, ಹಿರಿಯ ವ್ಯಕ್ತಿ. ಉದಾ:- ಊರಿನ ಪ್ರಭೃತಿಗಳೆಲ್ಲ ಸೇರಿದ್ದರು. (ಸಂ.=ಮೊದಲಾದ, ಮೊದಲಿನ)

**3. ಇಬ್ಬಂದಿ**
(ಅ) ಅತ್ತಿತ್ತ ಹೊಯ್ದಾಡುವ ಮನಸ್ಸು, ಸಂದಿಗ್ಧ ಚಿತ್ತ, ಅತ್ತಲೂ ಇತ್ತಲೂ ಇರುವ ವ್ಯಕ್ತಿ. ಉದಾ:- ಅವಳು ಇಬ್ಬಂದಿಯಲ್ಲಿ ತೊಳಲುತ್ತಿದ್ದಳು. (ದೇ. ಇರ್ +(ಸಂ.)ಪಂಥಿ=ದಾರಿಗ)

**4. ಇರಿಸಿಲು**
(ಆ) ತುಂತುರು, ತುಂತುರು ಮಳೆ, ಸುಗಂಧ ಜಲವನ್ನು ಸಿಂಪಡಿಸುವ ಬೀಸಣಿಗೆ. (ದೇ. ಇರಿಸು=ತುಂತುರು+ಇಲ್)

**5. ಕಡೆಗಂದಿ**
(ಅ) ಕಡೆಯ ಕರು, ಕಡೆಯ ಕರುವನ್ನು ಈದ ಆಕಳು, ಕಡೆಯ ಮಗು. ಉದಾ:- ಆತ ಕಡೆಗಂದಿಯಾದ್ದರಿಂದ ಮೋಹದಲ್ಲಿ ಬೆಳೆದಿದ್ದಾನೆ. (ದೆ.=ಕಡೆ=ಕೊನೆ+ಕಂದಿ=ಕರು)

**6. ಚಮಡಾ**
(ಇ) ತೊಗಲು, ಚರ್ಮ. ಉದಾ:- ನಿನ್ನ ಚಮಡಾ ಸುಲಿದೇನು. (ಹಿಂದಿ-ಸಂ. ಚರ್ಮ)

**7. ಚೊಂಚ**
(ಇ) ಸೊಟ್ಟ ಕೈಯುವನು, ಮೊಂಡುಗೈಯವನು, ಡೊಂಕು. ಉದಾ:- ಆ ಚೊಂಚನಿಗೇಕೆ ಹೆದರುತ್ತೀ? (ದೇ.)

**8. ಪರಿಚ್ಛೇದ**
(ಈ) ವಿಂಗಡಿಸುವುದು, ತುಂಡರಿಸುವುದು, ವಿಭಾಗ, ಪುಸ್ತಕದ ಅಧ್ಯಾಯ, ವಿವರಿಸಿದ ತೀರ್ಮಾನ. ಉದಾ:- ಕಾದಂಬರಿ ಪರಿಚ್ಛೇದಗಳಲ್ಲಿ ವಿಂಗಡಿಸಲ್ಪಟ್ಟಿತ್ತು. (ಸಂ.ಪರಿ+ಭೇದ=ವಿಂಗಡಿಸಿದ್ದು)

**9. ಯಾಚಕ**
(ಈ) ಬೇಡುವವ, ಅರ್ಥಿ, ಭಿಕ್ಷುಕ. ಉದಾ:- ಯಾಚಕರ ಕೈ ಕೆಳಗೆ. (ಸಂ.)

**10. ಯಾಜಕ**
(ಇ) ಯಜ್ಞ ಮಾಡಿಸುವವ, ಪುರೋಹಿತ, ಯಾಗ ಮಾಡುವವ. ಉದಾ:- ಯಜ್ಞ ಮಾಡಿಸಲು ಹದಿನಾರು ಯಾಜಕರು ಇದ್ದರು. (ಸಂ.)

**11. ರೇವು**
(ಅ) ಬಂದರು, ಹಡಗು ನಿಲ್ಲುವ ತೀರಸ್ಥಳ. ಉದಾ:- ಪಶ್ಚಿಮ ಸಮುದ್ರದ ರೇವುಗಳು. (ತಮಿಳು=ಇರಂಗು=ಇಳಿಯಿಂದ.)

**12. ಸವಲತ್ತು**
(ಅ) ಸೌಕರ್ಯ, ಅನುಕೂಲತೆ, ರಿಯಾಯಿತಿ, ಅವಕಾಶ. ಉದಾ:- ಕಾರ್ಮಿಕರಿಗೆ ಕೊಟ್ಟ ಸವಲತ್ತುಗಳು. (ಅರಬ್ಬಿ-ಸಹೂಲತ್=ಸೌಕರ್ಯ)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| 6- 8 | ಸರಿಯಿದ್ದರೆ | ... ಸಾಧಾರಣ |
| 9-10 | " | ... ಉತ್ತಮ |
| 11-12 | " | ... ಅತ್ಯುತ್ತಮ |

# ಗೆಳತಿ ಮೈನಾಗೆ ತಲೆ ತಿರುಗುವುದೇಕೆ?

ಪ್ರಿಯ ಗೆಳತಿ ಮೈನಾ,

ನೀನು ಬರೆದ ಪತ್ರವನ್ನು ಕೂಲಂಕಷವಾಗಿ ಓದಿದೆ. ಈಗ ವೈದ್ಯನಾಗಿ ಒಂದು ಕಡೆ ನನ್ನ ಸಂಸಾರದ ತಾಪತ್ರಯಗಳು ಹಾಗೂ ಇನ್ನೊಂದು ಕಡೆ ರೋಗಿಗಳ ನೋವು ನರಳಾಟಗಳ ನಡುವೆ ಯಾವಾಗಲೂ ಮನದ ಒತ್ತಡದಲ್ಲೇ ಕಾಲ ಕಳೆಯುತ್ತಿದ್ದ ನನಗೆ ನಿನ್ನ ಪತ್ರ ಕಳೆದ ವಿದ್ಯಾರ್ಥಿ ಜೀವನದ ಸಿಹಿ ನೆನಪುಗಳು ಮರುಕಳಿಸುವಂತೆ ಮಾಡಿ ಬಹು ದಿನಗಳ ದಣಿವು ಬೇಸರಿಕೆಗಳನ್ನು ದೂರ ಮಾಡಿತು.

''ನನಗೆ ಪದೇ ಪದೇ ತಲೆ ತಿರುಗುವ ತೊಂದರೆಯಿದೆ. ಹಾಗೆ ತಲೆ ತಿರುಗಲು ಕಾರಣ ಏನು?'' ಎಂದು ನೀನು ಪತ್ರದಲ್ಲಿ ನನ್ನನ್ನು ಕೇಳಿರುವಿ. ಈಗಿನ ದಿನಗಳಲ್ಲಂತೂ ನನ್ನ ಹತ್ತಿರ ಬರುವ ರೋಗಿಗಳಲ್ಲಿ ಅರ್ಧಕ್ಕರ್ಧ ಜನ ಈ ತೊಂದರೆಯನುಭವಿಸುವವರೇ. ಅವರನ್ನು ಸಂಪೂರ್ಣ ಪರೀಕ್ಷಿಸಿ, ಅವರ ಜೀವನ ವಿಧಾನ, ಕಷ್ಟಸುಖಗಳನ್ನು ಅಭ್ಯಸಿಸಿ ಕೆಲವು ಲ್ಯಾಬೊರೇಟರಿ ಪರೀಕ್ಷೆಗಳನ್ನು ಮಾಡಿಸಿ ನೋಡಿದರೂ ತಲೆ ತಿರುಗುವುದರ ಕಾರಣ ಕಂಡು ಹಿಡಿಯುವುದು ನನಗೆ ಭಗೀರಥ ಪ್ರಯತ್ನವಾಗುತ್ತದೆ. ಹಾಗಿರುವಾಗ ಈಗ ಸದ್ಯ ನಿನ್ನನ್ನು ಪರೀಕ್ಷಿಸದೇ, ನಿನ್ನ ಬಗ್ಗೆ ಅಭ್ಯಸಿಸದೇ ನಿನಗೆ ಕಾರಣ ಏನೆಂದು ನಾನು ಹೇಗೆ ತಿಳಿಸಲಿ? ಆದುದರಿಂದ ತಲೆ ತಿರುಗುವ ತೊಂದರೆ ತರಬಲ್ಲ ಎಲ್ಲ ಕಾಯಿಲೆಗಳ ಬಗ್ಗೆಯೂ ನಾನು ನಿನಗೆ ಈ ಪತ್ರದ ಮೂಲಕ ಬರೆದು ತಿಳಿಸುತ್ತಿದ್ದೇನೆ.

ಇದಕ್ಕೆ ಮೊದಲು ನಮ್ಮ ತಲೆ ತಿರುಗದಂತೆ ಮಾಡುವುದು ಹೇಗೆ? ಈ ಕೆಲಸ ನಿರ್ವಹಿಸುವ ದೇಹದ ಅಂಗಗಳು ಯಾವುವು? ಎಂಬುದರ ಕುರಿತು ತಿಳಿಯುವುದು ಉಚಿತ. ನಮ್ಮ ದೇಹದಲ್ಲಿರುವ ಎಲುಬುಗಳಲ್ಲೇ ಕೆನ್ನೆಯ ಪೆಟ್ರಸ್ ಅತಿ ಗಟ್ಟಿಯಾದದ್ದು. ಈ ಎಲುಬಿನಲ್ಲಿ ಒಳಕಿವಿ ಇದೆಯೆಂದೂ ಈ ಒಳಕಿವಿ ಬಸವನ ಹುಳದ ಆಕಾರದಲ್ಲಿದೆಯೆಂದೂ ಪ್ರಾಥಮಿಕ ಶಾಲೆಯಲ್ಲಿರುವಾಗ ಓದಿದ್ದು ನಿನಗೆ ನೆನಪಿರಬಹುದು. ನಾನು ಈ ಪತ್ರದ ಜೊತೆ ಕಳಿಸಿದ ಚಿತ್ರ ನೋಡಿ ಜ್ಞಾಪಿಸಿಕೊ. ಈ ಒಳಗಿವಿಯಲ್ಲಿ ಕೊಕ್ಲಿಯಾ ಭಾಗ ಕೇಳುವಿಕೆಗೆ ಸಂಬಂಧಿಸಿದ್ದಾದರೆ ವೆಸ್ಟಿಬ್ಯೂಲ ಎನ್ನುವ ಭಾಗ ಭೂಮಿಯ ಗುರುತ್ವಾಕರ್ಷಣದ ಎದುರು ನಮ್ಮ ದೇಹವನ್ನು, ತಲೆಯನ್ನು ಕೆಳಗೆ ಬೀಳದಂತೆ ಸಮತೋಲದಲ್ಲಿ ನಿಲ್ಲಿಸುವ ಕೆಲಸ ಮಾಡುತ್ತದೆ.

ಒಳಕಿವಿಯ ವೆಸ್ಟಿಬ್ಯೂಲ ಭಾಗದಲ್ಲಿ ಮೂರು ಅರ್ಧವೃತ್ತಾಕಾರದ ಕಾಲುವೆಗಳೂ ವೆಸ್ಟಿಬ್ಯೂಲ ಮತ್ತು ಸೆಕ್ಯೂಲಗಳೆಂಬ ಎರಡು ಕೋಶಿಕಗಳೂ ಇರುತ್ತವೆ. ಗಟ್ಟಿಯಾದ ಎಲುಬಿನ ಒಳಗಿರುವ ಈ ಭಾಗದ ಒಳಗಡೆ ಎಂಡೊಲಿಂಫ್ ಹಾಗೂ ಒಳಗಡೆ ಪೆರಿಲಿಂಫ್ ಎಂಬ ದ್ರವಗಳಿರುತ್ತವೆ. ಮೂರು ಅರ್ಧವೃತ್ತಾಕಾರದ ಕಾಲುವೆಗಳು ನಿಂತ ಮನುಷ್ಯನ ನೀಟು ನಿಲುವಿನಲ್ಲಿ ಪರಸ್ಪರ ಸಮಕೋನದಲ್ಲಿದ್ದು ದೇಹದ ಸುತ್ತಲಿನ ಎಲ್ಲ ದಿಕ್ಕುಗ

ಳನ್ನೂ ಸೂಚಿಸುವ ಪ್ರತಿನಿಧಿಗಳಾಗಿರುತ್ತವೆ. ಈ ಅರ್ಧವೃತ್ತ ಕಾಲುವೆಗಳು ಒಂದು ತುದಿಯಲ್ಲಿ ಮಾತ್ರ ಯುಟ್ರಿಕಲ್ ಸೇರುವ ಕಡೆ ಉಬ್ಬಿದ್ದು ಜ್ಞಾನೇಂದ್ರಿಯ ತಂತುಗಳು ಈ ಪ್ರದೇಶದಲ್ಲಿದ್ದು ಅದಕ್ಕೆ ಕ್ರಿಸ್ಟಾ ಪ್ರದೇಶ ಅನ್ನುತ್ತಾರೆ. ಯುಟ್ರಿಕಲ್ ಮತ್ತು ಸೆಕ್ಯೂಲಗಳಲ್ಲಿಯೂ ಒಳಮೈಯ ಮೇಲೆಲ್ಲ ರೋಮಕೋಶಗಳಿದ್ದು ಈ ರೋಮಕೋಶಗಳ ಮೇಲೆ ಸುಣ್ಣದ ಕಣಗಳಿವೆ. ಇದಕ್ಕೆ ಒಟೊಲಿಥ್ಸ್ ಅನ್ನುತ್ತಾರೆ. ಮನುಷ್ಯನ ಭಂಗಿ ಬದಲಾದಾಗ ಅರ್ಧವೃತ್ತಾಕಾರದ ಕಾಲುವೆಗಳಲ್ಲಿರುವ ದ್ರವದ ಚಲಿಸುವಿಕೆಯಿಂದ ಹಾಗೂ ಯುಟ್ರಿಕಲ್ ಮತ್ತು ಸೆಕ್ಯೂಲಗಳಲ್ಲಿರುವ ಸುಣ್ಣದ ಕಣಗಳು ತಮಗಂಟಿಕೊಂಡಿರುವ ರೋಮಕೋಶಗಳನ್ನು ಪ್ರಚೋದಿಸುವುದರಿಂದ ಈ ಜ್ಞಾನ ಇಲ್ಲಿಂದ ಎಂಟನೇ ಕಪಾಲ ನರದ ವೆಸ್ಟಿಬ್ಯೂಲರ್ ಭಾಗದಿಂದ ಮಿದುಳಿಗೆ ತಿಳಿಸಲ್ಪಟ್ಟು ಅಲ್ಲಿಂದ ತಕ್ಷಣ ತಕ್ಕ ಪ್ರತಿಕ್ರಿಯೆ ಹೊರಡುತ್ತದೆ. ತನ್ಮೂಲಕ ವೆಸ್ಟಿಬ್ಯೂಲೊ. ಸ್ಪೈನಲ್ ನರತಂತುಗಳಿಂದ ದೇಹದ ಪೂರ್ವಸ್ಥಿತಿ ಪುನಃ ಸ್ಥಾಪಿಸುವಂತೆ ದೇಹಾದ್ಯಂತದ ವಿವಿಧ ಮಾಂಸಖಂಡಗಳಿಗೆ ಸಂದೇಶ ರವಾನಿಸಲ್ಪಡುತ್ತದೆ. ಅಂದರೆ ದೇಹದ ಸಮತೋಲ ಕಾಯ್ದಿಡುವ ಈ ವ್ಯೂಹ ಒಳಕಿವಿ, ಮಿದುಳಿನ ಭಾಗಗಳಾದ ಮಿದುಳು ಕಾಂಡ, ಅನುಮಸ್ತಿಷ್ಕ, ದೊಡ್ಡಮಿದುಳು, ವೆಸ್ಟಿಬ್ಯೂಲ ನರಕೇಂದ್ರ, ಮತ್ತು ಮಾಂಸಖಂಡಗಳ ನಡುವಿನ ನರಜೋಡಣೆ ಹಾಗೂ ಇತರ ಸಂವೇದಾಂಗಗಳಾದ ಕಣ್ಣು, ಕೀಲು ಹಾಗೂ ಚರ್ಮಗಳ ನೋವಿನ ಜ್ಞಾನಗಳನ್ನು ಒಳಗೊಂಡಿರುತ್ತದೆ. ಈ ವ್ಯೂಹದ ಯಾವುದೇ ಭಾಗ ರೋಗಗ್ರಸ್ಥವಾದಾಗ ತಲೆ ತಿರುಗುತ್ತದೆ. ಈ ಕಾಯಿಲೆಗಳನ್ನು ಈಗ ಒಂದೊಂದಾಗಿ ವಿವರಿಸುತ್ತೇನೆ.

ಮೈನಾ......, ಏನೇ ಕೆಲಸ ಮಾಡುವುದಾದರೂ ನಮಗೆ ಉಸಿರಾಡಲು ಹವೆ ಹಾಗೂ ಹೊಟ್ಟೆಗೆ ಆಹಾರ ಬೇಕಲ್ಲವೇ? ಇದು ಯಾಕೆ ಗೊತ್ತೆ? ಈ ಅಂಗಗಳಿಗೆ ಕೆಲಸ ಮಾಡಲು ಶಕ್ತಿಯನ್ನು ಪೂರೈಸಲು. ಈ ಶಕ್ತಿ ಈ ಅಂಗಗಳಿಗೆ ರಕ್ತದ ಮುಖಾಂತರ ಪೂರೈಸಲ್ಪಡುತ್ತದೆ. ಶಕ್ತಿ ಪೂರೈಸುವ ಆಹಾರ ನಮಗಿಲ್ಲದಾಗ ಈ ಇಡೀ ವ್ಯೂಹ ಕೆಲಸ ಮಾಡುವುದಾದರೂ ಹೇಗೆ? ಆದುದರಿಂದಲೇ ಹಸಿವಿನಿಂದಿದ್ದಾಗ ನಮಗೆ ತಲೆ ತಿರುಗುತ್ತದೆ. ಅದೇ ರೀತಿ ಶಕ್ತಿ ಪೂರೈಕೆಯ ಕೆಲಸ ಮಾಡುವ ರಕ್ತದಲ್ಲಿ, ರಕ್ತ ಹರಿಯುವ ರಕ್ತನಾಳಗಳಲ್ಲಿ ಅಥವಾ ಹೃದಯದ ಕಾಯಿಲೆಗಳಲ್ಲೂ ಈ ತೊಂದರೆ ಕಂಡು ಬರುತ್ತದೆ. ನನ್ನಲ್ಲಿ ಬರುವ ರೋಗಿಗಳೆಲ್ಲರೂ ಬಡವರು. ಹೊಟ್ಟೆಗೆ ಸರಿಯಾದ ಆಹಾರವಿಲ್ಲದೇ ರಕ್ತಹೀನತೆಯಿಂದ ಬಳಲುವವರು. ಹೀಗಾಗಿ ಇವರಲ್ಲಿ ಮೊದಲು ಕಂಡು ಬರುವ ತೊಂದರೆ ಎಂದರೆ ತಲೆ ತಿರುಗುವುದು.

ಆರೋಗ್ಯವಂತ ಮನುಷ್ಯನ ಹೃದಯ ಒಂದು ನಿಮಿಷಕ್ಕೆ 70ರಿಂದ 80 ಸಲ ಲಬ್.... ಡಬ್ ಎಂದು ಲಯಬದ್ಧವಾಗಿ ಬಡಿದುಕೊಳ್ಳುತ್ತದೆಂದು ನಿನಗೆ ತಿಳಿದಿರಬಹುದು. ಈ ಹೃದಯ ಬಡಿತ ನಿಮಿಷಕ್ಕೆ 150ಕ್ಕೂ ಹೆಚ್ಚಾದರೆ (Tachycardia) ಅಥವಾ 40 ಕ್ಕೂ ಕಡಿಮೆಯಾದರೆ (Bradyacardia), ಬಡಿತದ ಈ ಲಯಬದ್ಧತೆ ನಿಮಿಷಕ್ಕೆ ನಾಲ್ಕು ಸಲಕ್ಕಿಂತ ಹೆಚ್ಚು ಸಲ ತಪ್ಪಿದರೆ (Asystole) ಅಥವಾ ಹೃದಯ ಬಡಿತದ ಲಯಬದ್ಧತೆ ಸಂಪೂರ್ಣ ಹಾಳಾದರೆ (Arrhythmia) ಇಂತಹ ಕಾಯಿಲೆಗಳಲ್ಲಿ ಒಮ್ಮೊಮ್ಮೆ ದೇಹದ ಸಮತೋಲ ಕಾಪಾಡುವ ವ್ಯೂಹಗಳಿಗೆ ಪೂರೈಸಲ್ಪಡುವ ರಕ್ತದ ಪ್ರಮಾಣ ಕಡಿಮೆಯಾಗಿ ತಲೆ ತಿರುಗುತ್ತದೆ. ರಕ್ತದ ಒತ್ತಡ ಹೆಚ್ಚು ಇರುವವರಿಗೆ ಹಾಗೂ ಕೆಲವರಿಗೆ ಆಗಾಗ ಒಮ್ಮೊಮ್ಮೆ ರಕ್ತದ ಒತ್ತಡ ಒಮ್ಮೆಗೇ ಕಡಿಮೆಯಾಗುವುದರಿಂದ (Hypotension) ಕೂಡ ತಲೆ ತಿರುಗುತ್ತದೆ. ಹೃದಯದ ಕವಾಟಗಳೂ ಹಾಳಾದಾಗ

(Valvular diseases)ರಕ್ತ ಪೂರೈಕೆಯಲ್ಲಿ ತುಂಬಾ ಕೆಲಸ ಮಾಡುವಾಗ ಕೊರತೆ ತೋರಿ ಬಂದು ತಲೆ ತಿರುಗಬಹುದು. ಈ ರೀತಿ ರಕ್ತ ಪೂರೈಕೆಯ ತೊಂದರೆಯಲ್ಲಿ ತಲೆ ತಿರುಗುವುದರ ಜೊತೆಗೆ ಕಿವಿಯಲ್ಲಿ ಏನೇನೋ ಶಬ್ದಗಳು ಕೇಳಿಸುತ್ತವೆ. ಕಣ್ಣಿಗೆ ಕತ್ತಲೆ ಬರುತ್ತದೆ. ವ್ಯಕ್ತಿ ದಿಗಿಲುಗೊಳ್ಳುತ್ತಾನೆ. ಮಾತನಾಡುವಾಗ ತಡವರಿಸುತ್ತಾನೆ. ಹಾಗೂ ನಂತರ ಸುಧಾರಿಸುವವರೆಗೆ ಕೆಲಹೊತ್ತು ತಾನು ಎಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ ಎಂಬುದನ್ನು




*1. ಕಣ್ಣು 2. ಅನುಮಸ್ತಿಷ್ಕ 3. ಅರ್ಧವೃತ್ತಾಕಾರದ ಕೊಳವೆಗಳು 4. ವೆಸ್ಟಿಬ್ಯೂಲ 5. ಕೊಕ್ಲಿಯಾ 6. ಮಿದುಳು ಮಾಂಸ ಖಂಡಗಳ ಜೋಡಣಾ ನರ 7. ಬೆನ್ನು ಹುರಿ 8. ದೀರ್ಘಾಯತ ಮಜ್ಜತ್ 9. ವೆಸ್ಟಿಬ್ಯೂಲರ್ ಕೇಂದ್ರ, 10. ಮಸ್ತಿಷ್ಕ*

ಮರೆಯುತ್ತಾನೆ.

ಹೃದಯರೋಗದಂತೆಯೇ ಮಿದುಳು ಮತ್ತು ಒಳಕಿವಿಗೆ ರಕ್ತ ಪೂರೈಕೆ ಮಾಡುವ ರಕ್ತನಾಳಗಳಲ್ಲಿ ತಲೆದೋರುವ ತೊಂದರೆಗಳಿಂದಾಗಿಯೂ ತಲೆ ತಿರುಗುವುದುಂಟು. ದೊಡ್ಡ ಮಿದುಳು, ಅನುಮಸ್ತಿಷ್ಕ ಮತ್ತು ಮಿದುಳು ಕಾಂಡ ಇವುಗಳಿಗೆ ರಕ್ತವನ್ನು ಹರಿಬಿಡುವ ಸೆರಿಬ್ರಲ್ ರಕ್ತನಾಳಗಳು ಗಾತ್ರದಲ್ಲಿ ಸಣ್ಣದಾದರೆ ಅಥವಾ ಹೆಪ್ಪುಗಟ್ಟಿದ ರಕ್ತಗಡ್ಡೆ ರಕ್ತಸಂಚಾರದಲ್ಲಿ ಅಡ್ಡನಿಂತರೆ (Embolism)ತಲೆ ತಿರುಗುವ ಕಾಯಿಲೆ ಬರುತ್ತದೆ. ಆದರೆ ಈ ಸಂದರ್ಭಗಳಲ್ಲಿ ತಲೆ ತಿರುಗುವುದರ ಜೊತೆಗೆ ರಕ್ತಪೂರೈಕೆ ನಿಲ್ಲಿಸಲ್ಪಟ್ಟ ಆ ಮಿದುಳಿನ ಭಾಗ ಮಾಡುವ ಕಾರ್ಯಗಳೂ ನಿಲ್ಲಿಸಲ್ಪಡುತ್ತವೆ. ಆದುದರಿಂದ ಪಾರ್ಶ್ವವಾಯು ಅಥವಾ ದೇಹದ ಕೆಲ ಭಾಗದ ಮಾಂಸ ಖಂಡಗಳ ಸಂಪೂರ್ಣ ನಿಷ್ಕ್ರಿಯತೆ ಅಥವಾ ಸ್ವಲ್ಪ ನಿಶ್ಶಕ್ತಿ, ದೇಹದ ಕೆಲ ಅಥವಾ ಅರ್ಧಭಾಗದಲ್ಲಿ ನೋವಿನ ಸಂವೇದನೆ ಇಲ್ಲದಿರುವುದು, ಕಣ್ಣಿನ ಅರ್ಧಭಾಗದಲ್ಲಿ ದೃಷ್ಟಿ ಇಲ್ಲದಿರುವುದು, ಧ್ವನಿಪೆಟ್ಟಿಗೆಗೆ ಮಾತನಾಡುವ ಸಾಮರ್ಥ್ಯವಿದ್ದರೂ ಮಾತನ್ನು ಹೊರಗೆಡಹುವ ಪ್ರಜ್ಞೆಯನ್ನೇ ಕಳೆದುಕೊಳ್ಳುವದು, (Dysphasia),ದೇಹದ ಸಮತೋಲ ತಪ್ಪಿ ಸೆರೆಕುಡಿದವರಂತೆ ವಾಲುತ್ತ ನಡೆಯುವದು. (Ataxia)ಮುಂತಾದ ಮಿದುಳಿನ ತೊಂದರೆಗಳೂ ಕಾಣಿಸಿಕೊಳ್ಳುತ್ತವೆ. ವಯಸ್ಸಾದವರಲ್ಲಿ ಹೃದಯ ಕ್ಷೀಣಗೊಳ್ಳುತ್ತ ಜೊತೆಗೆ ರಕ್ತನಾಳಗಳೂ ಗಡಸುಗೊಳ್ಳುತ್ತ ಬರುವುದರಿಂದ ಸಣ್ಣ ಪ್ರಮಾಣದ 'ನಾನು ಈಜುತ್ತಿದ್ದೇನೆ' ಎಂದು ಹೇಳುವಂಥ ತೊಂದರೆ ಕಾಣಿಸಿಕೊಳ್ಳುತ್ತದೆ. ಇದಕ್ಕೆ ವೈದ್ಯರು 'ವರ್ಟಿಬ್ರೊಬೆಸಿಲರ್ ಇನಸಫೀಶಿಯನ್ಸಿ' ಎಂದು ಹೇಳುತ್ತಾರೆ. ಈ ತೊಂದರೆ ಇದ್ದವರಲ್ಲಿ ಕಿವಿಯು ಕಿವುಡಾಗುತ್ತದಲ್ಲದೆ ಹಾಗೂ ಅಸಂಬದ್ಧ ಶಬ್ದಗಳು ಕೇಳುತ್ತಿರುತ್ತವೆ. ಸಣ್ಣದಾಗಿ ತಲೆ ತಿರುಗುವುದು ಸದಾ ಇದ್ದರೂ ಮಲಗಿದ್ದಲ್ಲಿಂದ ಏಳುವಾಗ ಅಥವಾ ಕುಳಿತಲ್ಲಿಂದ ಎದ್ದು ನಿಲ್ಲುವಾಗ ತಲೆತಿರುಗುವದು ಹೆಚ್ಚಾಗುತ್ತದೆ.

ಮೈನಾ....... ನಮ್ಮ ಕ್ಲಾಸಿನಲ್ಲಿ ಅಭಿಲಾಷಾ ಎನ್ನುವವಳಿದ್ದಳಲ್ಲ. ಅವಳಿಗೆ ಆಗಾಗ ಅರ್ಧ ತಲೆಶೂಲೆ ಆಗುತ್ತಿತ್ತು. ನಿನಗೆ ನೆನಪಿದೆಯೇ? ಹಾಗೆ ಆದಾಗ ತಲೆ ತಿರುಗುತ್ತದೆಯೆಂದು ಅಳುತ್ತ ಅವಳು ವಾಂತಿ ಮಾಡುತ್ತಿದ್ದಳಲ್ಲವೇ? ಅರ್ಧ ತಲೆಶೂಲೆಯಲ್ಲೂ ತಲೆ ತಿರುಗುತ್ತದೆ. ಅಭಿಲಾಷಾಳ ನೆನಪಾದ ಕೂಡಲೇ ನನಗೆ ನಮ್ಮ ಇಬ್ಬರು ಪ್ರೊಫೆಸರರ ನೆನಪು ಬರುತ್ತದೆ. ಪ್ರೊ. ಮೋಟ್ವಾನಿ ಇದ್ದರಲ್ಲ, ಅವರು ಒಮ್ಮೊಮ್ಮೆ ನಡೆಯುವಾಗಲೇ ತಲೆ ತಿರುಗಿದಂತಾಗಿ ಅಲ್ಲೇ ಕುಳಿತುಕೊಳ್ಳುತ್ತಿದ್ದುದನ್ನು ನೀನು ನೋಡಿರಬಹುದು. ಅವರಿಗೆ ತಲೆ ತಿರುಗುತ್ತಿದ್ದುದರ ಕಾರಣವನ್ನು ನಾನು ನಿನಗೆ ಈಗ ಹೇಳುತ್ತೇನೆ. ಹಿಂದೊಮ್ಮೆ ಅವರಿಗೆ ಸ್ಕೂಟರ್ ಎಕ್ಸಿಡೆಂಟ್ ಆಗಿತ್ತು ನೋಡು. ಆ ಎಕ್ಸಿಡೆಂಟ್‌ನಲ್ಲಿ ಅವರಿಗೆ ತಲೆಗೆ ಪೆಟ್ಟು ಬಿದ್ದಿತ್ತು. ತಲೆಗೆ ಪೆಟ್ಟು ಬಿದ್ದರೂ ಹೀಗಾಗುತ್ತದೆ. ಹಾಗೆಯೇ ನಾನ್‌ಸ್ಟಾಪ್ ಉಗಿಬಂಡಿ ಎಂದು ನಾವು ಕರೆಯುತ್ತಿದ್ದೆವಲ್ಲ, ಪ್ರೊ. ಕೇಲಕರ್ ಅವರನ್ನು, ಅವರೂ ತಲೆ ತಿರುಗುತ್ತದೆಂದು ಕೆಲ ತಿಂಗಳು ಕಾಲೇಜಿಗೆ ಬರುವುದನ್ನೇ ನಿಲ್ಲಿಸಿದ್ದರಲ್ಲ. ಅವರು ಉಗಿಬಂಡಿಯ ಹಾಗೆ ಸಿಗರೇಟು ಸೇದಿದ್ದರಿಂದ ಹೆಚ್ಚಾಗಿ ಅವರಿಗೆ ಟಿ.ಬಿ. ಕಾಯಿಲೆ ಆಯಿತು. ಈ ಟಿ.ಬಿ. ಕಾಯಿಲೆಗೆ ಅವರು ಸ್ಟ್ರೆಪ್ಟೊಮೈಸಿನ್ ಇಂಜಕ್ಶನ್ ತೆಗೆದುಕೊಳ್ಳುತ್ತಿರುವಾಗಲೇ ಈ ತೊಂದರೆ ಕಾಣಿಸಿಕೊಂಡಿತು. ಈ ಸ್ಟ್ರೆಪ್ಟೊಮೈಸಿನ್ ಕ್ಷಯದ ಕಾಯಿಲೆಗೆ ರಾಮಬಾಣದಂಥ ಔಷಧವಾದರೆ ರಾವಣನಂಥ ಉಪದ್ರವ ಕೊಡುವ ತಲೆ ತಿರುಗುವ ಕಾಯಿಲೆಯನ್ನು ಉತ್ಪನ್ನ ಮಾಡುವ ಗುಣವನ್ನೂ ಹೊಂದಿದೆ. ಸ್ಟ್ರೆಪ್ಟೊಮೈಸಿನ್ನಿನಂತೆ ಜೆಂಟಾಮೈಸಿನ್, ಗಾರಾಮೈಸಿನ್, ಕೆನಾಮೈಸಿನ್ ಮುಂತಾದ ರೋಗ ಕ್ರಿಮಿಹಾರಕ ಔಷಧಿ




ಗಳು ಈ ಸಿನ್ (sin) ಮಾಡುತ್ತವೆ. ಅದರಂತೆಯೇ ಮೂತ್ರಪಿಂಡಕಾರ್ಯ ಚಾಲಕಗಳು (Diuretics), ಊತ ಕಡಿಮೆ ಮಾಡುವ ಔಷಧಿಗಳು (anti-inflammatories) ಆ್ಯಸ್ಪಿರಿನ್ ಮಾತ್ರೆಗಳು ಹಾಗೂ ಕ್ವಿನೈನ್ ಕೂಡ ಈ ತೊಂದರೆಯನ್ನು ತಂದೊಡ್ಡುವ ಸಾಧ್ಯತೆ ಇದೆ.

ಮೈನಾ....., ಸಾರಾಯಿ ಕುಡಿದವರು ಹೇಗ್ಹೇಗೋ ಅಡ್ಡಾದಿಡ್ಡಿ ನಡೆಯುತ್ತ ಬೀಳುವುದನ್ನು ನೀನು ನೋಡಿರಬಹುದು. ಸಾರಾಯಿ ಕೂಡ ತಲೆತಿರುಗಿಸುತ್ತದೆ. ಅದರಂತೆಯೇ ಎಲ್ಲ ಅಮಲು ಪದಾರ್ಥಗಳು, ಅಮಲು ತರಿಸುವ ಔಷಧಿಗಳು ಹಾಗೂ ತಂಬಾಕು ಸೇವನೆಯೂ ಈ ತೊಂದರೆ ತರಬಲ್ಲದು. ಇಂಥ ಇನ್ನೂ ಅನೇಕ ಔಷಧಿಗಳಿದ್ದು ಅವನ್ನು ಸೇವಿಸಿದಾಗ ವಾಹನಗಳನ್ನು ನಡೆಸಬಾರದೆಂದು ವೈದ್ಯರು ಹೇಳುತ್ತಾರೆ. ಈ ಔಷಧಿಗಳು ನಮ್ಮನ್ನು ಸ್ವಲ್ಪ ಮಂದವಾಗಿರಿಸುತ್ತವೆ. ಆಗೆಲ್ಲ ತಲೆ ಸುತ್ತುತ್ತಿರುತ್ತದೆ.

ಈಗ ತಲೆ ತಿರುಗಿಸುವ ಮುಖ್ಯ ಕಾಯಿಲೆಗಳಾದ ವೆಸ್ಟಿಬ್ಯೂಲ್ ಅಂಗವೇ ರೋಗಗ್ರಸ್ಥವಾಗುವ ಅನೇಕ ರೋಗಗಳ ಬಗ್ಗೆ ಬರೆಯುತ್ತಿದ್ದೇನೆ. ಇವುಗಳಲ್ಲಿ ಮುಖ್ಯವಾದ ಕಾಯಿಲೆ ಅಂದರೆ ಮಿನಿಯರ್ಸ್ ರೋಗ (Menier's Disease). ಮಳೆಗಾಲದಲ್ಲಿ ಬಾವಿ ಹೊಳೆಗಳಲ್ಲೆಲ್ಲ ಹೇಗೆ ನೀರಿನ ಪ್ರಮಾಣ ಹೆಚ್ಚಾಗುತ್ತದೋ ಹಾಗೆಯೇ ಈ ಕಾಯಿಲೆಯಲ್ಲಿ ಎಂಡೂಲಿಂಪ್ ದ್ರವದ ಪ್ರಮಾಣ ಹೆಚ್ಚಾಗುತ್ತದೆ. ಎಂಡೂಲಿಂಪ್ ಎನ್ನುವುದು ವೆಸ್ಟಿಬ್ಯೂಲ್ ಅಂಗದ ತೆಳು ಪೊರೆಯ ಒಳಗಿರುವ ದ್ರವವೆಂದು ನಿನಗೆ ಮೊದಲೇ ವಿವರಿಸಿದ್ದೇನೆ. ಈ ತೊಂದರೆಯಷ್ಟು ಕಷ್ಟಕರವಾದ ಕಾಯಿಲೆ ಯಾವುದೂ ಇಲ್ಲವೆನ್ನಬಹುದು. ವಯಸ್ಕರಲ್ಲೇ ಪ್ರಾರಂಭವಾಗುವ ಈ ಕಾಯಿಲೆಯಲ್ಲಿ ಪ್ರಾರಂಭದಲ್ಲಿ ವ್ಯಕ್ತಿಗೆ ಆಗಾಗ ತಲೆ ತಿರುಗುತ್ತದೆ, ಕಿವಿಯಲ್ಲಿ ಏನೇನೋ ಶಬ್ದ ಕೇಳುತ್ತದೆ ಹಾಗೂ ವಾಂತಿ ಆಗುತ್ತದೆ. ಈ ವೇಳೆಯಲ್ಲಿ ಕಿವಿಯೂ ಮಂದವಾಗಿ ಕೇಳುತ್ತದೆ. ಈ ತೊಂದರೆ ಮೂರು ನಾಲ್ಕು ದಿನಗಳವರೆಗಿದ್ದು ನಂತರ ರೋಗಿ ಸಂಪೂರ್ಣ ಗುಣಮುಖನಾಗುತ್ತಾನೆ. ತೊಂದರೆಯ ವೇಳೆಯಲ್ಲಿ ಕಣ್ಣುಗೊಂಬೆಯೂ ಅತ್ತ ಇತ್ತ ವೇಗವಾಗಿ ಚಲಿಸುತ್ತಿರುತ್ತದೆ. (Nystagmus). ಈ ರೋಗ ಚೇಷ್ಟೆ ನಂತರ ಪದೇ ಪದೇ ಬರತೊಡಗಿ ತುಂಬಾ ವರ್ಷಗಳ ನಂತರ ರೋಗಿ ಕಾಯಂ ಆಗಿ ಕಿವುಡನಾಗುತ್ತಾನೆ. ಇದೇ ರೀತಿಯ ತೊಂದರೆ ಒಂದೇ ಕಿವಿಯಲ್ಲಿ ಕಾಣಿಸಿಕೊಂಡು ಹೀಗೆ ಪದೇ ಪದೇ ಬರದೇ ಒಮ್ಮೆ ಶುರು ಆದದ್ದು ಪ್ರಮಾಣದಲ್ಲಿ ಹೆಚ್ಚುತ್ತಾ ಹೋದರೆ ವೆಸ್ಟಿಬ್ಯೂಲರ್ ಕಪಾಲನರ ಮಿದುಳನ್ನು ಸೇರುವೆಡೆ ದುರ್ಮಾಂಸ ಬೆಳೆದಿದೆ ಎಂದರ್ಥ. ಇದಕ್ಕೆ ವೈದ್ಯರು ಸೆರಿಬೆಲ್ಲೊ ಪೊಂಟಾನ್ ಟ್ಯೂಮರ್ ಅಥವಾ ಎಕೊಸ್ಟಿಕ್ ನ್ಯೂರೋಮಾ ಎಂದು ಕರೆಯುತ್ತಾರೆ.

ಮೈನಾ......, ಈ ಪತ್ರ ಬರೆಯುತ್ತಿರುವಾಗಲೇ ನನ್ನ ಗೆಳೆಯನೊಬ್ಬ ತುಂಬಾ ತಲೆ ತಿರುಗುತ್ತದೆಂದು ಬರಬೇಕೇ! ಅವನ ಹೆಸರು ಬಾಳ. ತಲೆಯನ್ನು ಮೇಲೆ ಕೆಳಗೆ ಮಾಡಿದಾಗ

ಅವನ ಕುತ್ತಿಗೆಯ ಹುರಿ ನೋಯುತ್ತದೆ. ಜೊತೆಗೆ ತಲೆಯೂ ತಿರುಗುತ್ತದೆ. ಯಾವುದಾದರೂ ಕಾರಣದಿಂದ ಕುತ್ತಿಗೆಯ ಎಲುಬಿಗೆ ಪೆಟ್ಟು ಬಿದ್ದಿದ್ದರೆ ಅಥವಾ ಇನ್ನಾವುದೇ ರೋಗದಿಂದ ಎಲುಬು ಹಾಳಾದರೆ ಹೀಗಾಗುತ್ತದೆ. ನಮ್ಮ ಈ ಬಾಳ ಸ್ಕೂಟರ್ ಎಕ್ಸಿಡೆಂಟ್ ಆಗಿ ಕುತ್ತಿಗೆಯ ಎಲುಬುಗಳಿಗೆ ನೋವಾಗಿತ್ತು.

ಐವತ್ತು ವರ್ಷಕ್ಕಿಂತ ಮೇಲ್ಪಟ್ಟವರಲ್ಲಿಯೂ, ಕುತ್ತಿಗೆಯನ್ನು ಅಕ್ಕಪಕ್ಕ ತಿರುಗಿಸುವಾಗ ಯಾವುದೋ ಒಂದು ನಿಶ್ಚಿತ ಜಾಗಕ್ಕೆ ತಲೆ ಬಂದಾಗ, ತಲೆ ತಿರುಗುವುದರ ಜೊತೆಗೆ ವಾಂತಿಯೂ ಆಗುತ್ತದೆ. ಈ ಕಾಯಿಲೆಯಲ್ಲಿ ಹಿಂಬದಿಯ ಅರ್ಧವೃತ್ತನಾಳದ ಕ್ರಿಸ್ಟಾ ಪ್ರದೇಶ ರೋಗಗ್ರಸ್ಥವಾಗಿರುತ್ತದೆ. ಹಾಗೂ ಹಿಂದೆ ತಲೆಗಾದ ಪೆಟ್ಟೇ ಈ ತೊಂದರೆಗೆ ಕಾರಣ. ಈ ತೊಂದರೆ ಹೆಚ್ಚೆಂದರೆ ಮೂರು ತಿಂಗಳುಗಳಿದ್ದು ನಂತರ ಆ ವ್ಯಕ್ತಿ ಸಂಪೂರ್ಣ ಗುಣಮುಖನಾಗುತ್ತಾನೆ. ಹಾಗೂ ಈ ಕಾಯಿಲೆಯಲ್ಲಿ ಕುತ್ತಿಗೆ ಯಾವುದೋ ಒಂದು ಸ್ಥಿತಿಗೆ ಬಂದಾಗ ಮಾತ್ರ ತಿರುಗುವುದರಿಂದ ರೋಗಿ ತಲೆಯನ್ನು ಆ ಸ್ಥಿತಿಗೆ ತಿರುಗದಂತೆ ಎಚ್ಚರವಹಿಸುವುದನ್ನೂ ಕಲಿಯುತ್ತಾನೆ. ಇದಕ್ಕೆ ವೈದ್ಯರು ಅಲ್ಪಕಾಲಿಕ ಸ್ಥಿತಿಸಂಬಂಧಿತ ತಲೆ ಸುತ್ತು (Benign Positional Vertigo) ಎನ್ನುತ್ತಾರೆ.

ರೋಗಕ್ರಿಮಿಗಳ ಸಾಂಕ್ರಾಮಿಕತೆಯಿಂದಲೂ ಒಳಕಿವಿಯ ವೆಸ್ಟಿಬ್ಯೂಲ ಉರಿಯೂತ ಹೊಂದಿದಾಗಲೂ ತಲೆತಿರುಗುವ ಕಾಯಿಲೆ ಬರುವುದುಂಟು. ಕಾಲರಾ, ಪ್ಲೇಗ್ ಮುಂತಾದ ಸಾಂಕ್ರಾಮಿಕ ಕಾಯಿಲೆಗಳು ಒಂದೇ ಸಲ ಒಂದೇ ಸ್ಥಳದಲ್ಲಿ ಅನೇಕರಿಗೆ ಬರುತ್ತವೆ. ಅದೇ ರೀತಿ ಒಂದೇ ಸ್ಥಳದಲ್ಲಿ ಅನೇಕರಿಗೆ ವೆಸ್ಟಿಬ್ಯೂಲ್ ವೈರಸ್ ರೋಗಾಣುಗಳಿಂದ ಊತವುಂಟಾಗಿ ತಲೆ ಸುತ್ತುವ ತೊಂದರೆ ಕಾಣಿಸಿಕೊಳ್ಳುತ್ತದೆ. ಇದಕ್ಕೆ ವೈದ್ಯರು Epidemic Vertigo ಎನ್ನುತ್ತಾರೆ.

ಬಾಲವಾಡಿಗೆ ಹೋಗುವ ಮಕ್ಕಳಲ್ಲೂ ಅಪರೂಪಕ್ಕೊಮ್ಮೆ ಈ ತೊಂದರೆ ಕಾಣಿಸಿಕೊಳ್ಳುವುದುಂಟು. ಆಗವರು ಜೋಲಿ ಹೊಡೆಯುವುದುಂಟು. ಆದರೆ ಈ ತೊಂದರೆ ಕೆಲವೇ ನಿಮಿಷಗಳವರೆಗೆ ಮಾತ್ರವಿದ್ದು ನಂತರ ತನ್ನಷ್ಟಕ್ಕೆ ಸರಿಯಾಗುತ್ತದೆ. ಹೀಗಾಗಲು ಕಾರಣ ಏನೆಂದು ಇನ್ನೂ ಕಂಡು ಹಿಡಿಯಲಾಗಲಿಲ್ಲ. ಇದಕ್ಕೆ ಮಕ್ಕಳ ಎಪಿಸೋಡಿಕ್ ವರ್ಟಿಗೊ ಎನ್ನುತ್ತಾರೆ.

ಪತ್ರ ಉದ್ದವಾಯಿತಲ್ಲವೇ ಮೈನಾ? ಆದರೆ ನಾನು ಇಷ್ಟು ಹೊತ್ತು ಬರೆದದ್ದೆಲ್ಲ ಶೇಕಡಾ ಹತ್ತು ಭಾಗದಷ್ಟು ಕಾರಣಗಳು ಮಾತ್ರ. ಇನ್ನು ಶೇಕಡಾ ತೊಂಭತ್ತು ಭಾಗ ಕಾರಣಗಳನ್ನು ನಿನಗೆ ಬರೆಯಬೇಕಲ್ಲ. ಅದು ಇನ್ನು ಎಷ್ಟು ಉದ್ದವಿದೆಯೋ ಎಂದು ತಲೆ ಮೇಲೆ ಕೈ ಒತ್ತಬೇಡ. ಈ ಶೇಕಡಾ ತೊಂಭತ್ತರ ಕಾರಣ ಮಾತ್ರ ಒಂದೇ - ಮನೋರೋಗಗಳು. ಈಗ ನಮ್ಮ ಜೀವನದ ರೀತಿ, ಮಟ್ಟ ಸುಧಾರಿಸಿದಂತೆಲ್ಲ ಸಣ್ಣ ಸಣ್ಣದಕ್ಕೂ ವಿಚಾರ ಮಾಡುತ್ತ ತಲೆ ಹಾಳು ಮಾಡಿಕೊಳ್ಳುವ ಜನರ ಸಂಖ್ಯೆಯೇ ಜಾಸ್ತಿ. ಇವರಿಗೂ ತಲೆ ಒಂದು ರೀತಿ ಒಜ್ಜೆ ಎನಿಸಿ ಸುತ್ತಿದಂತಾಗುತ್ತದೆ.

ಮೈನಾ....., ನೀನು ಇ.ಎನ್.ಟಿ. ಹಾಗೂ ಹಾರ್ಟ್ ಸ್ಪೆಷಲಿಸ್ಟರ ಹತ್ತಿರ ತೋರಿಸಿದಾಗ ಅವರು "ನಿನಗೇನೂ ರೋಗ ಇಲ್ಲ" ಎಂದು ಹೇಳಿದ್ದಾರೆ ಎಂದು ಬರೆದಿದ್ದಿ. ನಿನ್ನ ವಿಳಾಸದಲ್ಲಿ ಮಿಸ್. ಮೈನಾ ಎಂದೂ ಬರೆದಿದ್ದೀ. ನಾನು ನಿನ್ನ ಕ್ಲಾಸ್‌ಮೇಟ್. ನನ್ನ ಮದುವೆಯಾಗಿ ಈಗಾಗಲೇ ಆರು ವರ್ಷಗಳಾಗಿವೆ. ಆದರೆ ನೀನು ಇನ್ನೂ ಮಿಸ್ ಆಗಿಯೇ ಇದ್ದೀ. ನನಗೆ ಅನಿಸುವ ಹಾಗೆ ಇದೇ ಚಿಂತೆ ನಿನ್ನ ತಲೆ ತಿರುಗುವದಕ್ಕೆ ಕಾರಣ ಇರಬಹುದು.

ಬೇಗ ಮದುವೆ ಮಾಡಿಕೋ, ಸರಿ ಹೋಗುತ್ತೀ.

ನಿನ್ನ ವಿಶ್ವಾಸಿ
**ವೈರಸ ಶಿರಾಲಿ**

ಒಂದು ನೆನಪು



# ಎಲ್ಲ ಋತುಗಳ ಹೇಮಂತ ಗಾಯನ

ಮನೋಜಕುಮಾರ ಪಾಟೀಲ

**ಹೇ**ಮಂತಕುಮಾರರೆಂದ ಕೂಡಲೆ ಹಳೆಯ ನೆನಪುಗಳು ಮನಸ್ಸಿನಲ್ಲಿ ಒತ್ತೊತ್ತಾಗಿ ತುಂಬಿಕೊಳ್ಳುತ್ತವೆ.

1962ರ ಉತ್ತರಾರ್ಧದ ಒಂದು ಮಧ್ಯಾಹ್ನ. ಧಾರವಾಡದ ಮಾಳಮಡ್ಡಿಯ ಕೆ.ಇ.ಬೋರ್ಡ್ಸ್ ಹೈಸ್ಕೂಲಿನ ಸನಿಹದ ರಸ್ತೆಯ ಬದಿ ಅಲ್ಪ ವಿರಾಮದ ಅವಧಿಯಲ್ಲಿ ಮಕ್ಕಳೆಲ್ಲ ತಮ್ಮ ನೆಚ್ಚಿನ ಕಾಬೂಲಿವಾಲಾನಿಂದ ಐಸ್‌ಕ್ರೀಮ್ ಪಡೆದು ಅದನ್ನು ನಿಧಾನವಾಗಿ ಸವಿಯುತ್ತಾ ರೇಡಿಯೋ ಸಿಲೋನಿನಿಂದ ತೂರಿಬರುತ್ತಿದ್ದ 'ಬೀಸ್ ಸಾಲ್ ಬಾದ್' ಚಿತ್ರದ 'ಕಹಿಂ ದೀಪ ಚಲೇ ಕಹಿಂ ದಿಲ್.....' ಹಾಡನ್ನು ತಮ್ಮ ಸಹಕಾರಿಯೊಬ್ಬನಿಂದ ಕೇಳುತ್ತಿದ್ದಾರೆ. ಹಾಡು ಮುಗಿಯಿತು; ಶಾಲೆಗೆ ಮರಳುವ ಗಂಟೆಯೂ ಆಯಿತು. ಶಾಲೆಗೆ ಹೊರಟ ಆ ಬಾಲಕನ ಎರಡೂ ಕೈಯಲ್ಲಿ ಒಂದೊಂದು ಐಸ್‌ಕ್ರೀಮ್ ಕೊಟ್ಟ ಕಾಬೂಲಿವಾಲಾ ಬೆನ್ನು ತಟ್ಟಿ ಅವನನ್ನು ಬೀಳ್ಕೊಟ್ಟ.

'ನಾಗಿನ್' ಬಂದ ವೇಳೆ ಅದು. ವಿಜಾಪುರದ ಉಪ್ಪಲಿ ಬುರುಜಿನ ಪ್ರದೇಶದಲ್ಲಿ ವಾಸವಾಗಿದ್ದ ಅರವಿಂದನನ್ನು ಮಾಲಿಕರು ಮನೆ ಬಿಡಿಸಿದರು. ಕಾರಣ ಅವನು ಬಾಡಿಗೆ ಕೊಡುತ್ತಿರಲಿಲ್ಲವೆಂದೆನಲ್ಲ. ಬದಲು 'ನಾಗಿನ್'ದ 'ಮನ್‌ಡೋಲೇ ರೇ.....' ಹಾಡನ್ನು ಪುಂಗಿಯಲ್ಲಿ ಬಾರಿಸುತ್ತಿದ್ದುದಕ್ಕಾಗಿಯಂತೆ. ಇದರಿಂದ ಆ ಚಾಳಿನಲ್ಲಿ ಹಾವುಗಳು ಬರುತ್ತಿದ್ದುವಂತೆ. ಇದು ಎಷ್ಟು ಮಟ್ಟಿಗೆ ನಿಜವೋ

ಗೊತ್ತಿಲ್ಲ; ಆದರೆ ಹೇಮಂತಕುಮಾರರ ಹಾಡುಗಳು ಜನರ ಮನಸ್ಸನ್ನು ಎಷ್ಟರ ಮಟ್ಟಿಗೆ ಸೆರೆಹಿಡಿದಿಟ್ಟಿವೆಯೆಂಬ ಬಗ್ಗೆ ಇದೂ ಒಂದು ಉದಾಹರಣೆ ಎಂದು ಮಾತ್ರ ಹೇಳ ಬಲ್ಲೆ.

'ನಾಗಿನ್','ಬೀಸ್ ಸಾಲ್ ಬಾದ್' ಚಿತ್ರ ಗಳ ಮೂಲಕ ಸಂಗೀತದ ಗಂಧವಿಲ್ಲದವ ರಿಗೂ ಹುಚ್ಚು ಹಿಡಿಸಿದ 'ಬಂಗಾಲಿ ಬಾಬು' ಹೇಮಂತ ಕುಮಾರರ ಜನಪ್ರಿಯತೆಗೆ ಮೇಲಿ ನವುಗಳು ಉದಾಹರಣೆಗಳಷ್ಟೇ. ಕಳೆದ ವರ್ಷದ ಸಪ್ಟಂಬರ್ 26ಕ್ಕೆ ಅವರು ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ನಿಧನರಾದಾಗ ಭಾರತದ ಚಲನಚಿತ್ರ ಪ್ರಪಂಚ ರವೀಂದ್ರ ಸಂಗೀತವನ್ನು ಸಿನೆಮಾ ಮಾಧ್ಯಮಕ್ಕೆ ಪರಿಣಾ ಮಕರವಾಗಿ ಅಳವಡಿಸಿದ ಒಬ್ಬ ಅಧ್ವರ್ಯು ವನ್ನೇ ಕಳೆದುಕೊಂಡಿತು. ಇನ್ನೇರಡೇ ದಿನ ಅವರು ಜೀವಿಸಿದ್ದರೆ ಲತಾಮಂಗೇಶ ಕರಳ ಅರವತ್ತನೆಯ ಜನ್ಮದಿನದಲ್ಲಿ ಪಾಲ್ಗೊಂಡು ಆನಂದಿಸಬಹುದಿತ್ತು.



'ನಾಗಿನ್' ಚಿತ್ರ ತನ್ನ ಸಂಗೀತದಿಂದಲೇ ಜನಪ್ರಿಯತೆಯ ಪರಾಕಾಷ್ಠೆಯನ್ನು ತಲು ಪಿತ್ತು. ಆ ಚಿತ್ರ ಬಿಡುಗಡೆಯಾದಂದಿನಿಂದ ಸುಮಾರು ದಶಕದವರೆಗೆ ಸಮಾರಂಭಗಳ ಬ್ಯಾಂಡಿನವರು 'ನಾಗಿನ್'ದ ಟ್ಯೂನ್‌ಗಳನ್ನೆ ಬಾರಿಸುತ್ತಿದ್ದರು. ಆಗ ಬ್ಯಾಂಡಿನವರು ಸಾಮಾನ್ಯವಾಗಿ ಬಾರಿಸುತ್ತಿದ್ದ 'ರಾಜಾ ಕೀ ಆಯೇಗೀ ಬಾರಾತ....' ಚಿತ್ರ: 'ಆಹ್'; 'ಬೋಲ್ ರೇ ಕಠಪುತಲೀ ಡೋಲೇ.....' ಚಿತ್ರ: 'ಕಠಪುತಲೀ' (ಎರಡಕ್ಕೂ ಸಂಗೀತ ನೀಡಿದವರು ಶಂಕರ ಜೈಕಿಶನ್.)

ಆ ಕಾಲ ಬಿಡಿ, 'ನಾಗಿನ್'ದ ಹಾಡುಗ ಳಾದ 'ತೇರೆ ಲಿಯೇ ಸಾರಾ ಜಗ ಛೋಡಕೇ ಮೇಂ ಆಯೇರೇ....', 'ಜಾದೂಗರ ಸೈಯಾ, ಛೋಡೊ ಮೋರೆ ಬೈಯಾ...', 'ಮೇರಾ ಬದಲಿ ಮೇಂ ಛುಪ್ ಗಯಾ ಚಾಂದ ರೇ....', 'ಮೇರಾ ದಿಲ್ ಏ ಪುಕಾರೇ ಆಜಾ....' (ಎಲ್ಲವನ್ನೂ ಲತಾ ಹಾಡಿದ್ದಾರೆ. ನಾಗಿನ್‌ದ ನಾಯಿಕೆ ವೈಜಯಂತಿಮಾಲಾಳ ಮೇಲೆ ಚಿತ್ರೀಕರಿಸಲಾಗಿದ್ದ) ಈ ಗೀತೆಗಳು ಇಂದಿಗೂ ಹೊಚ್ಚ ಹೊಸದಾಗೇ ಇವೆ.

ಅತ್ಯುತ್ತಮ ಸಂಗೀತ ನಿರ್ದೇಶಕರೆಂದು ಆಗ (1954) ಫಿಲ್ಮಫೇರ್ ಪ್ರಶಸ್ತಿಯನ್ನು ಪಡೆದ ನಂತರ ಹೇಮಂತಕುಮಾರ ಚಿತ್ರವೊಂ ದಕ್ಕೆ ಹತ್ತುಸಾವಿರದಷ್ಟು ಗೌರವಧನವಾಗಿ ಪಡೆಯುತ್ತಿದ್ದುದನ್ನು ಇಪ್ಪತ್ತು ಸಾವಿರಕ್ಕೇರಿ ಸಿಕೊಂಡರು.

ಈಗ ಖ್ಯಾತನಾಮರಾಗಿರುವ ಕಲ್ಯಾಣಜಿ ಹಾಗೂ ಆನಂದಜಿ ಇಬ್ಬರೂ ಆಗ ಹೇಮಂತ ಕುಮಾರರ ಬಳಿ ಸಹಾಯಕರಾಗಿದ್ದರು. 'ನಾಗಿನ್' ಚಿತ್ರಕ್ಕೆ ಸಿಕ್ಕ ಜನಪ್ರಿಯತೆ ಅವ ರನ್ನೂ ಸಂಭ್ರಾಂತಗೊಳಿಸಿತ್ತು. ಮುಂದೆ









ಬಂದ 'ಮದಾರಿ' ಚಿತ್ರಕ್ಕೆ ಈ ಜೋಡಿ ಸಂಗೀತ ನೀಡಿದ್ದರೂ ಆ ಟ್ಯೂನ್‌ಗಳನ್ನು ಹೇಮಂತಕುಮಾರರಿಂದಲೇ ಕದಿಯಲಾಯಿತೆಂಬ ಆರೋಪವನ್ನೂ ಅವರು ಎದುರಿಸಬೇಕಾಯಿತು. ಕಲ್ಯಾಣಜಿ-ಆನಂದಜಿ ಬಳಿ ಸಹಾಯಕರಾಗಿದ್ದ ಲಕ್ಷ್ಮೀಕಾಂತ ಪ್ಯಾರೇಲಾಲರೂ ಮೊದಲು ಹೇಮಂತರ ಬಳಿ ಸಹಾಯಕರಾಗಿದ್ದವರೆ.

ಬಿಳಿ ಧೋತರ, ಬಿಳಿ ನೆಹರೂ ಅಂಗಿ ಕನ್ನಡಕಗಳನ್ನು ಧರಿಸುತ್ತಿದ್ದ ಹೇಮಂತಕುಮಾರರ ಉಡುಪೂ ಅಪ್ಪಟ ಬಂಗಾಲಿ. ನಡೆನುಡಿಗಳಲ್ಲೂ ಅದೇ ಶುಭ್ರತೆ, ಅದೇ ಸಭ್ಯತೆ. ಅವರ ಹಾಡುಗಾರಿಕೆಯೂ ಅಂತಹದೇ. ನಿರಂತರ ಚಲನೆಯ ಶಾಂತ ಗಂಗಾಪ್ರವಾಹದಂತೆ.

ಸಚಿನ್‌ದಾದಾ ಸಂಗೀತದಲ್ಲಿ ಹೇಮಂತ ಹಾಡಿದ ಗೀತೆ ಅವರ ಸ್ವಂತ ಚಿತ್ರಗಳಂತೆಯೇ ಪ್ರಸಿದ್ಧಿ ಪಡೆದಿದೆ. ಕಾಲೇಜ ಕನ್ಯೆಯರ 'ಹೃದ್ಯಯ ಚೋರ' ಎಂದೇ ಆಗ ಕರೆಯಲಾಗುತ್ತಿದ್ದ ದೇವಾನಂದ ಅವರ 'ಸೋಲವಾಸಾಲ್' ಚಿತ್ರದಲ್ಲಿ ಹೇಮಂತ ಹಾಡಿದ 'ಹೈ ಆಪನಾ ದಿಲ್ ತೋ ಆವಾರಾ' ಗೀತೆ ಇಂದಿಗೂ ಒಂದು 'ಸದಾ ಬಹಾರ್' ಗೀತೆ. 'ಬಾತ್ ಏಕ್ ರಾತ ಕಿ' ಚಿತ್ರದ 'ನ ಹಂ ತುಮೇ ಜಾನೋ' ಸಹ ಅಂಥದ್ದೇ ಇನ್ನೊಂದು ಗೀತೆ.

'ನಾಗಿನ್' ನಂತರ ಅಂಥದೇ ಸಾರ್ವಕಾಲಿಕ ಜನಪ್ರಿಯ ಸಂಗೀತ ಹೇಮಂತರಿಂದ ಬರಲಿಲ್ಲವೆನ್ನುವ ವಾದವೂ ಇದೆ. 'ಬೀಸ್ ಸಾಲ್ ಬಾದ್' ಅವರ ಸ್ವಂತ ತಯಾರಿಕೆ. ಅದರ ಗೀತೆಗಳು ಮಧುರವಾಗಿದ್ದರೂ ಅವು 'ನಾಗಿನ್'ದಷ್ಟು ಜನಪ್ರಿಯತೆಯ ಶಿಖರಕ್ಕೇರಲಿಲ್ಲ. ಇದಕ್ಕೆ ಆಗ ಇದ್ದ ಶಂಕರ ಜೈಕಿಶನರ ಜನಪ್ರಿಯತೆಯೂ ಒಂದು ಕಾರಣ ಎನ್ನಲಾಗುತ್ತಿದೆ. ಅವರ 'ಸಸುರಾಲ್' ಚಿತ್ರದ 'ತೇರಿ ಪ್ಯಾರಿ ಪ್ಯಾರಿ' ಹಾಗೂ 'ಜಂಗ್ಲೀ' ಚಿತ್ರದ 'ಯಾ ಹೂ' ಹಾಡುಗಳು ಜನಪ್ರಿಯ ಸಂಗೀ

ತಕ್ಕೆ ಒಂದು ಹೊಸ ಆಯಾಮವನ್ನೇ ನಿರ್ಮಿಸಿದ್ದವು ಎನ್ನುವುದನ್ನು ಅಲ್ಲಗಳೆಯಲಾಗದು.

ಗುರುದತ್ತರ 'ಸಾಹಿಬ್ ಬೀಬಿ ಔರ ಗುಲಾಮ್' ಬರುವ ವೇಳೆಯಲ್ಲಿ ಹೇಮಂತರ ಸಂಗೀತದಲ್ಲಿ ವಿಶೇಷವೇನೂ ಇಲ್ಲ; ಅವರ ಸಂಗೀತದ ಸೆಲೆ ಬತ್ತಿ ಹೋಗಿದೆ ಎಂಬ ಮಾತು ಕೇಳಿಬರುತ್ತಿತ್ತು. ಆದರೆ 'ಸಾಹಿಬ್ ಬೀಬಿ ..' ಈ ಟೀಕೆಗಳನ್ನು ಹುಸಿಗೊಳಿಸಿತು. ಆಶಾ ಭೋಸಲೆ, ಗೀತಾದತ್ತರು ಹಾಡಿದ 'ಕೋಯಿ ದೂರ ಸೆ ಆವಾಜ ದೇ....', 'ನ ಜಾವೋ ಸೈಯಾ...', 'ಸಖಿಯಾ ಆಜ ಮುಝೆ ನೀಂದ ನಹಿ ಆಯೇಗಿ....' ಇವು ಇಂದಿಗೂ ಸುಪ್ತ ಮನಸ್ಸಿನ ಹಲವು ಹಂತಗಳನ್ನು ತಟ್ಟಿ ಎಬ್ಬಿಸುತ್ತಿವೆ. 'ಗರ್ಲ್ ಫ್ರೆಂಡ್' ನಲ್ಲಿ ಸುಧಾ ಮಲ್ಹೋತ್ರಾ ಜೊತೆಗೆ ಅವರು ಹಾಡಿದ 'ಕಶ್ಮೀ ಕಾ ಖಾಮೋಶ ಸಫರ ಹೈ....', 'ದೋ ದೋನಿ ಚಾರ್' ದಲ್ಲಿಯ 'ಹವಾಂ ವೋ ಪೆ ಲಿಖದೋ, ಹವಾಂ ವೋ ಸೇ ನಾಮ' ಇಂದಿಗೂ ರಸಿಕರ ಮನವನ್ನು ಸೆರೆಹಿಡಿದಿವೆ.

ಶಂಕರ ಜೈಕಿಶನ್ ಅವರ ಸ್ಪರ್ಧೆ ಒಂದು ದಶಕದ ಕಾಲ ಎಲ್ಲ ಸಂಗೀತಕಾರರನ್ನು ಕಂಗೆಡಿಸಿತ್ತು. ಹೇಮಂತರೂ ಇದಕ್ಕೆ ಅಪವಾದವಾಗಿರಲಿಲ್ಲ. ಆದರೆ ಜನಪ್ರಿಯತೆಯನ್ನು ಗಳಿಸಲು ಅವರೆಂದೂ ತಾವು ಹಿಡಿದ ಜಾಡನ್ನು ಬಿಡಲಿಲ್ಲ. 'ಅನುಪಮಾ' ಚಿತ್ರದಲ್ಲಿಯ ಲತಾ ಮಂಗೇಶಕರ ಅವರ ಹಾಡು 'ಧೀರೇ ಧೀರೇ ಮಚಲ್....' ಇಂದಿಗೂ ಅದೇ ಮಂಜುಳ ಶುಭ್ರ ನಿನಾದ ನೀಡುತ್ತದೆ. ನಂತರ ಬಂದ 'ದೋ ದಿಲ್' ಚಿತ್ರದಲ್ಲಿದ್ದ ಬಿಸ್ವಜೀತ ರಾಜಶ್ರೀ ಜೋಡಿಗೆ ಮಹಮ್ಮದ ರಫಿ ಆಶಾ ಭೋಸಲೆ ಡ್ಯುಯೆಟ ಒಂದನ್ನು ಹಾಡಿಸಿದ್ದರೂ ಆ ಹಾಡು ಆಗ ಕೇಳಿ ಆಗ ಮರೆತ ಹಾಡಾಗಿತ್ತು.

1920ರಲ್ಲಿ ವಾರಾಣಾಸಿಯಲ್ಲಿ ಹುಟ್ಟಿದ ಹೇಮಂತಕುಮಾರ ಬಾಲ್ಯವನ್ನೆಲ್ಲ ಕಲಕತ್ತಾದಲ್ಲಿ ಕಳೆದರು. ಹದಿವಯದಲ್ಲೇ ಸಂಗೀತದ ಗೀಳು ಅಂಟಿಸಿಕೊಂಡಿದ್ದ ಅವರಿಗೆ ಓದು ಹಿಡಿಸಲಿಲ್ಲ. ತಮ್ಮ 21ನೇಯ ವಯಸ್ಸಿನಲ್ಲಿ 'ನೆಮಾಮಿ ಸಂನ್ಯಾಸ' ಎಂಬ ಬಂಗಾಲಿ ಚಿತ್ರದಲ್ಲಿ ಮೊದಲ ಬಾರಿ ಪಾರ್ಶ್ವಗಾಯಕರಾಗಿ ಪ್ರವೇಶಿಸಿದರು. ರವೀಂದ್ರನಾಥ ಠಾಕೂರರ ಗೀತೆಗಳಿಗೆ ಸಂಗೀತ ನೀಡಿ ಬಂಗಾಲದ ಮೂಲೆ ಮೂಲೆಗಳಿಗೂ ಅವುಗಳನ್ನು ತಮ್ಮ ಗಾನ ಮಾಧುರ್ಯದ ಮೂಲಕ ತಲುಪಿಸಿದ ಕೀರ್ತಿ ಹೇಮಂತಕುಮಾರರದ್ದು. 'ಆನಂದ ಮಠ' ಹೇಮಂತ ಹಾಡಿದ್ದ ಮೊದಲ ಹಿಂದಿ ಚಿತ್ರ.

ಮುಕೇಶ್, ಮಹಮ್ಮದ ರಫಿ ಅವರಂತೆ ಹೇಮಂತ ತಮ್ಮದೇ ಆದ ದಾರಿಯಲ್ಲಿ ಸಾಗಿದವರು. ಸುಸಂಸ್ಕೃತ, ಸಭ್ಯ, ಸರಳ ಹೃದಯಾಂತರಾಳದಿಂದ ಬರುತ್ತಿದ್ದ ಅವರ ಗಾಯನ ಇನ್ನು ಧ್ವನಿಮುದ್ರಿತ ಗೀತೆಗಳಿಗೆ ಮಾತ್ರ ಮೀಸಲು. ●

## ಕಾರಣ

ಜಯಂತ ಗಾಂಧಿಯವರು ತಮ್ಮ ಮಿತ್ರರೊಡನೆ ಸ್ತ್ರೀ ಸೈಕಾಲಜಿ ಬಗ್ಗೆ ಮಾತಾಡುತ್ತಿದ್ದರು. ಘನಶ್ಯಾಮ ದೇಸಾಯಿಯವರು. ಅವರನ್ನು ಮಧ್ಯದಲ್ಲಿ ತಡೆದು, "ನೀವು ಇನ್ನೂ ಅವಿವಾಹಿತರು, ನೀವು ಸ್ತ್ರೀಯರ ಬಗ್ಗೆ ಏನು ತಾನೆ ತಿಳಿಯಬಲ್ಲಿರಿ?" ಎಂದು ಕೇಳಿದರು. "ಬಹಳಷ್ಟು, ಅದಕ್ಕಾಗಿಯೇ ನಾನಿನ್ನೂ ಅವಿವಾಹಿತ" ಎಂದರು ಜಯಂತ ಗಾಂಧಿ.

● ಕೆ.ಶಾಂತಾಮಣಿ

# ಇದು ಜೀವ ಇದು ಜೀವನ

ಅಂದು ನಮ್ಮಲ್ಲಿ ಗೃಹಪ್ರವೇಶ ಸಮಾರಂಭ ವಿದ್ದುದರಿಂದ ನಮ್ಮ ಊರಿನಿಂದ ನಮ್ಮ ಪುರೋಹಿತರನ್ನು ತಂದೆಯವರು ಕರೆದುಕೊಂಡು ಬಂದಿದ್ದರು. ಎಲ್ಲ ಕಾರ್ಯಕ್ರಮ ಮುಗಿದ ನಂತರ ನಾನು ಪುರೋಹಿತರಿಗೆ ''ಎಷ್ಟು ದಕ್ಷಿಣೆ ಕೊಡಬೇಕು?'' ಎಂದು ಕೇಳಿದೆ, ಅದಕ್ಕೆ ಅವರು ''ನಿನಗೆ ಎಷ್ಟು ಶಕ್ಯವೋ ಅಷ್ಟು ಕೊಡು,'' ಎಂದರು. ಅದಕ್ಕೆ ಪ್ರತಿಯಾಗಿ ನಾನು, ''ಇಂದಿನ ದಿನಗಳಲ್ಲಿ ಎಲ್ಲರೂ ತಮ್ಮ ತಮ್ಮ ರೇಟ್ ಹೇಳುತ್ತಾರೆ. ತಾವೂ ಹೇಳಬೇಕು,'' ಎಂದು ಹೇಳಿದಾಗ ಅವರು,

''ನಾನು ಚಿಕ್ಕವನಿದ್ದಾಗ ಪುಣೆಯಲ್ಲಿ ಸಂಸ್ಕೃತ ಮತ್ತು ವೇದಾಧ್ಯಯನ ಕಲಿಯುತ್ತಿದ್ದೆ. ಆಗ ಇನ್ನೂ ಸ್ವಾತಂತ್ರ್ಯ ಸಿಕ್ಕಿರಲಿಲ್ಲ. ಪುಣೆ ಕೂಡ ಸ್ವಾತಂತ್ರ್ಯ ಚಳವಳಿಯ ಕೇಂದ್ರವಾಗಿತ್ತು. ನಮ್ಮ ಗುರುಗಳು ಅದರಲ್ಲಿ ಅಪರೋಕ್ಷವಾಗಿ ಭಾಗ ತೆಗೆದುಕೊಳ್ಳುತ್ತಿದ್ದರು. ಒಂದು ದಿನ ನಮ್ಮ ಗುರುಗಳ ಮನೆಯಲ್ಲಿ ರಾತ್ರಿ ಅಭಿಷೇಕವಿತ್ತು. ಅಲ್ಲಿ ಎಲ್ಲ ವಿದ್ಯಾರ್ಥಿಗಳೂ ಹಾಜರಿದ್ದೆವು. ಅಭಿಷೇಕ ರಾತ್ರಿ ಇದ್ದುದರಿಂದ ನಮಗೆ ಕುತೂಹಲ. ಎಲ್ಲ ಕಾರ್ಯಕ್ರಮ ಮುಗಿದ ನಂತರ ಗುರುಗಳು ನಮ್ಮೆಲ್ಲರನ್ನೂ ಕರೆದು, 'ಅಲ್ಲಿ ನೋಡಿ, ಆ ಆಸನದ ಮೇಲೆ ಕುಳಿತಿರುವ ಮಹಾಶಯರಿಗೆ ಎಲ್ಲರೂ ನಮಸ್ಕಾರ ಮಾಡಿ ಬನ್ನಿ' ಎಂದು ಹೇಳಿದರು. ಆಸನದ ಮೇಲೆ ಒಂದು ಚಿಕ್ಕ ಕಂದೀಲಿನ ಬೆಳಕಿನಲ್ಲಿ ಧೋತರ ಉಟ್ಟು, ಕೋಟು ಮತ್ತು ಕಪ್ಪು ಟೊಪ್ಪಿಗೆ ಧರಿಸಿದ್ದ ಓರ್ವರು ಕುಳಿತಿದ್ದರು. ನಾವೆಲ್ಲರೂ ಒಬ್ಬೊಬ್ಬರಾಗಿ ಅವರಿಗೆ ನಮಸ್ಕಾರ ಮಾಡಿ ಒಂದು ಕಡೆ ನಿಂತೆವು. ಅವರು ನಮ್ಮೆಲ್ಲರನ್ನು ಕುರಿತು ಮರಾಠಿಯಲ್ಲಿ ಹೇಳಿದರು. ''ಕಾಹೀ ಕರಾ, ಪಣ್ ವೇದಾಚಾ ವಿಕ್ರಯ ಕರೂನಕಾ,'' (ಏನಾದರೂ ಮಾಡಿ, ಆದರೆ ವೇದದ ವಿಕ್ರಯ ಮಾಡಬೇಡಿ.) ನಮಗೇನೂ ಅದರ ಅರ್ಥವಾಗಲಿಲ್ಲ. ಆದರೂ ಎಲ್ಲರ ಜೊತೆಗೆ ನಾನೂ ಆಗಲಿ ಎಂದು ವಚನಕೊಟ್ಟೆ.

''ಮುಂದೆ ನನ್ನ ಅಧ್ಯಯನ ಮುಗಿದು ಊರಿಗೆ ಮರಳಿ ಬಂದೆ. ದೊಡ್ಡವನಾದ ನಂತರ ನಾನು ಕೊಟ್ಟ ಮಾತಿನ ಅರ್ಥವಾಯಿತು. ಅಂದಿನಿಂದ ನಾನು ಇಷ್ಟೇ ದಕ್ಷಿಣೆ ಬೇಕು ಎಂದು ಎಲ್ಲಿಯೂ ಕೇಳಿಲ್ಲ. ಈಗ ನನಗೆ ಮುಪ್ಪು. ನಾನು ಇನ್ನೆಷ್ಟು ದಿವಸ ಇದ್ದೇನು? ಇಷ್ಟೇ ದಕ್ಷಿಣೆ ಬೇಕು ಎಂದು ಕೇಳಿದರೆ, ವೇದದ ವಿಕ್ರಯ ಆದಂತಾಯಿತು. ಆ ಮಹಾನುಭಾವನಿಗೆ ತಿಳಿಯದೆಯೇ ಕೊಟ್ಟ ಮಾತನ್ನು ಈಗ ತಿಳಿದೂ ಏಕೆ ಮುರಿಯಬೇಕು?''

ಆಗ ನಾನು, ''ನೀವು ಯಾರಿಗೆ ವಚನ ಕೊಟ್ಟದ್ದು? ಯಾರು ಆ ಮಹಾನುಭಾವರು?'' ಎಂದು ಕೇಳಿದಾಗ ನಮ್ಮ ಪುರೋಹಿತರು ಹೇಳಿದರು: ''ವೀರ ಸಾವರಕರ್'' ಎಂದು.

ಮಾಧವ ಪುರಾಣಿಕ

ಇದು ಕಲಕತ್ತಾದಲ್ಲಿ ನಡೆದ ಘಟನೆ. ಸಂಶೋಧನಾ ತರಬೇತಿಗೆಂದು ಅಲ್ಲಿರುವ ಕಾಲರಾ ಸಂಶೋಧನಾ ಕೇಂದ್ರಕ್ಕೆ ಹೋಗಿದ್ದೆ. ಒಂದು ದಿನ ಬೌರಿಂಗ್ ರಸ್ತೆಯ ಮೇಲೆ ಹೋಗುತ್ತಿದ್ದೆ.

ಅಲ್ಲಿಯ ಫುಟ್‌ಪಾತಿನ ಮೇಲೆ ಕೆಲವು ಜೋಪಡಿಗಳಿದ್ದವು. ಅದರಲ್ಲಿಯ ಒಂದು ಜೋಪಡಿಯಿಂದ ಬೀಸಿದ ಕೆಟ್ಟ ಕೆಸರಿನ ನೀರು ನನ್ನ ಬಿಳಿ ಪ್ಯಾಂಟಿನ ಮೇಲೆ ಹರಡಿತು. ಕೂಡಲೇ ಕೆಸರಿನ ನೀರು ಬೀಸಿದ ಹೆಂಗಸಿನ ಕಡೆಗೆ ನೋಡಿದೆ. ಅವಳು ಕೈ ಜೋಡಿಸಿ,

ದೃಶ್ಯ ಈಗಲೂ ಕಣ್ಣಿಗೆ ಕಟ್ಟಿದಂತಿದೆ.

ಸಂಜೆಯ ಹೊತ್ತು ಮೋಟಾರ್ ಬೈಕಿನಲ್ಲಿ ಮೂಡಬಿದ್ರಿಗೆ ವೇಣೂರಿನಿಂದ ಬರುತ್ತಿದ್ದೆ. ಅಷ್ಟರಲ್ಲಿ ಜೋರಾಗಿ ಮಳೆ ಸುರಿಯಲು ಆರಂಭವಾಯಿತು. ಆಸರೆಗಾಗಿ ಒಂದು ಹೋಟೇಲಿಗೆ ಓಡಿದೆ. ಒಳಗೆ ಕಾಲಿಟ್ಟ ತಕ್ಷಣ 'ಚಟೀರ್' ಎಂಬ ಮಿಂಚೊಂದು ಜೋರಾಗಿ ಆರ್ಭಟಿಸಿತು. ಜೊತೆಗಿನ ಗುಡುಗಿಗೆ ಇಡೀ ಭೂಮಿಯೇ ಕಂಪಿಸಿದಂತಾಯಿತು. ಅಲ್ಲೆ ತಿಂಡಿಯ ಪೊಟ್ಟಣವೊಂದನ್ನು ಹಿಡಿದು ನಿಂತಿದ್ದ ಚಿಕ್ಕ ಹುಡುಗಿಯಂತೂ ಭಯದಲ್ಲಿ ಕೂಗಿಯೇ ಬಿಟ್ಟಳು. ಅಷ್ಟರಲ್ಲಿ ಆ ಬಡಾವಣೆಯ ಜನರು ಬೊಬ್ಬೆ ಹಾಕತೊಡಗಿದರು. ಹೋಟೇಲಿನಲ್ಲಿದ್ದ ಜನರೆಲ್ಲರೂ ಅತ್ತ ಓಡಿದರು. ನಾನೂ ಹೋದೆ. ನೋಡಲು ಅಲ್ಲೊಂದು ಪುಟ್ಟ ಮನೆ ಸಿಡಿಲಿನ ರೋಷಕ್ಕೆ ಭಸ್ಮವಾಗಿತ್ತು. ಹತ್ತಿರ ಹೋಗಿ ನೋಡಿ

ಮನೆಯ ಯಜಮಾನ ತನ್ನ ಅಂಬೆಗಾಲಿಡುವ ಮಗುವಿನ ಜೊತೆಗೆ ಆಟವಾಡುತ್ತಿದ್ದ. ಮಗು ಹತ್ತಿರ ಬರುತ್ತಿದ್ದಂತೆ ಕೈಗಳನ್ನು ಅಗಲಿಸಿ ಮುಂಚಾಚಿದ್ದಾನೆ. ಮಗು ನಗುತ್ತ ಬರುತ್ತಿತ್ತು. ಈಗ ಇಬ್ಬರೂ ಅದೇ ಭಂಗಿಯಲ್ಲಿ ಸ್ತಬ್ಧರಾಗಿದ್ದಾರೆ. ಇನ್ನೊಂದು ಮೂಲೆಯಲ್ಲಿ ಬೀಡಿ ಕಟ್ಟುತ್ತ ಗೋಡೆಗೆ ಒರಗಿದ್ದ ಹೆಂಡತಿ ಅಲ್ಲೆ ಕರಟಿ ಹೋಗಿದ್ದಾಳೆ. ಅಡಿಗೆ ಕೋಣೆಯಲ್ಲಿ ಕಾಫಿ ತಯಾರಿಸುತ್ತಿದ್ದ ಮುದಿ ತಾಯಿ ಅರ್ಧ ಬೆಂದು ಅಡ್ಡ ಬಿದ್ದಿದ್ದಾಳೆ. ಕರುಣೆಯಿಲ್ಲದ ಮಳೆ ಸುರಿಯುತ್ತಲೆ ಇತ್ತು. ಅಷ್ಟರಲ್ಲಿ ಹೋಟೇಲಿನಲ್ಲಿ ನಿಂತಿದ್ದ ಆ ಐದು ವರ್ಷದ ಚಿಕ್ಕ ಹುಡುಗಿ ತಿಂಡಿ ಪೊಟ್ಟಣ ಹಿಡಿದು ಓಡಿ ಬಂದು, "ಅಮ್ಮ, ಅಪ್ಪ" ಎಂದು ಅಳಲಾರಂಭಿಸಿತು. ಅದನ್ನು ನೋಡಲಾರದೆ ನಾನು ಎರಡು ಕಣ್ಣುಗಳನ್ನು ಮುಚ್ಚಿಕೊಂಡೆ. • ●

**ಇರ್ಶಾದ್. ಮೂಡಬಿದ್ರಿ**

*"ಮಾಫ್ ಕರನಾ ಸಾಬ್, ಮೈ ನಹಿಂ ದೇಖಿ. ಅಚ್ಛಾ, ಪಾನಿ ದೇತಿ ಹೂಂ. ದಯಾ ಕರಕೆ ಆವಾ, ಮೈ ಸಾಫ್ ಕರಕೆ ದೇತಿ ಹೂಂ" ಎಂದಳು. ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಕೂಡಲೇ ಕ್ಷಮೆ ಕೇಳಿದಳಲ್ಲ, ಎಂದು ನನಗೆ ಸಂತೋಷವಾಯಿತು. ಅಲ್ಲದೆ ಆ ಸ್ಥಿತಿಯಲ್ಲಿ ಸಂಶೋಧನಾ ಕೇಂದ್ರಕ್ಕೆ ಹೋಗುವಂತಿರಲಿಲ್ಲ. ಇನ್ನೇನು ಜೋಪಡಿಯ ಹಿಂದಕ್ಕೆ ಹೋಗಿ ಪ್ಯಾಂಟನ್ನು ಸ್ವಚ್ಛಗೊಳಿಸಬೇಕು ಎಂದು ಅತ್ತ ಹೋಗುವವನಿದ್ದೆ, ಅಷ್ಟರಲ್ಲಿ ಅಲ್ಲಿಗೆ ಬಂದ ಮಧ್ಯವಯಸ್ಕರೊಬ್ಬರು ನನ್ನ ಹತ್ತಿರ ಬಂದು, "ಎಕ್ಸ್‌ಕ್ಯೂಸ್‌ಮೀ, ಐ ವಾಂಟ್ ಯು ಟೆಲ್ ಯು ಸಮಥಿಂಗ್. ಪ್ಲೀಸ್ ಕಮ್ ದಿಸ್ ಸೈಡ್." ಎಂದರು. ಗೌರವಾನ್ವಿತರಂತೆ ಕಾಣುವ ಅವರ ಮಾತನ್ನು ಅಲ್ಲಗಳೆಯಲಾಗದೆ ಈಚೆ ಬಂದು ವಿಷಯವೇನೆಂದು ಕೇಳಿದೆ. ಅವರು ಕೊಟ್ಟ ಉತ್ತರ ಹೀಗಿತ್ತು. "ಬಾಬು, ನಾನು ಈ ಊರಿನವನೆ. ಬಟ್ಟೆ ಮೇಲೆ ಬೀಳಿಸುವ ಈ ಕೆಸರು ಕೆಲಸ ಒಂದು ನಾಟಕ. ಕೆಸರು ನಿಮ್ಮ ಪ್ಯಾಂಟ್ ಮೇಲೆ ಬಿದ್ದ ಮೇಲೆ ಪ್ಯಾಂಟನ್ನು ಸ್ವಚ್ಛ ಮಾಡುತ್ತೇನೆಂದು ನಿಮ್ಮನ್ನು ಜೋಪಡಿಯ ಹಿಂದೆ ಕರೆದೊಯ್ಯುತ್ತಾರೆ. ಅಲ್ಲಿ ಇಬ್ಬರು ಮೂವರು ಧಡಿಯರು ನಿಮಗೆ ಚಾಕು ತೋರಿಸಿ ನಿಮ್ಮಲ್ಲಿರುವ ಹಣ, ವಾಚು, ಇನ್ನಿತರ ಬೆಲೆ ಬಾಳುವ ವಸ್ತುಗಳನ್ನು ದೋಚುತ್ತಾರೆ. ಚಾಕು ಹಾಕಲು ಕೂಡ ಈ ಜನ ಹೇಸುವುದಿಲ್ಲ. ನೀವು ಹೊರಗಿನ ಜನ. ಸ್ವಲ್ಪ ಎಚ್ಚರಿಕೆಯಿಂದ ಇರಿ," ಎಂದು ಹೇಳಿದಾಗ ಅವರಿಗೆ ನನ್ನ ಕೃತಜ್ಞತೆ ಸಲ್ಲಿಸಿ ಮರಳಿ ನನ್ನ ರೂಮಿನತ್ತ ಸಾಗಿದೆ.*

**ದುರ್ಗಾದಾಸ ಜಿ.ನಾಯ್ಕ**



ಆ ಮನೆ ಕಾಣಿಸತೊಡಗುತ್ತಲೇ ಅವನ ನಡಿಗೆಯ ಗತಿ ಜೋರಾಯಿತು. ಕ್ಷಣಾರ್ಧದಲ್ಲೇ ಮನೆ ಬಾಗಿಲಿಗೆ ಬಂದು ನಿಂತ ಆತನಿಗೆ ಮುಚ್ಚಿದ ಬಾಗಿಲ ಸ್ವಾಗತ. ಅದೇನೋ ಒಂದು ರೀತಿಯ ಅಧೈರ್ಯ. ಆದರೂ ಸಾವರಿಸಿಕೊಂಡು ಕಾಲ್‌ಬೆಲ್ ಗುಂಡಿಯೊತ್ತಿದ. ಒಳಗಿನ ಹೆಜ್ಜೆಯ ಸದ್ದನ್ನು ಸೂಕ್ಷ್ಮವಾಗಿ ಆಲಿಸತೊಡಗಿದ. ಹೌದು, ಯಾರೋ ದೂರದಿಂದ ಬಾಗಿಲೆಡೆ ಸಾಗಿ ಬರುತ್ತಿದ್ದಾರೆ... ಬಳೆಗಳ ಕಿಣ ಕಿಣ ಸಪ್ಪಳ ಬೇರೆ. ಕುತೂಹಲದಿಂದ ಕಾದು ನಿಂತ ಮೆಲ್ಲನೆ ಬಾಗಿಲು ತೆರೆಯಿತು.

''ಬನ್ನಿ.... ಒಳಗೆ ಬನ್ನಿ....'' ಮಧ್ಯ ವಯಸ್ಕ ಮಹಿಳೆಯ ಸ್ವಾಗತ. ಆಕೆ ಆಕೆಯ ತಾಯಿ....

''ಹೆ...ಹೆ... ಸುಮ್ನೆ ಈ ಕಡೆ ಒಬ್ಬರ ಮನೆಗೆ ಬಂದಿದ್ದೆ..'' ಎಂದ ಆತ.. ಆದರೆ ಕಣ್ಣುಗಳು ಒಳಗೆಲ್ಲ ಆಕೆಯನ್ನು ಅರಸುತ್ತಿ







ಮರಾಠಿ ಕಥೆ

# ಕಣ್ಣು

ಮೂಲ: ನಿರ್ಮಲಾ ಬರ್ವೆ
ಕನ್ನಡಕ್ಕೆ: ಬಿ.ವಿ.ಪಪ್ಪು

ದ್ದವು. ತಾಯಿ ''ಬನ್ನಿ, ಕೂತುಕೊಳ್ಳಿ'' ಎಂದು ಕುಶನ್ ಚೇರ್ ಮೇಲೆ ಕುಳಿತುಕೊಂಡರು. ಆತ ಸೋಫಾದ ಮೇಲೆ, ಯಾವ ಕ್ಷಣದಲ್ಲಾದರೂ ಎದ್ದು ಓಡಿ ಹೋಗುವ ತಯಾರಿಯಲ್ಲಿದ್ದವನಂತೆ, ಕುಳಿತ. ತಾಯಿ ಏನೇನೋ ಪ್ರಶ್ನೆ ಕೇಳಿದರು. ಆತ ಅವುಗಳಿಗೆಲ್ಲ ಯಾಂತ್ರಿಕವಾಗೆಂಬಂತೆ ಉತ್ತರಿಸಿದ. ಆತನಿಗೇನೋ ಒಂದು ಥರಾ ಮುಜುಗರ. ಯಾಕೆಂದರೆ ಆತ ಮಾತನಾಡಲು ಬಂದದ್ದು 'ಆಕೆ'ಯೊಂದಿಗೆ - ಆಕೆಯ ತಾಯಿಯೊಂದಿಗಲ್ಲ. ಕೊನೆಗೂ ತಾಳಲಾರದೇ ಕೇಳಿಯೇ ಬಿಟ್ಟ,

''ಲೇಖಾ ಮನೇಲಿಲ್ವಾ?''

''ಇದ್ದಾಳಲ್ಲಾ. ಒಳಗೇನೋ ಮಾಡ್ತಿರಬೇಕು'' ಎಂದಾಕೆ ಹೇಳಿದಾಕ್ಷಣ, ಆಕೆಗೆ ಮತ್ತಿನ್ನೇನೂ ಕೇಳಲು ಆಸ್ಪದ ಕೊಡದಂತೆ ಕೇಳಿಯೇ ಬಿಟ್ಟ,

''ಸ್ವಲ್ಪ ಕರೀತೀರಾ? ಹ್ಞ..... ಹ್ಞ..... ಅಂಥ ಜರೂರು ಕೆಲಸವೇನೂ ಇಲ್ಲ... ಸುಮ್ನೆ...''

ಒಂದು ರೀತಿಯ ಗುಮಾನಿ, ಚೇಷ್ಟೆಗಳು ಬೆರೆತ ದೃಷ್ಟಿಯಿಂದ ಆತನೆಡೆಗೆ ನೋಡಿದ ಆ ತಾಯಿ ಕೂಡಲೇ ಎದ್ದು, ''ಲೇಖಾ....'' ಎಂದು ಕರೆಯುತ್ತ ಒಳಗೆ ನಡೆದಳು. ಮನೋಹರ ಉತ್ಸುಕತೆಯಿಂದ ಆ ಕಡೆ—ಲೇಖಾನ ಬರುವಿಕೆಯನ್ನು ಅಪೇಕ್ಷಿಸುತ್ತ—ನೋಡುತ್ತ ಕುಳಿತ.

''ನಮಸ್ಕಾರ'' ಎನ್ನುತ್ತ, (ಯಾಕೆ ಬಂದಿತೋ ಪ್ರಾಣಿ ಎಂಬ ಭಾವದಿಂದ) ಮುಂದೆ ಬಂದಳು ಲೇಖಾ.

''ನಮಸ್ಕಾರ....ಹ್ಞ....ಹ್ಞ... ನಿನ್ನ ಪ್ರಕೃತಿ ಈಗ ಹೇಗಿದೆ?''

''ಚೆನ್ನಾಗಿಯೇ ಇದೆ, ಅಡ್ಡಾಡುತ್ತಿದ್ದೇನೆ ಎಂದು ನಿಮಗೆ ಮೊನ್ನೆಯೇ ಹೇಳಿದ್ದೇನಲ್ಲ?'' ಸಿಡಿಮಿಡಿಗೊಂಡಂತಿತ್ತು ಅವಳ ಉತ್ತರ.

ಮನೋಹರ ಈಗ ಆಕೆಯ ಕಣ್ಣಲ್ಲೇ ಕಣ್ಣಿಟ್ಟು ನೋಡತೊಡಗಿದ.

''ಇದೇನು ಹೀಗೆ ಮಿಕಿ ಮಿಕಿ ನೋಡುತ್ತೀರಿ?''

''ಏನಿಲ್ಲ, ಈಗ ಕಣ್ಣಿನದೇನೂ ತೊಂದರೆಯಿಲ್ಲವಷ್ಟೆ?''

''ಚೆನ್ನಾಗಿಯೇ ಇದೆ ಅಡ್ಡಾಡುತ್ತಿದ್ದೇನೆ ಎಂದು ಹೇಳಿದ ಮೇಲೆ ಈ ಪ್ರಶ್ನೆಗೂ ಉತ್ತರ ಅದರಲ್ಲಿಯೇ ಇದೆ.''

ಮತ್ತೆ ಕಡ್ಡಿಮುರಿದಂಥ ಉತ್ತರ.

''ಆದರೂ....''

''ಏನು ಆದರೂ?''

''ಏನೋ ಕೇಳಬೇಕೆನಿಸಿತು.''

''ಮತ್ತೇನಾದರೂ ಕೇಳುವುದಿದೆಯೇ?''

''ಹೌ... ಇ...ಇಲ್ಲ... ಕೇಳುವುದೇನೂ ಇಲ್ಲ. ಆದರೆ...''

ಮನೋಹರನ ಬಾಯಿಂದ ಈ ಮಾತು ಬರುವುದೇ ತಡ, ಸಿಡಿಯಿತು ಜ್ವಾಲಾಮುಖಿ, ಮಾತಲ್ಲಿ - ಕಣ್ಣಲ್ಲಿ,

''ನೋಡಿ, ನಿಮ್ಮ ನನ್ನ ಪರಿಚಯ ಅಷ್ಟೇನೂ ಹಳೆಯದಲ್ಲ. ನನ್ನ ಕಣ್ಣಿನ ಆಪರೇಶನ್ ಸಮಯಕ್ಕೆ ನಿಮ್ಮ ಪರಿಚಯವಾದದ್ದಷ್ಟೆ. ನಿಮ್ಮಿಂದ ಆಗ ಸ್ವಲ್ಪ ಸಹಾಯವೂ ಆಯಿತೆನ್ನಿ. ಆದರೆ ಆ ಪರಿಚಯದ ಸೀಮೆ ಆಸ್ಪತ್ರೆ ಮಾತ್ರ. ಆದರೆ ನಂತರವೂ ನೀವು...''

''ಹೌದು, ನಂತರವೂ ನಿನ್ನ ಮನೆಗೆ ಬರತೊಡಗಿದ್ದೇನೆ. ಯಾಕೆಂದರೆ ನಿನ್ನ ಕ್ಷೇಮ ಸಮಾಚಾರ ಕೇಳಿ, ನಿನ್ನನ್ನು ಮಾತಾಡಿಸದಿದ್ದರೆ.... ನನಗೇನೋ ಬೇಸರ..''

''ಯಾಕೆ? ನೀವು ಆಸ್ಪತ್ರೆಯಲ್ಲಿ ಸಹಾಯ ಒದಗಿಸುವಾಗ ನಗುವ ದೇವತೆಯಂತೆ ಕಂಡಿರಿ. ಆದರೆ ನಂತರ ನಕ್ಷತ್ರಿಕನಾಗುತ್ತೀ-ರೆಂದು ನಮ್ಮ ಮನೆಯಲ್ಲಿ ಯಾರೂ ಅಂದು ಕೊಂಡಿರಲಿಲ್ಲ. ನಿಮ್ಮ ಆಗಿನ ಸಹಾಯಕ್ಕೆ ನಮ್ಮ ಮನೆಯವರೆಲ್ಲರ ಪರವಾಗಿ ಋಣ



ಯಾಗಿದ್ದೇನೆ...''

''ಛೆ..ಛೆ.. ಅಂಥ ದೊಡ್ಡ ಮಾತನ್ನಾಡ ಬೇಡಿ.... ನನಗೆ ನಿಮ್ಮ ಮನೆಗೆ ಬರುವುದು ತುಂಬ ಇಷ್ಟವಾಗುತ್ತದೆ...''

''ಆದರೆ ನಮಗೆ ಎಳ್ಳಷ್ಟೂ ಇಷ್ಟವಾಗು ವುದಿಲ್ಲ.''

''ನಿಜವಾಗಿಯೂ?'' ಮನೋಹರ ಆಘಾತಗೊಂಡವರಂತೆ ಕೇಳಿದ.

''ಹೌದು. ನೀವು ಯಾಕೆ ಬರುತ್ತಿದ್ದೀರಿ, ಯಾವುದರ ಸಲುವಾಗಿ ಬರುತ್ತೀರಿ ಎಂಬುದೇ ತಿಳಿಯುತ್ತಿಲ್ಲ. ನಿಮ್ಮನ್ನು ನಾವು ಉಪೇಕ್ಷಿಸಿ ದರೂ ನಿಮಗದು ತಿಳಿಯುವುದಿಲ್ಲ. ಅಂದ ಮೇಲೆ ನಾನೇನು ಮಾಡಲಿ?''

''ನೋಡಿ ಹೀಗೆ ದಯವಿಟ್ಟು ಮಾತನಾಡ ಬೇಡಿ. ಯಾವ ಉದ್ದೇಶದಿಂದಲೂ ನಾನು ನಿಮ್ಮ ಮನೆಗೆ ಬರುತ್ತಿಲ್ಲ..''

''ಉದ್ದೇಶವಿಲ್ಲವೆ? ನಿಮಗೇನು ಬೇಕಾ ಗಿದೆ ಇಲ್ಲಿ? ಒಂದೇ ಸವನೆ ನನ್ನನ್ನು ನೋಡು ವದೇಕೆ ಹಾಗಾದರೆ? ನೀವು ಹೀಗೆ ನೋಡು ವುದನ್ನು ನಾನು ಸಹಿಸುವುದಿಲ್ಲ. ದಯವಿಟ್ಟು ಮತ್ತೊಮ್ಮೆ ನಮ್ಮ ಕಡೆಗೆ ಬರಬೇಡಿ.... ಅದೇನು ಹೇಳುವುದು ಕೇಳುವುದಿದೆಯೋ ಇವತ್ತೇ ಮುಗಿಸಿಕೊಂಡು ಬಿಡಿ.''

ಮನೋಹರ ಗಾಬರಿಯಾದ.

''ಏನು ಹೇಳಲಿ? ಏನು ಕೇಳಲಿ? ಏನು ಮಾತನಾಡಲಿ? ಎಲ್ಲ ಮಾತನ್ನೂ ಹೀಗೇ ಹೇಳಲು ಬರುತ್ತಿದ್ದರೆ....''

''ನೀವು ಸಭ್ಯಸ್ಥ ಕುಟುಂಬದವರೆಂದು ಈ ವರೆಗೆ ಈ ರೀತಿ ಹೇಳಲು ಹಿಂದೆ ಮುಂದೆ ನೋಡಿದೆವು.. ಆದರೀಗ ಸ್ಪಷ್ಟವಾಗಿಯೇ ಹೇಳುತ್ತೇನೆ: ನಾನು, ನನ್ನಪ್ಪ ಅಮ್ಮ ಎಲ್ಲ ನೀವು ನಮ್ಮ ಮನೆಗೆ ಬರುವುದನ್ನು ಹೇಗೆ ನಿಲ್ಲಿಸಬೇಕೆಂಬ ವಿಚಾರವನ್ನೇ ಮಾತಾಡುತ್ತಿ ದ್ದೇವೆ....''

ಲೇಖಾಳ ಮಾತು, ಆ ಮಾತಾಡುವಾಗ ಅವಳ ಮುಖದಲ್ಲಿನ ಬೆಂಕಿಯ ಕಾವು ಮನಕ್ಕೆ




ತಟ್ಟಿ ಮನೋಹರನ ಕಣ್ಣಲ್ಲಿ ನೀರಾಡತೊಡ ಗಿತು. ಮುಖ ಕೆಳಗೆ ಹಾಕಿದ ಆತ.

''ಒಳ್ಳೆಯದು. ನಾನಿನ್ನು ಎಂದಿಗೂ ನಿಮ್ಮ ಮನೆಗೆ ಬರುವುದಿಲ್ಲ. ಇದೇ ಕೊನೆ. ಅದಕ್ಕೇ ನನಗೇನು ಹೇಳಬೇಕೆಂದಿದೆಯೋ ಅದನ್ನೆಲ್ಲ ಹೇಳಿಬಿಡುತ್ತೇನೆ. ಹಾಗೆ ನೋಡಿ ದರೆ ಅದನ್ನು ಹೇಳುವ ಅವಶ್ಯಕತೆಯಿದೆ ಯೆಂದೂ ಅನಿಸುವುದಿಲ್ಲ. ಆದರೂ... ಅದನ್ನು ಹೇಳಿಬಿಡುವುದೊಳಿತು. ಅದರಿಂದ ನನ್ನ ಮನಕ್ಕೊಂದಿಷ್ಟು ಶಾಂತಿ ದೊರೆತೀತು.''

ಆತನೇನು ಹೇಳಲಿದ್ದಾನೆಯೋ ಎಂದು ಲೇಖಾ ಮನೋಹರನ ಕಡೆ ಕಣ್ಣಗಲಿಸಿ ನೋಡತೊಡಗಿದಳು. ಈಗ ಅವನ ಕಣ್ಣನಲ್ಲಿ ಹೊಳಪಿರಲಿಲ್ಲ. ದೃಷ್ಟಿಯಲ್ಲಿ ಕುತೂಹಲವೂ ಇರಲಿಲ್ಲ. ಆದರೆ ಗಾಸಿಗೊಂಡ ಮನಸ್ಸು ಆತನದು ಎಂಬುದು ಮಾತ್ರ ಆ ಕಣ್ಣುಗಳಲ್ಲಿ ಸ್ಪಷ್ಟವಾಗಿ ತೋರಿಬರುತ್ತಿತ್ತು.

''ನಿನ್ನ ತಾಯಿಯನ್ನು ಕರೆದರೆ ಒಳ್ಳೆಯದು..'' ಎಂದು ಸ್ವಲ್ಪ ಸಾವರಿಸಿಕೊಂಡು ಕುಳಿತ ಮನೋಹರ ಕಣ್ಣೀರನ್ನು ಒರೆಸಿಕೊಂಡ. ತುಟಿಯನ್ನು ಕಚ್ಚಿ ಹಿಡಿದು ಒಳಗಿನ ವೇದನೆಗೆ ಅಣೆ ಹಾಕಿದ.

ಲೇಖಾಳೊಂದಿಗೆ ಆಕೆಯ ತಾಯಿ ಬಂದರು.

''ಕುಳಿತುಕೊಳ್ಳಿ ತಾಯಿ. ನಿಮ್ಮ ಮನೆಗೆ ಬಂದು ನಿಮಗೇ 'ಕುಳಿತುಕೊಳ್ಳಿ' ಎಂದು ಹೇಳಿದ ನನ್ನ ಉದ್ಧಟತನವನ್ನು ಕ್ಷಮಿಸಿರಿ. ನನ್ನ ಕುರಿತು ನಿಮಗೆಲ್ಲ ತಪ್ಪು ತಿಳುವಳಿಕೆಯುಂಟಾಗಿದೆ ಎಂದು ಗೊತ್ತಾಯಿತು. ಹೌದು, ಆ ತಿಳುವಳಿಕೆ ತಪ್ಪು ಎಂದು ನಾನಂದುಕೊಂಡರೂ ನಿಮ್ಮ ದೃಷ್ಟಿಯಲ್ಲಿ ಅದು ಸರಿಯಾದದ್ದೇ....''

''ಏನಪ್ಪಾ,ನಿನಗೆ ಹುಷಾರಿಲ್ಲವೆಂದು..''

''ನನಗೇನೂ ಆಗಿಲ್ಲ-ತಾಯಿ. ದಯವಿಟ್ಟು ಇವತ್ತು ನನಗೆ ಮಾತನಾಡುವ ಕೊನೆಯ ಅವಕಾಶ ಕೊಡಿರಿ. ಯಾಕೆಂದರೆ ಮುಂದೆಂದೂ ಹೇಳುವುದಕ್ಕೆ ನಾನಾಗಲಿ, ಕೇಳುವುದಕ್ಕೆ ನೀವಾಗಲಿ ಹೀಗೆ ಸಂಧಿಸುವುದಿಲ್ಲ...'' ಎಂದಾತ ನಿಟ್ಟುಸಿರೊಂದನ್ನು ಹೊರಚೆಲ್ಲಿ ಹೇಳತೊಡಗಿದ,

''ಐದು ವರ್ಷಗಳ ಹಿಂದೆ ನನ್ನ ಮದುವೆಯಾಯಿತು. ಯಾರೊಂದಿಗೆ, ಯಾವೂರಲ್ಲಿ ಎಂಬೆಲ್ಲ ವಿವರ ಇಲ್ಲಿ ಅಪ್ರಸ್ತುತ. ನನ್ನ ಹೆಂಡತಿಯ ಹೆಸರು ಶುಭಾಂಗಿ. ಚೆಲುವೆ. ನನಗೆ ಆಕೆಯ ಕಣ್ಣುಗಳು ಬಹಳ ಆಕರ್ಷಣೆಯುಂಟು ಮಾಡಿದ್ದವು. ನಿರ್ಮಲ, ಪ್ರಸನ್ನ ಕಣ್ಣುಗಳು. ಆ ತನ್ನ ಮಾತಾಡುವ ಕಣ್ಣುಗಳಿಂದಾಗಿ ನನ್ನನ್ನಾಕೆ ಬಂದಿಯಾಗಿಸಿದ್ದಳು.

''ನಮ್ಮದು ಹಾಲು-ಜೇನಿನಂಥ ಸಂಸಾರವಾಗಿತ್ತು. ಆದರೆ ವಿಧಿಗೆ ಇದನ್ನು ಸಹಿಸಲಾಗಲಿಲ್ಲವೇನೋ. ಗ್ಯಾಸ್ ತೀರಿದ್ದರಿಂದ ಆ ದಿನ ಆಕೆ ಸೀಮೆ ಎಣ್ಣೆ ಸ್ಟವ್ ಹೊತ್ತಿಸಿದಳು. ಆದರೆ ಆ ಸ್ಟವ್ ಆಕೆಯ ಪಾಲಿಗೆ ಮೃತ್ಯುವಾದೀತೆಂದು ಯಾರಿಗೆ ಗೊತ್ತು. ಸೀರೆಗೆ ಬೆಂಕಿ ಹತ್ತಿತು. ಅವಳನ್ನುಳಿಸಲು ಹೋದ ನನಗೂ ಬೆಂಕಿ ತಾಗಿತು. ಇಬ್ಬರನ್ನೂ ಆಸ್ಪತ್ರೆಗೆ ಸೇರಿಸಿದರು.

''ಶುಭಾಂಗಿ ಬದುಕುಳಿಯುವುದಿಲ್ಲವೆಂದು ಡಾಕ್ಟರರು ನನಗೆ ಸೂಚ್ಯವಾಗಿ ಹೇಳಿದರು. ಆಕೆಯ ಬಳಿಯೇ ಕುಳಿತಿರುತ್ತಿದ್ದೆ. ಆ ಕಣ್ಣುಗಳನ್ನೇ ನೋಡುತ್ತ....'' ಎಂದು ಮತ್ತೆ ಲೇಖಾಳನ್ನು ನೋಡಿದ ಮನೋಹರ.

''ಶುಭಾಂಗಿ ಕಣ್ಮುಚ್ಚಿದಳು. ಅವಳ ಕೊನೆಯಿಚ್ಛೆಯನ್ನು ಪೂರೈಸುವುದು ನನ್ನ ಕರ್ತವ್ಯವಾಗಿತ್ತು. ಅಷ್ಟರಲ್ಲೇ ನೀನು ಆಸ್ಪತ್ರೆ ಸೇರಿದೆ ಲೇಖಾ... ನಿನಗೆ ಗೊತ್ತೇನಮ್ಮಾ, ನೀನೀಗ ನೋಡುತ್ತಿರುವುದು ಶುಭಾಂಗಿಯ ಕಣ್ಣುಗಳ ಮೂಲಕ.... ಅದಕ್ಕೇ ನಾನು ಇಲ್ಲಿಗೆ ಬರಲು ಹಾತೊರೆಯುತ್ತಿದ್ದದ್ದು...''

ಮನೋಹರನ ದನಿ ನಡುಗತೊಡಗಿತು. ಕಂಠ ಗದ್ಗದಿತವಾಯಿತು. ಅವರೆಲ್ಲರ ಕಣ್ಣುಗಳೂ ಭಾಷ್ಪಪೂರಿತವಾಗಿದ್ದವು.

''ಅಳಬೇಡ ಲೇಖಾ, ಅಳಬೇಡ. ನನ್ನ ಶುಭಾಂಗಿಯ ಕಣ್ಣುಗಳಲ್ಲೆಂದೂ ನಾನು ದುಃಖಾಶ್ರುವನ್ನು ನೋಡಿಲ್ಲ... ಈ ಕಣ್ಣುಗಳು ಸದಾ ಬೆಳದಿಂಗಳನ್ನೇ ಸೂಸುತ್ತಿರಲಿ... ನಾನಿನ್ನು ಬರುತ್ತೇನೆ. ಇನ್ನು ಎಂದಿಗೂ ಈ ದಾರಿಯತ್ತ ಹೆಜ್ಜೆ ಹಾಕುವುದಿಲ್ಲ'' ಎಂದು ಎದ್ದು ನಿಂತ.

''ದಯವಿಟ್ಟು ಕ್ಷಮಿಸಿ. ನಾವು ಅಂದದಕ್ಕೆ, ನೀವು ನೊಂದದಕ್ಕೆ ಕ್ಷಮೆ ಇರಲಿ.''

''ಕ್ಷಮೆಯ ಮಾತೇಕೆ... ನಿಮ್ಮ ಮನೆಯಲ್ಲಿ ಸದಾ ನಗು ತುಂಬಿರಲಿ.. ಲೇಖಾ ನೀನಿರುವೆಡೆಯಲ್ಲೆಲ್ಲ ಶುಭಾಂಗಿಯ ಶುಭವಾದ ಹಾಸ ತುಂಬಿರಲಿ..'' ಎಂದು ಅಲ್ಲಿಂದ ದಡದಡನೇ ಹೊರಟು ಬಿಟ್ಟ.

●

# ಜೀವನದರ್ಶನ

ಕೆ.ಟಿ. ಪಾಂಡುರಂಗಿ

## ಪ್ರಗತಿ-ಯಥಾಸ್ಥಿತಿ-ಅಧೋಗತಿ

ಜೀವನವು ಸ್ವಭಾವತಃ ಪ್ರಗತಿಶೀಲವಾಗಿರುವದು. ಇದನ್ನು ನಾವು ಶಾರೀರಿಕವಾದ ಬೆಳವಣಿಗೆಯಲ್ಲಿ ಸ್ಪಷ್ಟವಾಗಿ ಕಾಣಬಹುದು. ಬಾಲ್ಯದಿಂದ ತಾರುಣ್ಯ ತಾರುಣ್ಯದಿಂದ ಮಧ್ಯವಯಸ್ಸುಗಳಲ್ಲಿ ಮನುಷ್ಯನು ಶಾರೀರಿಕವಾಗಿ ಪ್ರಗತಿಯನ್ನು ಹೊಂದುವುದನ್ನು ನಾವು ಕಾಣುತ್ತೇವೆ. ವಾರ್ಧಕ್ಯದಲ್ಲಿ ಶರೀರವು ಶಿಥಿಲವಾಗುವುದನ್ನು ನಾವು ಕಂಡರೂ ಅದೂ ಸಹಜವಾಗಿದ್ದರೆ ಅದನ್ನು ಅಧೋಗತಿಯೆಂದು ಕರೆಯಲು ಬರುವುದಿಲ್ಲ.

ಈ ಮಾತು ಮನುಷ್ಯನ ಮಾನಸಿಕ ಬೆಳವಣಿಗೆಗೂ ಅನ್ವಯಿಸುವದು. ಬಾಲ್ಯ ತಾರುಣ್ಯ ಮಧ್ಯವಯಸ್ಸು ಮತ್ತು ವಾರ್ಧಕ್ಯದಲ್ಲಿ ಮನುಷ್ಯನ ವಿಚಾರಗಳು ವಿಕಸಿತವಾಗುತ್ತಲೇ ಹೋಗುವವು. ಆದರೆ ಮನುಷ್ಯನ ಮಾನಸಿಕ ವಿಕಾಸವು ಶರೀರದ ವಿಕಾಸದಷ್ಟು ಏಕಾಂಗಿಯಾಗಿರುವುದಿಲ್ಲ. ಅವನ ಶರೀರದ ವಿಕಾಸಕ್ಕೆ ಯೋಗ್ಯವಾದ ಆಹಾರ, ವ್ಯಾಯಾಮ, ರೋಗರುಜಿನಗಳ ಅಭಾವ ಇಷ್ಟಿದ್ದರೆ ಸಾಕು. ಆದರೆ ಮಾನಸಿಕ ವಿಕಾಸವು ಇಷ್ಟು ನೇರವಾಗಿ ಸರಳವಾಗಿ ಇರುವುದಿಲ್ಲ. ಅವನ ತಂದೆ ತಾಯಿಗಳು, ಅಧ್ಯಾಪಕರು, ಪರಿಸರ, ಓದುವ ಗ್ರಂಥಗಳು, ಸಿಹಿ ಕಹಿ ಅನುಭವಗಳು ಇವೆಲ್ಲ ಓರ್ವನ ಮನಸ್ಸನ್ನು ವಿಚಾರಗಳನ್ನು ರೂಪಿಸುತ್ತವೆ. ಈ ಎಲ್ಲ ಪ್ರಭಾವಗಳನ್ನು ಪಡೆದೂ ವ್ಯಕ್ತಿ ಮತ್ತು ಸಮಾಜದ ಆರೋಗ್ಯಕರವಾದ ಬೆಳವಣಿಗೆಗೆ ಸಹಾಯಕವಾಗುವಂಥ ಕ್ರಿಯಾಶೀಲ ವಿಚಾರಗಳನ್ನು ರೂಪಿಸಿಕೊಳ್ಳುವುದೇ ಪ್ರಗತಿಶೀಲತೆ. ಇಂಥ ಶಕ್ತಿ ಪ್ರತಿಯೊಬ್ಬನಲ್ಲಿಯೂ ಸಹಜವಾಗಿಯೇ ಇರುತ್ತದೆ. ಆದರೆ ಮೇಲೆ ಹೇಳಿದ ಪ್ರಭಾವಗಳ ಒತ್ತಡ ಹೆಚ್ಚಾದಾಗ ಕೆಲವರಿಗೆ ಸ್ವಂತ ವಿಚಾರ ಮಾಡುವ ಶಕ್ತಿ ಕುಂಠಿತವಾಗುತ್ತದೆ ಅಥವಾ ವಿಕೃತವಾಗುತ್ತದೆ. ಆಗ ಅವರು ಅನೂಚಾನವಾಗಿ ಬಂದ ಕೆಲವು ವಿಚಾರ ಮತ್ತು ಮೌಲ್ಯಗಳ ಚೌಕಟ್ಟಿನಲ್ಲಿಯೇ ಆಲೋಚಿಸುತ್ತಾರೆ. ಅದರಂತೆಯೇ ವರ್ತಿಸುತ್ತಾರೆ. ಇದೇ ಯಥಾಸ್ಥಿತಿ. ಇನ್ನು ಕೆಲವರು ಭಾವನಾವಶರಾಗಿ ಅಥವಾ ಕೆಲವು ವಿಧವಾದ ಮಾನಸಿಕ ದುರ್ಬಲತೆ ವ್ಯಸನಗಳಿಗೆ ಒಳಗಾಗಿ ಅಸೂಯೆ ದ್ವೇಷ ಇಂಥ ಮನೋವಿಕಾರಗಳಿಗೆ ಒಳಗಾಗಿ ಅಸಹನೆ ಆಕ್ರೋಶಗಳನ್ನು ಬೆಳೆಸಿಕೊಂಡು ಆಲೋಚನೆ ಮಾಡಲು ತೊಡಗುತ್ತಾರೆ. ಇದೇ ಅಧೋಗತಿ. ಕೆಲವು ಸಂದರ್ಭಗಳಲ್ಲಿ ಯಥಾಸ್ಥಿತಿಯ ಹಟವೂ ಅಧೋಗತಿಗೆ ಕಾರಣವಾಗುತ್ತದೆ. ಪ್ರಗತಿಶೀಲತೆಯ ತಪ್ಪು ಕಲ್ಪನೆಯೂ ಅಧೋಗತಿಗೆ ಕಾರಣವಾಗುತ್ತದೆ. ಇವುಗಳಿಂದ ಪಾರಾಗಬೇಕಾದರೆ ಹಿಂದಿನ ತಲೆಮಾರಿನವರು ಮುಂದಿನ ತಲೆಮಾರಿನವರಿಗೆ ಸಾಧ್ಯವಾದಷ್ಟು ವಿಚಾರ ಸ್ವಾತಂತ್ರ್ಯದ ಅವಕಾಶಗಳನ್ನು ಒದಗಿಸಬೇಕು. ಸಾಧ್ಯವಾದಷ್ಟು ಆರೋಗ್ಯಕರವಾದ ಸಾಮಾಜಿಕ ಪರಿಸರವನ್ನು ಒದಗಿಸಬೇಕು. ಇವೆರಡಕ್ಕಿಂತ ಹೆಚ್ಚಾಗಿ ಪ್ರತಿಯೊಬ್ಬ ವ್ಯಕ್ತಿಯೂ ವೈಚಾರಿಕ ಸ್ವಂತಿಕೆಯನ್ನು ಬೆಳೆಸಿಕೊಳ್ಳಬೇಕು. ●

# ಸಿಂಗಪುರದ ವರ್ಣರಂಜಿತ ಹಬ್ಬಗಳು ಉತ್ಸವಗಳು

ವಿವಿಧ ಮತ-ಧರ್ಮಗಳ ಆಗರ ಸಿಂಗಪುರ. ಕೇವಲ 617 ಚದರ ಕಿಲೋಮೀಟರ್ ವಿಸ್ತೀರ್ಣದ ಈ ಪುಟ್ಟ ದ್ವೀಪದಲ್ಲಿ ಚೀನೀಯರು, ಮಲಯ-ಇಂಡೋನೇಷಿಯರು, ಕ್ರೈಸ್ತರು, ಮಹಮ್ಮದೀಯರು, ಬೌದ್ಧರು, ಹಿಂದೂಗಳು, ಪಾರ್ಸಿ ಹಾಗೂ ಸಿಖ್ಖ ಜನಾಂಗದವರಲ್ಲದೆ ಹಲವಾರು ಅನ್ಯಮತೀಯರೂ ಸಹಬಾಳ್ವೆ ಮಾಡುತ್ತಾ ಪ್ರಪಂಚಕ್ಕೇ ಮಾದರಿ ಎನಿಸಿಕೊಂಡಿದ್ದಾರೆ. ಪರಧರ್ಮ ಸಹಿಷ್ಣುತೆಯ ಜೊತೆಗೆ ಇತರ ಧರ್ಮಗಳನ್ನು ಗೌರವಿಸುವ ಸಂಪ್ರದಾಯ ಸಿಂಗಪುರದಲ್ಲಿ ಬೆಳೆದು ಬಂದಿದೆ.

ಸಿಂಗಪುರದ ವಿವಿಧ ಮತಸ್ಥರು ತಮ್ಮ ಹಬ್ಬ-ಉತ್ಸವಗಳನ್ನು ವೈವಿಧ್ಯಮಯವಾಗಿ-ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾರೆ. ಇತರ ಧರ್ಮೀಯರೂ ಪಾಲ್ಗೊಂಡು ಈ ಹಬ್ಬದ ಸಂತಸವನ್ನು ಹೆಚ್ಚಿಸುತ್ತಾರೆ. ವಿವಿಧ ಧರ್ಮ ಸಮನ್ವಯದ ನಾಡಾದ ಸಿಂಗಪುರದಲ್ಲಿ, ವರ್ಷವಿಡೀ ಒಂದಿಲ್ಲೊಂದು ಉತ್ಸವ-ಹಬ್ಬ ಆಚರಿಸಲ್ಪಡುತ್ತದೆ. ಈ ವರ್ಣಮಯ ಉತ್ಸವ-ಹಬ್ಬಗಳು ಈ ಪುಟ್ಟ ದ್ವೀಪ ರಾಷ್ಟ್ರಕ್ಕೆ ಒಂದು ಸೊಗಸಾದ ಸಾಂಸ್ಕೃತಿಕ ಚೌಕಟ್ಟನ್ನು ಒದಗಿಸಿವೆ.

'ಚಿಂಗೆ ಮೆರವಣಿಗೆ', 'ಗಾಳಿಪಟದ ಉತ್ಸವ', 'ಡ್ರ್ಯಾಗನ್ ದೋಣಿ ಉತ್ಸವ', 'ಮೂನ್ ಕೇಕ್ ಉತ್ಸವ', ಮುಂತಾದವುಗಳನ್ನು ಆಚರಿಸುವಲ್ಲಿ ಸರಕಾರ ವಿಶೇಷ ಆಸಕ್ತಿ ವಹಿಸುತ್ತದೆ. ಸಿಂಗಪುರದ ಬಹಳಷ್ಟು ಉತ್ಸವ-ಹಬ್ಬಗಳು ಚಾಂದ್ರಮಾನ ಪಂಚಾಂಗವನ್ನು ಅನುಸರಿಸಿ ಆಚರಿಸಲ್ಪಡುತ್ತದೆ.

**ತೈಪುಸಮ್:-**

ಇದೊಂದು ಸಿಂಗಪುರದಲ್ಲಿ ಆಚರಿಸಲ್ಪಡುವ ಹಿಂದೂ ಪ್ರಸಿದ್ಧ ಉತ್ಸವ. ಮುರುಗನ ಮೂರ್ತಿಯನ್ನು ಆಕರ್ಷಕ ಮೆರವಣಿಗೆಯಲ್ಲಿ ವಿನಾಯಕ ಮಂದಿರಕ್ಕೆ ಕೊಂಡೊಯ್ಯುತ್ತಾರೆ. ಆವೇಶಗೊಂಡ ಭಕ್ತಾದಿಗಳು ಚೂಪಾದ ಕಬ್ಬಿಣದ ಕಡ್ಡಿಗಳನ್ನು ಹಣೆಗೆ, ಕೆನ್ನೆಗೆ, ನಾಲಿಗೆಗೆ ಚುಚ್ಚಿಕೊಂಡು, ಸೆರಂಗೂನ್ ರಸ್ತೆಯಲ್ಲಿರುವ 'ಪೆರುಮಾಳ್ ಮಂದಿರ'ದಿಂದ ಹೊರಟು ವಿವಿಧ ಮುಖ್ಯ ಬೀದಿಗಳ ಮುಖೇನ ನಡೆದು ಚೆಟ್ಟಿಯಾರ್ ಟ್ಯಾಂಕ್ ಮಾರ್ಗದಲ್ಲಿರುವ ಮಂದಿರ ತಲುಪುತ್ತಾರೆ. ಈ ಮೆರವಣಿಗೆ, ದೇವರ ಉತ್ಸವ, ಪೂಜೆಗಳು ಸಹಸ್ರಾರು ಜನರನ್ನು ಆಕರ್ಷಿಸುತ್ತವೆ.

**ನವರಾತ್ರಿ-ದೀಪಾವಳಿ:-**

ಹಿಂದೂಗಳು ಸಿಂಗಪುರದಲ್ಲಿ ನವರಾತ್ರಿ-ದೀಪಾವಳಿ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ನವರಾತ್ರಿಯಲ್ಲಿ ಹತ್ತನೆಯ ದಿನ 'ಬೆಳ್ಳಿಯ ಕುದುರೆಯ' ಮೆರವಣಿಗೆ ಇರುತ್ತದೆ. ಭಾರತೀಯ ಸಂಗೀತ ಹಾಗೂ

ನೃತ್ಯ ಕಾರ್ಯಕ್ರಮಗಳನ್ನು ನವರಾತ್ರಿ ಸಂದರ್ಭದಲ್ಲಿ ಏರ್ಪಡಿಸುತ್ತಾರೆ. ದೀಪಾವಳಿಯಲ್ಲಿ ವಿದ್ಯುದ್ದೀಪಗಳಿಂದ ಮನೆ-ಮಂದಿರಗಳನ್ನು ಅಲಂಕರಿಸುತ್ತಾರೆ. ಎಲ್ಲ ಹಿಂದೂ ದೇಗುಲಗಳಲ್ಲೂ ಉತ್ಸವ ಮೂರ್ತಿಗಳ ಮೆರವಣಿಗೆ ಇರುತ್ತದೆ. ಪೆರುಮಾಳ್ ಮಂದಿರದ ಅಲಂಕಾರ ನೋಡುವಂತಿರುತ್ತದೆ.

**ಬೆಂಕಿ ನಡಿಗೆ ಉತ್ಸವ:-**

ಸೌತ್‌ಬ್ರಿಡ್ಜ್ ಮಾರ್ಗದಲ್ಲಿರುವ ಮಾರಿಯಮ್ಮ ಮಂದಿರದಲ್ಲಿ ಈ ಉತ್ಸವ ನಡೆಯುತ್ತದೆ. ಭಕ್ತಾದಿಗಳು ಬರಿಗಾಲಲ್ಲಿ ಕೆಂಡದ ಮೇಲೆ ನಡೆಯುತ್ತಾ, ತಮ್ಮ ಹರಕೆಯನ್ನು ಸಲ್ಲಿಸುತ್ತಾರೆ. ಇದನ್ನು ನೋಡಲು ಸಹಸ್ರ ಸಂಖ್ಯೆಯಲ್ಲಿ ಜನ ಸೇರುತ್ತಾರೆ.

**ವೈಶಾಖ ಉತ್ಸವ:-**

ಇದೊಂದು ಬೌದ್ಧರ ಪ್ರಸಿದ್ಧ ಉತ್ಸವ. ಭಗವಾನ್ ಬುದ್ಧನ ಜನನ, 'ಜ್ಞಾನ ಪ್ರಾಪ್ತಿ' ಹಾಗೂ 'ನಿರ್ವಾಣ'ವನ್ನು ಸೂಚಿಸುವ ಈ ಪವಿತ್ರ ದಿನದಂದು ಪ್ರಪಂಚದಾದ್ಯಂತ ಬೌದ್ಧರು ಮಂದಿರಗಳಿಗೆ ತೆರಳಿ ಸೇವೆ ಸಲ್ಲಿಸುತ್ತಾರೆ. ಸಿಂಗಪುರದಲ್ಲಿ ಬೌದ್ಧ ಬಿಕ್ಷುಗಳು ದಿನವಿಡೀ ಮಂತ್ರ ಪಠಿಸುತ್ತಿರುತ್ತಾರೆ. ಈ ಪವಿತ್ರ ದಿನದಂದು ಬಡವರಿಗೆ ದಾನ ಮಾಡುತ್ತಾರೆ. ಪಕ್ಷಿಗಳನ್ನು ಪಂಜರದಿಂದ ಬಿಡುಗಡೆಗೊಳಿಸುತ್ತಾರೆ. ಬೌದ್ಧ ದೇವಸ್ಥಾನಗಳಿಗೆ 'ಮೇಣದ ಬತ್ತಿ'ಯ ಮೆರವಣಿಗೆಗಳು ಸಾಗಿ ಬರುತ್ತವೆ. ಸಿಂಗಪುರದ 'ಸಹಸ್ರ ದೀಪದ ಬೌದ್ಧಾಲಯ' ಹಾಗೂ 'ಪೋರ್ ಕರ್ ಸೆ' ಮಂದಿರಗಳಲ್ಲಿ ಈ ಉತ್ಸವ ಅತ್ಯಂತ ಅದ್ದೂರಿಯಿಂದ ನಡೆಯುತ್ತದೆ.

**ರಂಜಾನ್ ಮತ್ತು ಹರಿರಾಯ ಪುಆಸ:-**

ರಂಜಾನ್ ಸಮಯದಲ್ಲಿ ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಮುಸಲ್ಮಾನ ಮತಸ್ಥರು ನಿರಾಹಾರಿಗಳಾಗಿರುತ್ತಾರೆ. ಸುಲ್ತಾನ್ ಮಸೀದಿಯ ಬಳಿ ಮಲಯ ಹಾಗೂ ಭಾರತೀಯ ಕೇಕುಗಳನ್ನು ಮಾರುವ

## ಕೃಷ್ಣ ಕೊತಾಯ

ಹಲವಾರು ಅಂಗಡಿಗಳು, ಸೂರ್ಯಾಸ್ತದ ನಂತರ ತಿನಿಸುಗಳನ್ನು ಮಾರುತ್ತವೆ. ಪ್ರತಿ ಸಂಜೆ ಮಸೀದಿಗಳಲ್ಲಿ ವಿಶೇಷ ಪ್ರಾರ್ಥನೆ ನಡೆಯುತ್ತದೆ.

ಒಂದು ತಿಂಗಳ ಉಪವಾಸ ಮುಗಿಯುತ್ತಿದ್ದಂತೆ (ಹರಿರಾಯ ಪುಆಸ) ಮುಸಲ್ಮಾನರು ಹೊಸ ದಿರುಸುಗಳನ್ನು ಧರಿಸಿ, ಪ್ರಾರ್ಥನೆ ಸಲ್ಲಿಸಿ, ಸ್ನೇಹಿತರು ಬಂಧುಗಳನ್ನು ಭೆಟ್ಟಿಯಾಗುತ್ತಾರೆ.

**ಹರಿ ರಾಯ ಹಾಜಿ:-**

ಹಜ್ ಅಥವಾ ಮಕ್ಕಾ ಯಾತ್ರೆಯ ನಿಮಿತ್ತ ಈ ಉತ್ಸವ ಆಚರಿಸಲ್ಪಡುತ್ತದೆ. ಮುಸಲ್ಮಾನರು ಮಸೀದಿಗಳಿಗೆ ತೆರಳಿ ಪ್ರಾರ್ಥನೆ ಸಲ್ಲಿಸುತ್ತಾರೆ. ಆಡು ಹಾಗೂ ಇತರ ಪ್ರಾಣಿಗಳನ್ನು ವಧಿಸಿ ಅವುಗಳ ಮಾಂಸವನ್ನು ಬಡ-ಬಗ್ಗರಿಗೆ ಹಂಚಲಾಗುವುದು. ಪ್ರವಾದಿ ಇಬ್ರಾಹಿಮರು ಅಲ್ಲಾಹುವಿನ ಆಜ್ಞೆಗನುಗುಣವಾಗಿ ತಮ್ಮ ಮಗನನ್ನು ಅರ್ಪಿಸಿದ ನೆನಪಿಗಾಗಿ ಈ ಆಚರಣೆಯನ್ನು ಏರ್ಪಡಿಸಲಾಗುತ್ತದೆ.

**ಮೌಲದಿನ್ ನಬಿ:-**

ಪ್ರವಾದಿ ಮಹಮ್ಮದರ ಜನ್ಮದಿನವನ್ನು ಸ್ಮರಿಸುವ ಈ ಹಬ್ಬ ಸಿಂಗಪುರದಲ್ಲಿ ಆಚರಿಸಲ್ಪಡುತ್ತದೆ. ಸುಲ್ತಾನ್ ಮಸೀದಿಯಲ್ಲಿ ವಿವಿಧ ಕಾರ್ಯಕ್ರಮಗಳು ನಡೆಯುತ್ತವೆ. ಧರ್ಮಗುರುಗಳು, ಪಂಡಿತರು, ಪ್ರವಾದಿಗಳ ಜೀವನ ಹಾಗೂ ಸಾಧನೆಗಳ ಬಗ್ಗೆ ಉಪನ್ಯಾಸ ನೀಡುತ್ತಾರೆ.

**ಶುಭ ಶುಕ್ರವಾರ:-**

ಕ್ರೈಸ್ತ ಮತಸ್ಥರು ತಮ್ಮ ಇತರ ಹಬ್ಬಗಳೊಂದಿಗೆ ಶುಭ ಶುಕ್ರವಾರವನ್ನು ಶ್ರದ್ಧಾ ಭಕ್ತಿಗಳಿಂದ ಆಚರಿಸುತ್ತಾರೆ. ಶುಭ ಶುಕ್ರವಾರದಂದು ಕ್ರೈಸ್ತ ಬಾಂಧವರ ಒಂದು ಮೆರವಣಿಗೆ

ಹೃದಯಸ್ಪರ್ಶಿ ಸನ್ನಿವೇಶ ನಿರ್ಮಿಸುತ್ತದೆ. ಮೊಂಬತ್ತಿಗಳನ್ನು ಹಿಡಿದ ಕ್ರೈಸ್ತ ಮತಸ್ಥರು ವಿಕ್ಟೋರಿಯಾ ಬೀದಿಯಲ್ಲಿರುವ 'ಸೈಂಟ್ ಜೋಸೆಫ್ಸ್' ಚರ್ಚಿಗೆ ತೆರಳಿ ಪ್ರಾರ್ಥನೆ ಸಲ್ಲಿಸುತ್ತಾರೆ.

**ಚೀನೀ ಹೊಸವರ್ಷ:-**

ಸಿಂಗಪುರದ ಚೀನೀ ಜನತೆಗೆ ಚಾಂದ್ರಮಾನ ಪಂಚಾಂಗದ ಮೊದಲ ದಿನ ಅತಿ ಪ್ರಮುಖವಾದದ್ದು. ವರ್ಷದ ಮೊದಲ ದಿನದ ಆಗು-ಹೋಗುಗಳು ಮುಂಬರುವ ದಿನಗಳ ದಿಕ್ಸೂಚಿ ಎಂಬ ನಂಬುಗೆ ಚೀನೀಯರದ್ದು. ಅಂತೆಯೇ ಹಳೇ ಸಾಲ ಚುಕ್ತಾ ಮಾಡಿ ಮನೆಗಳನ್ನು ಸಿಂಗರಿಸುತ್ತಾರೆ. ಚೈನಾ ಟೌನಿನಲ್ಲಿ ಬಿಡುವಿಲ್ಲದೆ ವ್ಯಾಪಾರ ಈ ಸಂದರ್ಭ ನಡೆದಿರುತ್ತದೆ. ಬಗೆ ಬಗೆಯ ಹೊಸ ವಸ್ತುಗಳನ್ನು ಜನ ಕೊಳ್ಳುತ್ತಾರೆ.

ಸಂಬಂಧಿಕರನ್ನು ಭೇಟ್ಟಿ ಮಾಡಿಕೊಂಡು ಭಾಂಧವ್ಯ ನೆನಪಿಸಿಕೊಳ್ಳುವುದು ವಾಡಿಕೆ. ಮಕ್ಕಳು ಬಂಧುಗಳ ಮನೆಗೆ ತೆರಳಿ ಕೆಂಪು ಪೊಟ್ಟಣಗಳಲ್ಲಿ ಅದೃಷ್ಟದ ಹಣ ಪಡೆಯುತ್ತಾರೆ. ಹೊಸ ವರ್ಷದ ಹದಿನೈದನೆಯ ದಿನ 'ಔತಣಗಳ ದಿನ'.

ಹೊಸ ವರ್ಷದ ನಿಮಿತ್ತ ಸಿಂಗಪುರದ ಎಲ್ಲ ಹೋಟೆಲುಗಳಲ್ಲಿ ವಿಶೇಷವಾದ ಅಡುಗೆ ತಯಾರಿಸುತ್ತಾರೆ.

**ವಾನರ ದೇವರ ಹುಟ್ಟು ಹಬ್ಬ:-**

ತುಂಟ ದೇವರ ಹೆಸರಿನಲ್ಲಿ ವರ್ಷಕ್ಕೆರಡು ಬಾರಿ ಈ ಹಬ್ಬವನ್ನು ಸಿಂಗಪುರದಲ್ಲಿ ಆಚರಿಸುತ್ತಾರೆ. ಕೆನ್ನೆಗೆ ಹಾಗೂ ದೇಹದ ಇತರ ಭಾಗಗಳಿಗೆ ಚೂಪಾದ ಸರಿಗೆ ಸುರಿದುಕೊಂಡು ಆವೇಶಗೊಂಡು ಭಕ್ತರು ಕುಣಿಯುತ್ತಾರೆ. ಚೀನೀ ದೇಗುಲಗಳ ಬಳಿ ಮೆರವಣಿಗೆ ನಡೆಯುತ್ತದೆ. 'ವಯಾಂಗ್' ನೃತ್ಯ ನಾಟಕಗಳು ಈ ಸಂದರ್ಭದಲ್ಲಿ ಪ್ರದರ್ಶಿಸಲ್ಪಡುತ್ತವೆ.

**ಮೂರನೆಯ ಯುವರಾಜನ ಹುಟ್ಟು ಹಬ್ಬ:-**

ಚೀನೀ ನಂಬುಗೆಯಂತೆ ಈ ಮೂರನೆಯ



ಮೂನ್ ಕೇಕ್ ಉತ್ಸವದಂದು ಮಕ್ಕಳು ಸುಂದರವಾದ ಲಾಟೀನುಗಳನ್ನು ಹಿಡಿದು ಮೆರವಣಿಗೆ ಹೊರಡುತ್ತಾರೆ.

ಯುವರಾಜ ಒಬ್ಬ ಬಾಲ ದೇವತೆ. ಈತನ ಒಂದು ಕೈಯಲ್ಲಿ ತೋಳಬಂದಿ ಇನ್ನೊಂದು ಕೈಯಲ್ಲಿ ಮಾಯಾಭರ್ಚಿ ಇವೆ. ವೀರನಾದ ಇವನನ್ನು ವಿಶೇಷವಾಗಿ ಕ್ಲಾರ್ಕ್ ಬೀದಿಯಲ್ಲಿರುವ ಚೀನೀ ದೇಗುಲದಲ್ಲಿ ಪೂಜಿಸಲಾಗುತ್ತದೆ. ದೇವತೆಯನ್ನು ಮೌನವಾಗಿ ಬರಮಾಡಿಕೊಂಡ ಬಳಿಕ ನೃತ್ಯಗಳು ಆರಂಭವಾಗುತ್ತವೆ. ಸಂಜೆ, ಆವೇಶಗೊಂಡ ವ್ಯಕ್ತಿಗಳು ಕತ್ತಿ ಹಾಗೂ ಭರ್ಚಿಯಿಂದ ತಮ್ಮ ದೇಹವನ್ನು ಗಾಯಗೊಳಿಸುತ್ತಾರೆ. ರಕ್ತದ ಓಕುಳಿಯಾಗು

ವುದೂ ಇದೆ.

**ಚಿಂಗ್ ಮಿಂಗ್ ಉತ್ಸವ:-**

ತಮ್ಮ ಮೃತ ಹಿರಿಯರನ್ನು ಚೀನೀಯರು ಈ ದಿನ ಸೆನಪಿಸಿಕೊಳ್ಳುತ್ತಾರೆ. ಮೃತರ ಸಮಾಧಿಗೆ ತೆರಳಿ ಧೂಪ ಹಾಗೂ ನೈವೇದ್ಯ ವನ್ನು ಸಲ್ಲಿಸಿ ತಮ್ಮ ಗೌರವ ಸೂಚಿಸುತ್ತಾರೆ.

**ಹಸಿದ ದೆವ್ವಗಳ ಉತ್ಸವ:-**

ಚೀನೀ ನಂಬುಗೆಯಂತೆ ಚಾಂದ್ರಮಾನ ಪಂಚಾಂಗದ ಏಳನೆಯ ತಿಂಗಳಿನಲ್ಲಿ ವಿಶ್ವ ದಲ್ಲಿ ದೆವ್ವಗಳು ಸಂಚರಿಸುತ್ತವೆ. ಇವುಗ ಳನ್ನು ತೃಪ್ತಿಗೊಳಿಸಲು ತೆರತೆರನಾದ ನೈವೇದ್ಯ ಹಾಗೂ ಧೂಪಗಳನ್ನು ಇಡಲಾಗು ವುದು. ಮಾರುಕಟ್ಟೆಯ ಅಂಗಡಿ ಮಾಲಕ ರೆಲ್ಲಾ ಒಟ್ಟಾಗಿ ದೆವ್ವಗಳ ಪ್ರೀತ್ಯರ್ಥ ಉತ್ತಮ ಕಾರ್ಯಕ್ರಮಗಳನ್ನು ಹಮ್ಮಿಕೊ ಳ್ಳುತ್ತಾರೆ. ವಾಯಂಗ್ ನೃತ್ಯ ನಾಟಕಗಳನ್ನು ಏರ್ಪಡಿಸುತ್ತಾರೆ.



ಸಹಸ್ರದೀಪ ಬೌದ್ಧಾಲಯದ ಪ್ರಸಿದ್ಧ ಬುದ್ಧನ ಮೂರ್ತಿ. ವೈಶಾಖ ಉತ್ಸವ ಇಲ್ಲಿ ವಿಜೃಂಭಣೆ ಯಿಂದ ಆಚರಿಸಲ್ಪಡುತ್ತದೆ.

**ನವ ದೊರೆ ದೇವರುಗಳ ಉತ್ಸವ:-**

ಚೀನೀ ಧರ್ಮದಂತೆ ಈ ನವ ದೊರೆ ದೇವರುಗಳು ಎಲ್ಲ ರೋಗ ರುಜಿನಗಳನ್ನು ದೂರ ಮಾಡಿ, ಸುಖ, ಸಮೃದ್ಧಿ, ಅದೃಷ್ಟ, ದೀರ್ಘಾಯುಷ್ಯ ಕೊಡುವವರು. ಅಂತೆಯೇ ಈ ದೇವರುಗಳ ಪ್ರೀತ್ಯರ್ಥವಾಗಿ ಚಾಂದ್ರ ಮಾನ ಪಂಚಾಂಗದ ಒಂಭತ್ತನೆಯ ತಿಂಗಳ ಒಂಭತ್ತನೆಯ ದಿನ ವಿಶೇಷ ಮೆರವಣಿಗೆ, ಪೂಜೆ ಏರ್ಪಡಿಸಲಾಗುವುದು. ಹಳದಿ ಬಾವು ಟಗಳನ್ನು ಹಿಡಿದ ಭಕ್ತಾದಿಗಳು ಡೋಲು-ಮದ್ದಳೆಗಳೊಡನೆ ನಡೆದು 'ಲೊರಾಂಗ್ ಟಾಯ್‌ಸೆಂಗ್' ಮಂದಿರ ತಲುಪುತ್ತಾರೆ.

**ಕುಸು ದ್ವೀಪ ದರ್ಶನ:-**

ಒಂದು ತಿಂಗಳಾದ್ಯಂತ ಜನ 'ಕುಸು' ದ್ವೀಪಕ್ಕೆ ಆಗಮಿಸಿ, 'ಟುವ ಪೆಕ್ ಕಾಂಗ್' ದೈವಕ್ಕೆ ಚೀನೀ ಮತ್ತು ಮಲಯ ಆಲಯಗ ಳಲ್ಲಿ ಪೂಜೆ ಸಲ್ಲಿಸುತ್ತಾರೆ. ಈ ದೈವ ಸಮೃ ದ್ಧಿಯ ಸಂಕೇತವೆಂದು ಬಗೆಯಲಾಗಿದೆ. ಇಲ್ಲಿ ಹಣ್ಣು, ಹೂವು, ಧೂಪ, ಮೊಂಬತ್ತಿ, ಮೊಟ್ಟೆ, ಮಾಂಸಗಳನ್ನು ಸಮರ್ಪಿಸಲಾಗು ತ್ತದೆ. ಪ್ರಚಲಿತ ದಂತಕಥೆಯಂತೆ ಒಂದು ಹಡಗು ಬಿರುಗಾಳಿಗೆ ಸಿಕ್ಕಾಗ ಒಬ್ಬ ಮಲ ಯನ್ ಹಾಗೂ ಇನ್ನೊಬ್ಬ ಚೈನಾದವ ಕುಸು ದ್ವೀಪದಲ್ಲಿ ಸಿಕ್ಕಿಬಿದ್ದು ಸಾಯುವವರೆಗೆ ಒಟ್ಟಾಗಿ ಸೌಹಾರ್ದದಿಂದಿದ್ದು ಮೃತರಾದ ರಂತೆ.

**ಮೂನ್ ಕೇಕ್ ಉತ್ಸವ:-**

ಚೀನೀ ನಂಬುಗೆಯಂತೆ ಚಂದ್ರ ಎಂಟ ನೆಯ ತಿಂಗಳ ಹದಿನೈದನೆಯ ದಿನ ಅತ್ಯಂತ ಉಜ್ವಲನಾಗಿರುತ್ತಾನೆ. ಈ ರಾತ್ರಿ ಮೂನ್

ಕೇಕ್ ತಿನ್ನುತ್ತಾ ಸುಂದರವಾದ ಕಾಗದದ ಲಾಟೀನುಗಳನ್ನು ಹಿಡಿದು ಮಕ್ಕಳು ಮೆರವಣಿಗೆ ಹೊರಡುತ್ತಾರೆ. ಮೂನ್ ಕೇಕ್ ಒಂದು ವಿಶಿಷ್ಟ ಖಾದ್ಯ. ಚೀನೀ ಕಥೆಯೊಂದರಂತೆ ಹಿಂದೆ ಗುಪ್ತ ವಾರ್ತೆಗಳನ್ನು ಕಳುಹಿಸಲು ಈ ಕೇಕ್‌ಗಳನ್ನು ಬಳಸುತ್ತಿದ್ದರಂತೆ. ಈ ರೀತಿಯ ಗುಪ್ತ ವಾರ್ತೆಗಳ ಕಳಿಸುವಿಕೆಯ ಮೂಲಕವಾಗಿಯೇ ಕ್ರಾಂತಿ ಮಾಡಿ ಮಂಗೋಲ್ ಚಕ್ರಾಧಿಪತ್ಯ ಕೊನೆಗೊಳ್ಳುವಂತೆ ಮಾಡಲಾಯಿತಂತೆ.

**ಡ್ರ್ಯಾಗನ್ ದೋಣಿ ಉತ್ಸವ:-**

ಚೈನಾದ ಕವಿ 'ಚು ಯುವಾನ್'ನ ಜ್ಞಾಪಕಾರ್ಥವಾಗಿ ಈ ಉತ್ಸವ ನಡೆಯುತ್ತದೆ. ಮಿತಿ ಮೀರಿದ ಲಂಚಗುಳಿತನ ಹಾಗೂ ಇತರ ಅನಿಷ್ಟಗಳೆದುರು ಈ ಕವಿ ಸಿಡಿದೆದ್ದು ನೀರಿನಲ್ಲಿ ಮುಳುಗಿ ಆತ್ಮಾರ್ಪಣೆ ಮಾಡಿದ. ಈತನನ್ನು ಕಾಪಾಡಲು ಬೆಸ್ತರು ಪ್ರಯತ್ನಪಟ್ಟು ವಿಫಲರಾದರು.

ಕವಿಯ ಗೌರವಾರ್ಥವಾಗಿ ನಡೆಯುವ ಈ ದೋಣಿ ಉತ್ಸವದಲ್ಲಿ ಏಶಿಯಾ, ಅಮೇರಿಕ, ಯುರೋಪಿನಿಂದ ಬಂದ ಜನ ಪಾಲ್ಗೊಳ್ಳುತ್ತಾರೆ. ಸುಮಾರು 12 ಮೀಟರ್ ಉದ್ದದ ದೋಣಿಗಳನ್ನು ಬಣ್ಣದಿಂದ ಸಿಂಗರಿಸುತ್ತಾರೆ. ದೋಣಿಯ ತುದಿಯಲ್ಲಿ 'ಡ್ರ್ಯಾಗನ್' ತಲೆಯನ್ನು ನಿರ್ಮಿಸುತ್ತಾರೆ. ಉಳಿದ ಜಲಚರಗಳನ್ನು ಹೆದರಿಸುವ ಸಂಕೇತವಾಗಿ ಡೋಲು, ನಗಾರಿಗಳನ್ನು ಬಳಸುತ್ತಾರೆ. ಅಕ್ಕಿಯಿಂದ ಮಾಡಿದ ಖಾದ್ಯಗಳನ್ನು ನೀರಿಗೆ ಎಸೆಯುವುದು ವಾಡಿಕೆ. ಇದೊಂದು ಅತ್ಯಂತ ಆಕರ್ಷಕ ಉತ್ಸವ. ದೋಣಿಗಳ ಈ ಪಂದ್ಯ ರೋಮಾಂಚಕವಾದದ್ದು ಕೂಡ.

**ರಾಷ್ಟ್ರೀಯ ದಿನಾಚರಣೆ:-**

1965ನೇ ಇಸವಿಯಲ್ಲಿ ಸಿಂಗಪುರ ಸ್ವತಂತ್ರ ಗಣರಾಜ್ಯವಾಯಿತು. ಪ್ರತಿ ಆಗಸ್ಟ್ ಒಂಭತ್ತರಂದು ಸಿಂಗಪುರದಲ್ಲಿ ವಿಜೃಂಭಣೆಯಿಂದ ರಾಷ್ಟ್ರೀಯ ದಿನಾಚರಣೆಯನ್ನು ಆಚರಿಸಲಾಗುವುದು. ಹೃದಯಸ್ಪರ್ಶಿ ಮೆರವಣಿಗೆಯಲ್ಲಿ 'ಮಿಲಿಟರಿ ಕವಾಯತ್ತು, ವಿವಿಧ ನೃತ್ಯಗಳು, ದೈಹಿಕ ಕಸರತ್ತು, ಮಹಿಳಾ ವಾದ್ಯ ಗೋಷ್ಠಿ, ಡ್ರ್ಯಾಗನ್ ನೃತ್ಯ' ಮುಂತಾದವುಗಳನ್ನು ಕಾಣಬಹುದು.

**ಅಂತಾರಾಷ್ಟ್ರೀಯ ಗಾಳಿಪಟ ಉತ್ಸವ:-**

ಚೀನೀಯರು ಶತಮಾನಗಳಿಂದ ನಡೆಸಿಕೊಂಡು ಬಂದ 'ಗಾಳಿಪಟ' ಸ್ಪರ್ಧೆ ಸಿಂಗಪುರದಲ್ಲಿ ಇನ್ನೂ ಆಚರಣೆಯಲ್ಲಿದೆ. ಪ್ರಪಂಚದ ಬೇರೆ ಬೇರೆ ಭಾಗಗಳಿಂದ ಸ್ಪರ್ಧಿಗಳು ಸಿಂಗಪುರಕ್ಕೆ ಬರುತ್ತಾರೆ. ಸಾಂಪ್ರದಾಯಿಕ ಗಾಳಿಪಟ, ಮಲಯದ ಪಟ, ಓರಿಯಂಟಲ್ ಹಾಗೂ ಪಾಶ್ಚಿಮಾತ್ಯ ಮುಂತಾದ ಗಾಳಿಪಟಗಳನ್ನು ಸ್ಪರ್ಧೆಯಲ್ಲಿ ಕಾಣಬಹುದು. ಸರಕಾರ ಈ ಉತ್ಸವಕ್ಕೆ ವಿಶೇಷ ವ್ಯವಸ್ಥೆ ಮಾಡುತ್ತದೆ.

ಒಟ್ಟಿನಲ್ಲಿ ವಿವಿಧ ಮತ-ಧರ್ಮಗಳ, ರಾಷ್ಟ್ರೀಯ ಅಂತಾರಾಷ್ಟ್ರೀಯ ಹಬ್ಬ-ಉತ್ಸವಗಳು ಸಿಂಗಪುರದಲ್ಲಿ ನಡೆಯುತ್ತವೆ. ಈ ಉತ್ಸವಗಳಲ್ಲಿನ ವೈವಿಧ್ಯ ಸಿಂಗಪುರಕ್ಕೆ ಹೊಸ ಮೆರುಗನ್ನು ತಂದುಕೊಟ್ಟಿದೆ. ಆಧುನಿಕ ವೈಭವೋಪೇತ ಸಿಂಗಪುರದಲ್ಲಿ ನಡೆಯುವ ಈ ಸಾಂಪ್ರದಾಯಿಕ ಹಬ್ಬ-ಉತ್ಸವಗಳು ರಾಷ್ಟ್ರದ ಶ್ರೀಮಂತ ಸಾಂಸ್ಕೃತಿಕ ಹಿರಿಮೆಯನ್ನು, ಧಾರ್ಮಿಕ ಮನೋಭಾವವನ್ನು ಬಿಂಬಿಸುವುದರಲ್ಲಿ ಯಶಸ್ವಿಯಾಗಿವೆ. ಜೊತೆಗೆ ಪರಧರ್ಮ ಸಹಿಷ್ಣುತೆ ಹಾಗೂ ಹಲವು ಧರ್ಮಗಳ ಸಮನ್ವಯ ಕ್ರಿಯೆಯಲ್ಲಿ ಸಹಕಾರಿಯಾಗಿವೆ. ●



# ಸ್ವಾಮಿನಿಷ್ಠ ಶುನಕ

ಟೋಕಿಯೋ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿದ್ದ 'ಎಜಿಬುರೋ ಉನೋ' ಒಂದು ಸಂಜೆ ವಾಯುವಿಹಾರಕ್ಕೆಂದು ಹೊರಟಾಗ ವಾರಸುದಾರರಿಲ್ಲದ ಪುಟ್ಟ ನಾಯಿ ಮರಿಯೊಂದು ಅವರ ಕಾಲಿಗೆ ತೊಡರಿತು. ಯಾವುದೋ ಬೀದಿ ನಾಯಿ ಇರಬೇಕೆಂದು ಅವರು ಅದನ್ನು ದೂರ ಸರಿಸಲು ನೋಡಿದಾಗ ಅದು 'ಅಕಿತಾ' ಎಂಬ ಪ್ರಸಿದ್ಧ ಜಾತಿಗೆ ಸೇರಿದ ನಾಯಿ ಮರಿ ಎಂದು ತಿಳಿಯಿತು. ಪ್ರೊಫೆಸರ್ ಉನೋ ಅದನ್ನು ಮನೆಗೆ ತಂದು ಪ್ರೀತಿಯಿಂದ ಸಾಕತೊಡಗಿದರು.

ಪ್ರೊಫೆಸರ್ ಉನೋರ ಮನೆ ವಿಶ್ವವಿದ್ಯಾಲಯದಿಂದ ಬಹಳ ದೂರದಲ್ಲಿತ್ತು. ಪ್ರತಿ ದಿನ ಅವರು ಮನೆಯ ಸನಿಹದಲ್ಲೆ ಇದ್ದ ಶಿಬುಯಾ ರೈಲು ನಿಲ್ದಾಣಕ್ಕೆ ಬಂದು ಅಲ್ಲಿಂದ ರೈಲು ಹತ್ತಿ ವಿಶ್ವವಿದ್ಯಾಲಯಕ್ಕೆ ತೆರಳುತ್ತಿದ್ದರು. ಪುನಃ ಸಂಜೆ ಅದೇ ರೀತಿ ರೈಲು ಗಾಡಿಯಲ್ಲಿ ಮರಳುತ್ತಿದ್ದರು. ಅಲರು ರೈಲು ನಿಲ್ದಾಣಕ್ಕೆ ಹೋಗುವಾಗ ಆ ಮುದ್ದು ನಾಯಿ ಮರಿ ಕೂಡ ಅವರ ಸಂಗಡ ಹೋಗಿ, ರೈಲು ಹೊರಡುವವರೆಗೂ ಅಲ್ಲಿಯೇ ಕಾದಿದ್ದು, ನಂತರ ಮನೆಗೆ ಹಿಂದಿರುಗುತ್ತಿತ್ತು. ಮತ್ತೆ ಸಂಜೆಯಾಗುತ್ತಲೇ ರೈಲು ಬರುವ ವೇಳೆಗೆ ಸರಿಯಾಗಿ ನಿಲ್ದಾಣದಲ್ಲಿ ಹಾಜರಿದ್ದು ತನ್ನ ಯಜಮಾನನನ್ನು ಸ್ವಾಗತಿಸುತ್ತಿತ್ತು.

1925ರಲ್ಲಿ ಒಂದು ದಿನ ಪ್ರೊಫೆಸರ್ ಎಜಿಬುರೋ ಉನೋ ವಿಶ್ವವಿದ್ಯಾಲಯದ ಸಭೆಯೊಂದರಲ್ಲಿ ಭಾಗವಹಿಸುತ್ತಿದ್ದಾಗ ಹೃದಯಾಘಾತದಿಂದ ನಿಧನರಾದರು. ಇದು ಮೂಕ ಪ್ರಾಣಿ. ಹಚಿಕೋಗೆ ತಿಳಿಯುವುದಾದರೂ ಹೇಗೆ? ಅದು ಪ್ರತಿ ಸಂಜೆ ರೈಲು ಬರುವ ವೇಳೆಗೆ ಸರಿಯಾಗಿ ರೈಲು ನಿಲ್ದಾಣಕ್ಕೆ ಬರುತ್ತಿತ್ತು. ರೈಲು ಬಂದು ಹೋಗಿ ನಿಲ್ದಾಣ ನಿರ್ಜನವಾಗುವವರೆಗೂ ತನ್ನ ಯಜಮಾನ ಬರುವುದನ್ನು ಕಾಯುತ್ತಿತ್ತು.

ವರ್ಷಗಳ ಮೇಲೆ ವರ್ಷಗಳು ಉರುಳಿದವು. ಆದರೆ ಆ ನಾಯಿ ಮಾತ್ರ ತನ್ನ ದಿನಚರಿಯನ್ನು ಬದಲಿಸಲಿಲ್ಲ. ಕೊನೆಗೆ ಅದು 1935ರ ಮಾರ್ಚ್ 8ರಂದು ತನ್ನ ಯಜಮಾನನ ನಿರೀಕ್ಷೆಯಲ್ಲಿರುವಾಗಲೇ ಕಾಯಿಲೆಯಿಂದ ಸಾವನ್ನಪ್ಪಿತು.

ಈ ವೇಳೆಗಾಗಲೆ ಅದರ ಸ್ವಾಮಿನಿಷ್ಠೆಯನ್ನು ಕುರಿತ ಸುದ್ದಿಗಳು ಜಪಾನಿನ ಮೂಲೆ ಮೂಲೆಗೂ ಹರಡಿದ್ದವು. ಅದನ್ನು ನೋಡಲು ಜಪಾನಿನ ಮೂಲೆ ಮೂಲೆಗಳಿಂದ ಜನ ಬರುತ್ತಿದ್ದರು. ಜಪಾನಿನ ಪ್ರಾಣಿದಯಾ ಸಂಘದವರು ಹಣ ಕೂಡಿಸಿ ಅದರ ಪ್ರತಿಮೆಯನ್ನು ತಯಾರಿಸಿ, ಅದು ಜೀವಂತ ಇರುವಾಗಲೇ ಶಿಬುಯಾ ರೈಲು ನಿಲ್ದಾಣದ ಎದುರು ನಿಲ್ಲಿಸಿದ್ದರು.

ಶಿಬುಯಾ ರೈಲು ನಿಲ್ದಾಣದಲ್ಲಿ ಇಂದಿಗೂ ಅದರ ಪ್ರತಿಮೆಯನ್ನು ಕಾಣಬಹುದಾಗಿದೆ.

(ಸಂಗ್ರಹ)

ಸಿ.ಎಸ್.ಎ.

# ಪದಾರ್ಥ ಚಿಂತಾಮಣಿ

- 131 -

## ಕರುಳು ಎಂದರೆ ಕರುಣೆ

ಹಿಂದೊಮ್ಮೆ (ಪದಾರ್ಥ-99) ಪ್ರಾಚೀನರಲ್ಲಿ ಮನಸ್ಸಿನ ಅಧಿಷ್ಠಾನದ ಬಗ್ಗೆ ಇದ್ದ ಗೊಂದಲವನ್ನು ಸೂಚಿಸುವ ಶಬ್ದಗಳ ಬಗ್ಗೆ ಚರ್ಚಿಸಿದ್ದೆವು. ಇದೇ ಸರಣಿಯಲ್ಲಿ ಕನ್ನಡದ ''ಕರುಳು'' ಶಬ್ದವನ್ನು ಸೇರಿಸಬಹುದು. ಕರುಳೆಂದರೇನೆಂಬುದನ್ನು ಅವರು ಅರಿತಿರಲಿಲ್ಲವೆಂದಲ್ಲ. ''ಕರುಳಾಂತ್ರಮಾಲೆ'' ಎಂದು ಸ್ಪಷ್ಟವಾಗಿಯೇ ನಿಘಂಟು ಹೇಳುತ್ತದೆ. ನಮ್ಮ ಆಹಾರವನ್ನು ಜೀರ್ಣಿಸುವುದರಲ್ಲಿ ಪ್ರಮುಖ ಪಾತ್ರವಹಿಸುವ ಸುದೀರ್ಘವಾದ ಮಾಲೆಯಂಥ ಅಂಗ ಅದೆಂದು ಅವರಿಗೆ ಗೊತ್ತು. ಹೃದಯದಂತೆ ಅದು ನಿರಂತರವೂ ಮಿಡುಕುತ್ತಿರುವುದು ಬಹುಶಃ ಪುರಾತನರ ಗಮನಕ್ಕೆ ಬಂದಿತ್ತು. ಈ ಲಕ್ಷಣವನ್ನು ನೋಡಿಯೇ ಇರಬೇಕು, ಅವರು ನಮ್ಮ ಮನಸ್ಸಿನ ಕರುಣೆಯ ಇರ್ಕೆ ನಮ್ಮ ಕರುಳಿನಲ್ಲಿದೆಯೆಂದು ಭಾವಿಸಿರಬೇಕು. ಹೀಗೆ ''ಕರುಳು'' ಶಬ್ದ ಕರುಣೆ, ಅಂತಃಕರಣ, ಮಮತೆಯೆಂಬರ್ಥ ಹೊತ್ತು ಸೊಗಸಾದ ದೇಸಿಗೆ ಜನ್ಮವಿತ್ತಿತು. ''ಕರುಳ ಕಲೆ ಪ್ರಕಟಿತವುಂಟೆ?'' ಎಂದು ಬಸವಣ್ಣನವರು ಕೇಳುತ್ತಾರೆ. ಜನ್ನ ಕವಿ ''ಕಣ್ಣರಿಯದೊಡಂ ಕರುಳರಿಯದೇ?'' ಎಂದು

ಕಣ್ಣಿಗಿಲ್ಲದ ಪ್ರೀತಿ ಶಕ್ತಿಯನ್ನು ಕರುಳಿಗೆ ಆರೋಪಿಸುತ್ತಾನೆ. ವಿಶೇಷವಾಗಿ ರಕ್ತಸಂಬಂಧದ ಅತೀಂದ್ರಿಯ ಅರಿವು ಕರುಳಿನಲ್ಲಿದೆ. ಕರುಳಿನ ಕುಡಿ. ಕರುಳ ಬಳ್ಳಿ, ಕರುಳಿನವರು, ಕರುಳ ಹರಿದುಕೊಳ್ಳು ಮೊದಲಾದವು ಹೊಕ್ಕುಳ ಬಳ್ಳಿಯ ಸಾದೃಶ್ಯದಿಂದ ಸಂತಾನ, ಸಂಬಂಧ ಇತ್ಯಾದಿಗಳನ್ನು ಸೂಚಿಸುತ್ತವೆ. ಕರುಳು ಕತ್ತರಿಸಿದಂತಾಗುವುದು, ಕರುಳನ್ನು ಇರಿಯುವುದು ಮನವನ್ನು ಕಲಕುವದನ್ನು ಸೂಚಿಸುತ್ತವೆ. ಕರುಳು ಶಬ್ದಕ್ಕೆ ನೆರೆಯ ಮಲೆಯಾಳಿ, ಕೊಡವ ತುಳು ಭಾಷೆಗಳಲ್ಲಿ ಸಂವಾದಿ ಪದಗಳಿವೆ. ಅವುಗಳಲ್ಲೆಲ್ಲ ಕರುಳಿನ ಕರುಣಾರ್ಥ ಕುಡಿ ಬಿಟ್ಟಿದೆಯೋ ಇಲ್ಲವೊ ನಾನರಿಯೆ. ಆದರೆ ತುಳುವಿನಲ್ಲಂತೂ ಆ ಅರ್ಥಗಳು ಇವೆ.

ಸಂಸ್ಕೃತದಲ್ಲಿ ಕರುಳಿಗೆ "ಅಂತ್ರ" "ಆಂತ್ರ" ಪದಗಳಿವೆ. ಆದರೆ ಕರುಣೆಗೂ ಅಂತ್ರಕ್ಕೂ ತಳಕು ಆ ಭಾಷೆಯಲ್ಲಿ ಕಾಣದು. ಪರಂತು, ಇಂಗ್ಲೀಷಿಗೆ ಹೋದರೆ ಅಲ್ಲಿ ಈ ಭಾವನೆಗೆ ಪ್ರತಿಶ್ರುತಿ ಸಿಕ್ಕುತ್ತದೆ. **Bowels** ಎಂದರೆ ಸುಮಾರಾಗಿ ಕರುಳು. ಈ ಶಬ್ದಕ್ಕೆ ಒಂದು ಕಾಲದಲ್ಲಿ ಅಂತರಂಗ, ಮೃದು ಭಾವನೆಗಳು, ಕರುಣೆ ಎಂಬರ್ಥಗಳಿದ್ದವೆಂದು ಆಕ್ಸ್‌ಫರ್ಡ್ ಕೋಶ ದಾಖಲಿಸುತ್ತದೆ. ಆಧುನಿಕ ನುಡಿಕಟ್ಟಿನಲ್ಲಿ ಆ ಅರ್ಥ ಉಳಿದಿಲ್ಲ. ಈಗ ಅದು ಬರೇ ಆಂತ್ರ ಎಂಬ ಉದರಾಂಗವನ್ನು ಮಾತ್ರ ಸೂಚಿಸುತ್ತದೆ.

ನಮ್ಮ ದೇಶದಲ್ಲೇ ಇತರ ಭಾಷೆಗಳಲ್ಲಿ ಹೀಗೆ ಎದೆಯ ಭಾಗದೊಳಗಿನ ಅಂಗಗಳಿಗೆ ಭಾವನಾತ್ಮಕ ವರ್ತನೆಯನ್ನು ಆರೋಪಿಸುವುದು ಇದ್ದೇ ಇದೆ. ಹಿಂದಿಯ "ಕಲೇಜಾ" ತೆಗೆದುಕೊಳ್ಳಿ. ಬಂಗಾಲಿಯಲ್ಲಿ ಇದೇ "ಕಲಿಜಾ" ಎಂದು, ಮರಾಠಿಯಲ್ಲಿ "ಕಾಳಿಜ" ಎಂದು ಬಳಕೆಯಲ್ಲಿದೆ. 12ನೆ ಶತಮಾನದಿಂದ ಕನ್ನಡದಲ್ಲಿಯೂ ನುಸುಳಿ "ಕಲಿಜ", "ಕಾಳಿಜ" ಇತ್ಯಾದಿ ರೂಪಗಳಲ್ಲಿ ಸಾಹಿತ್ಯದಲ್ಲಿ ಗೋಚರಿಸುತ್ತದೆ. ಇದು ಒಡಲೊಳಗಿನ ಪಿತ್ತಕೋಶವನ್ನು ನಿರ್ದೇಶಿಸುವ ಪದ; ಆದರೆ ಮೂತ್ರಪಿಂಡ, ಹೃದಯ ಎಂಬರ್ಥಗಳನ್ನು ಅದು (ಬಹುಶಃ ಗಲಿಬಿಲಿಯಿಂದ) ಸೂಚಿಸುತ್ತದೆ. ಅದಕ್ಕೂ ಪ್ರೀತಿ, ದಾಕ್ಷಿಣ್ಯ, ಚಿಂತೆ, ವ್ಯಥೆ ಮೊದಲಾದ ಅರ್ಥಗಳು ಹುಟ್ಟಿಕೊಂಡಿವೆಯೆಂಬುದು ಗಮನಾರ್ಹ. "ಕಲೇಜಾ ಕಾಂಪ್‌ನಾ" (ಪಿತ್ತಕೋಶ ನಡುಗುವುದು - ಭಯ), "ಕಲೇಜಾ ಫಟನಾ" (ಹೃದಯ ಒಡೆಯುವುದು) ಇತ್ಯಾದಿ ನುಡಿಕಟ್ಟುಗಳು ಪಿತ್ತಕೋಶ, ಮೂತ್ರಪಿಂಡಗಳಿಗೆ ನಿಜಕ್ಕೂ ಇಲ್ಲದ ಕ್ರಿಯೆಗಳನ್ನು ಆರೋಪಿಸುತ್ತವೆ. ಅದನ್ನು ಹೃದಯಕ್ಕೆ ಮನಸ್ಸಿಗೆ ಸಮೀಕರಿಸಿ ಕಲೇಜಾ ಎಂದರೆ ಧೈರ್ಯ ಎಂಬರ್ಥವೂ ಹುಟ್ಟಿಕೊಂಡಿದೆ. (ನಾವು ಎದೆಗಟ್ಟಿ ಮಾಡಿಕೋ ಎನ್ನುವಂತೆ.) ಕಲ್ಮನ ಎನ್ನಲು "ಪತ್ಥರ್ ಕಾ ಕಲೇಜಾ" ಎನ್ನುತ್ತಾರೆ.

ನಮ್ಮ ನೆರೆಯ ಕೊಂಕಣಿಯಲ್ಲಿ ಕರುಳಿಗೆ "ಆಂತ" (ಸಂ. ಆಂತ್ರ) ಎಂದು ಹೆಸರು. ಆ ಭಾಷೆಯಲ್ಲಿಯೂ "ಆಂತ್" ಕನ್ನಡದಲ್ಲಿಯಂತೆ ಆಪ್ತತೆ, ದಯೆ, ಕರುಣೆಗಳ ಅಧಿಷ್ಠಾನವಾಗಿ ಪ್ರಯೋಗದಲ್ಲಿದೆ.

ಮತ್ತೆ ಕಡಲಾಚೆಯ ಸಾಮ್ಯ ನಮಗೆ ಎದುರಾಗುತ್ತದೆ. ಪೋರ್ಚುಗೀಸಿನಲ್ಲಿ ಕರುಳಿಗೆ *tripas* ಎಂದು ಹೆಸರು. ಅದಕ್ಕೂ ಧೈರ್ಯಕ್ಕೂ ಐಕ್ಯವನ್ನು ಆರೋಪಿಸುವ ನುಡಿಕಟ್ಟು ಆ ಭಾಷೆಯಲ್ಲಿದೆ.

ಅಂತೂ ದಯಾ, ದಾಕ್ಷಿಣ್ಯ, ಧೈರ್ಯ ಗುಣಗಳನ್ನು ಒಡಲಿಗೆ ಅದರೊಳಗಿನ ಅಂಗಗಳಿಗೆ ವ್ಯಾಪಕವಾಗಿಯೇ ಪುರಾತನರು ಆರೋಪಿಸಿದ್ದಾರೆ.

**ಪಾವೆಂ**

ಜನ ಸಂದಣಿಯನ್ನು ಕಡಿಮೆ ಮಾಡಲೋಸುಗ ಈಗ ಮುಂಬಯಿಯಿಂದ ಹೊಸ ಮುಂಬಯಿಗೆ ಸಂಪರ್ಕ ಕಲ್ಪಿಸಲು ಸುರಂಗ ಮಾರ್ಗ ನಿರ್ಮಾಣದ ಮಾತುಕತೆ ನಡೆಯುತ್ತಿದೆ. ಅಂತೆಯೇ ಜಪಾನಿನ ಜನಸಂದಣಿಯನ್ನೂ ಕಡಿಮೆ ಮಾಡಲು ಕೃತ್ರಿಮ ದ್ವೀಪವೊಂದನ್ನು ಸಮುದ್ರದಲ್ಲಿ ನಿರ್ಮಿಸಲು ಜಪಾನಿಗಳು ಸಿದ್ಧರಾಗಿದ್ದಾರೆ. ಯೋಜನೆಯ ರೂಪು ರೇಷೆಯ ಸ್ಥೂಲ ರೂಪ ಇಲ್ಲಿದೆ.

# ಜಪಾನಿಯರು ನಿರ್ಮಿಸಲಿರುವ

ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದರಲ್ಲಿ ಜಪಾನೀಯರಿಗೆ ತಮ್ಮವೇ ಆದ ವಿಶಿಷ್ಟ ವಿಧಾನಗಳಿವೆ. ತಮ್ಮಲ್ಲಿಲ್ಲದ ವಸ್ತುಗಳಿಗಾಗಿ ಅವರು ನಮ್ಮಂತೆ ಪರದಾಡುವುದಿಲ್ಲ. ಬದಲಿಗೆ ಅವುಗಳನ್ನು ನಿರ್ಮಿಸಿಬಿಡುತ್ತಾರೆ.

ಈಗ ಜಪಾನಿನ ಜನಸಂಖ್ಯೆ 12 ಕೋಟಿ 30 ಲಕ್ಷಕ್ಕೂ ಮೀರಿದೆ. ಜನಸಂಖ್ಯಾ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಅವರು ತಮ್ಮದೇ ಆದ ಒಂದು ಉಪಾಯ ಕಂಡುಕೊಂಡಿದ್ದಾರೆ.

ಜಪಾನಿನ ಇಂಜನಿಯರುಗಳು ಮತ್ತು ವಾಸ್ತುಶಿಲ್ಪಿಗಳ ದೊಡ್ಡ ತಂಡವೊಂದು ಒಂದು ಹೊಸ ಸಂಶೋಧನೆಯಲ್ಲಿ ತೊಡಗಿ ಟೋಕಿಯೋದಿಂದ 75 ಮೈಲಿಗಳ ದೂರದಲ್ಲಿ ಸಮುದ್ರದೊಳಗೆ 'ಸಿಂಥೆಟಿಕ್' ದ್ವೀಪವನ್ನು-ಹೇಗೆ ನಿರ್ಮಿಸಬೇಕೆಂಬುದೇ ಅವರ ಸಂಶೋಧನೆಯ ವಿಷಯ. 21ನೆಯ ಶತಮಾನದ ಆರಂಭದ ಹೊತ್ತಿಗೆ ಈ ದ್ವೀಪ ಸಿದ್ಧವಾಗುವ ಸಾಧ್ಯತೆಯಿದೆ.

ಈ ಕೃತ್ರಿಮ ದ್ವೀಪ ಯೋಜನೆಯನ್ನು 'ಓಸಿಯನ್ ಕಮ್ಯೂನಿಕೇಶನ್ ಸಿಟಿ' ಎಂಬ ಹೆಸರಿನಿಂದ ಗುರುತಿಸಲಾಗುತ್ತದೆ. ಟೋಕಿಯೋ ವಿಶ್ವವಿದ್ಯಾನಿಲಯದ ಇಲೆಕ್ಟ್ರೋ-ಕಮ್ಯೂನಿಕೇಶನ್ ವಿಭಾಗದ ಪ್ರಾಧ್ಯಾಪಕರಾದ ಕಿಯೊಹಿದ್ ತೆರಾಯಿಯವರು ಈ ಯೋಜನೆಯ ಪ್ರೇರಕ ಶಕ್ತಿ.

ಅವರ ಈ ಯೋಜನೆಗೆ ಸುಮಾರು 200 000 000 000 ಡಾಲರುಗಳ ಖರ್ಚು ತಗಲಲಿದೆ. ಈ ಕೃತ್ರಿಮ ದ್ವೀಪ ನಗರ, ಸಮುದ್ರ



ಮೂಲ: ಪ್ರಕಾಶ್ ಹಿಂದುಸ್ತಾನೀ
ಕನ್ನಡಕ್ಕೆ: ಎಸ್. ವಿಶ್ವನಾಥ್

# ನಾಲ್ಕು ಮಹಡಿಗಳ ದ್ವೀಪ

ಮಟ್ಟದಿಂದ 260 ಅಡಿ ಎತ್ತರದ ಉಕ್ಕಿನ ನಾಲ್ಕು ಮಹಡಿಗಳ ವೇದಿಕೆಯ ಮೇಲೆ ನಿರ್ಮಾಣಗೊಳ್ಳಲಿದೆ. ಒಂಭತ್ತು ಚದರ ಮೈಲಿ ವಿಸ್ತಾರದ ಈ ದ್ವೀಪದ ಮೇಲೆ ಹತ್ತು ಲಕ್ಷ ಜಪಾನೀಯರನ್ನು ನೆಲೆಗೊಳಿಸುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಹಾಗಾಗಿ ಒಬ್ಬೊಬ್ಬರಿಗೆ ಎರಡು ಲಕ್ಷ ಡಾಲರುಗಳಂತೆ ಖರ್ಚು ಬೀಳಲಿದೆ. ಈ ನಗರದ ಒಂದೊಂದು ಪಾರ್ಶ್ವವೂ ಮೂರು ಮೈಲಿ ಉದ್ದವಾಗಿರುತ್ತದೆ.

ಈ ದ್ವೀಪ ಸುಮಾರು ಹತ್ತು ಸಾವಿರ ಹೈಡ್ರಾಲಿಕ್ ಸ್ತಂಭಗಳ ಮೇಲೆ ನಿಲ್ಲಲಿದೆ. ಈ ಕಂಬಗಳು ಸಮುದ್ರ ತಳದ ಮೇಲೆ ನಿಲ್ಲಲಿದ್ದು ಸಮುದ್ರ ತಳಕ್ಕೆ ಬಂಧಿಸಲ್ಪಡಲಿವೆ. ಅದಕ್ಕಾಗಿ ಲಕ್ಷಾಂತರ ಟನ್ ಕಾಂಕ್ರೀಟ್ ಬಳಕೆಯಾಗಲಿದೆ. ಪ್ರಚಂಡ ಬಿರುಗಾಳಿ, ಭೂಕಂಪ ಅಥವಾ ಸಮುದ್ರದ ಉಬ್ಬರವಿಳಿತದ ಅಲೆಗಳಿಂದ ಯಾವ ರೀತಿಯ ದುಷ್ಪರಿಣಾಮವೂ ಉಂಟಾಗದಂತೆ ಮತ್ತು ದ್ವೀಪ ಸ್ಥಿರವಾಗಿರುವಂತೆ ಈ ದ್ವೀಪಗಳ ಸ್ತಂಭಗಳನ್ನು ತಯಾರಿಸಲಾಗುತ್ತದೆ.

ಈ ದ್ವೀಪದಲ್ಲಿ ಮನೆಗಳನ್ನೇ ಅಲ್ಲದೆ, ಒಂದು ವೈಜ್ಞಾನಿಕ ಸಂಶೋಧನಾ ಕೇಂದ್ರ, ಒಂದೊಂದು ವ್ಯವಸಾಯ ಮತ್ತು ಆರ್ಥಿಕ ಕೇಂದ್ರ, ಷಾಪಿಂಗ್ ಡಿಸ್ಟ್ರಿಕ್ಟ್, 400 ಟೆನ್ನಿಸ್ ಕೋರ್ಟುಗಳು, ಎರಡು ಗಾಲ್ಫ್ ಕೋರ್ಟುಗಳು, ಎರಡು ಬೇಸ್‌ಬಾಲ್ ಸ್ಟೇಡಿಯಂಗಳು ಮತ್ತು ಬ್ಯಾಟರಿಚಾಲಿತ ಕಾರುಗಳು ಚಲಿಸಲು ರಸ್ತೆಗಳ ನಿರ್ಮಾಣವಾಗಲಿವೆ. ಇಲ್ಲಿಯ ಜನರ ಅಗತ್ಯವನ್ನು ಪೂರೈಸಲು ಇಲ್ಲಿನ 'ಏಕ್ವೆಟಿಕ್ ಫಾರ್ಮ್'ನಲ್ಲಿ (ಜಲೋದ್ಭವ ವ್ಯವಸಾಯ ಜಮೀನಿನಲ್ಲಿ) ತರಕಾರಿ ಮತ್ತು ಹಣ್ಣುಗಳನ್ನು ಬೆಳೆಯಲಾಗುತ್ತದೆ.

ಇದಲ್ಲದೆ, ಈ ದ್ವೀಪದ ಮೇಲ್ಮಹಡಿಯಲ್ಲಿ ಒಂದು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣವೂ ನಿರ್ಮಾಣಗೊಳ್ಳಲಿದೆ. ಜೊತೆಗೆ ಈ ದ್ವೀಪವನ್ನು ಹೋವರ್‌ಕ್ರ್ಯಾಫ್ಟ್‌ನಿಂದ (ನೆಲಜಲಗಳ ಮೇಲೆ ತಗ್ಗಿನಲ್ಲಿ ಚಲಿಸುವ ಯಾನ) ತಲುಪಬಹುದಾಗಿದೆ. ಒಂದು ಸಾವಿರ ಪ್ರಯಾಣಿಕರುಗಳನ್ನು ಗಂಟೆಗೆ 115 ಮೈಲಿಗಳ ವೇಗದಲ್ಲಿ ಈ ಹೋವರ್‌ಕ್ರ್ಯಾಫ್ಟ್ ಹೊತ್ತೊಯ್ಯಲಿದೆ.

ಗಾಜಿನಂತಹ ನುಣುಪಿನ ರಸ್ತೆಗಳ ಮೇಲೆ ಬ್ಯಾಟರಿ ಶಕ್ತಿ ಚಾಲಿತ ಕಾರುಗಳು ಓಡಾಡಲಿರುವುದರಿಂದ ಈ ದ್ವೀಪದಲ್ಲಿ ಪ್ರವಾಸ ಮಾಡುವುದೂ ಸುಲಭವಾಗುತ್ತದೆ. ಈ ದ್ವೀಪದ ಯಾವುದೇ ಮೂಲೆಯಿಂದ ಯಾವುದೇ ಸ್ಥಳವನ್ನು ಹತ್ತು ನಿಮಿಷದೊಳಗೆ ಸೇರಬಹುದಾಗಿದೆ.

ಎಂಜನಿಯರಿಂಗ್ ಕೌಶಲಕ್ಕೆ ಅಪ್ರತಿಮ ಸಾಕ್ಷಿಯಾವ ಇದು ಪ್ರಪಂಚದಲ್ಲೇ ಮೊತ್ತ ಮೊದಲ ಕೃತ್ರಿಮ ದ್ವೀಪವಾಗಲಿದೆ. ●

# ಟೈಮ್ ಬಾಂಬ್

ಮೂಲ: ಜಾಕ್ ರಿಚಿ
ಕನ್ನಡಕ್ಕೆ: ದು.ನಿಂ.ಬೆಳಗಲಿ

ನನ್ನ ಕೈಯಲ್ಲಿ ಕಂದು ಬಣ್ಣದ ಕಾಗದವನ್ನು ಸುತ್ತಿದ್ದ ಒಂಬತ್ತು ಅಂಗುಲದ ಒಂದು ಪೆಟ್ಟಿಗೆ ಇತ್ತು. ಅದನ್ನು ತೆಗೆದುಕೊಂಡು ನಾನು ಕಾರ್ಪೋರೇಶನ್ ಕಚೇರಿಗೆ ಹೋದೆ. ಅಲ್ಲಿದ್ದ ಅನೇಕ ಜನರೊಂದಿಗೆ ಕೆಲವು ಜನ ಪೋಲೀಸರೂ ಇದ್ದರು. ಯಾರೂ ನನ್ನನ್ನು ತಡೆಯಲು ಪ್ರಯತ್ನಿಸಲಿಲ್ಲ. ಬಹುಶಃ ಕೈಲಿದ್ದ ಪೆಟ್ಟಿಗೆಗಿಂತ ನನ್ನ ಅಸ್ತವ್ಯಸ್ತ ಗಡ್ಡದತ್ತ ಅವರ ಗಮನ ಹೆಚ್ಚಾಗಿ ಹರಿದಿರಬೇಕು.

ಮೇಯರರ ಕಚೇರಿ ಮೂರನೆಯ ಮಹಡಿಯ ಮೇಲಿತ್ತು. ಅಲ್ಲಿ ಕೂಡ ಕೆಲವು ಜನ ಪೋಲೀಸರಿದ್ದರು. ಆದರೆ ನನ್ನತ್ತ ಯಾರ ಗಮನವೂ ಇರಲಿಲ್ಲ. ನಾನು ಸ್ವಾಗತ ಕಕ್ಷೆಯನ್ನು ಪ್ರವೇಶಿಸಿದೆ. ಅಲ್ಲಿದ್ದವ ಒಬ್ಬ ತರುಣ ಕಾರಕೂನ ಮಾತ್ರ.

''ಏನು ಬೇಕಾಗಿತ್ತು?'' ಆತ ನನ್ನತ್ತ ದೃಷ್ಟಿಬೀರಿ ಕೇಳಿದ. ಪೆಟ್ಟಿಗೆಯನ್ನು ಕಂಡು ಆತನ ಹಣೆಯ ಮೇಲೆ ಗೆರೆಗಳು ಮೂಡಿದ್ದವು.

''ಕೂಡಲೇ ನಾನು ಮೇಯರ್ ಅವರನ್ನು ಕಾಣಬೇಕಾಗಿದೆ,'' ನಾನು ಹೇಳಿದೆ.

''ತಾವು ಮೊದಲೇ ಅವರಿಂದ ಸಮಯ ಪಡೆದಿದ್ದೀರಾ?'' ಆತ ಒಣತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳುತ್ತ ಕೇಳಿದ.

''ಸಮಯ ಪಡೆದಿದ್ದರೆ ನಾನು ಮೊದಲೇ ಹೇಳುತ್ತಿದ್ದೆ. ಆದರೆ ನಾನು ಅವರನ್ನು ಅವಶ್ಯ ಕಾಣಲೇಬೇಕಾಗಿದೆ,'' ನಾನು ಕೈಗಡಿಯಾರದತ್ತ ದೃಷ್ಟಿ ಬೀರಿ ಹೇಳಿದೆ.

''ಒಂದು ನಿಮಿಷ,'' ಆತ ಹಿಂದಿನ ಬಾಗಿಲಿನಿಂದ ಬಾಗಿದಂತೆ ಸಾಗಿ ಹೋದ. ಬಾಗಿಲಿನ ಲಾಕ್ ಹಾಕಿಕೊಂಡ ಸದ್ದು ನನಗೆ ಕೇಳಿ ಬಂತು. ಮೂರು ನಾಲ್ಕು ನಿಮಿಷ ನೀರವತೆ. ಅನಂತರ ಅದಾರೋ ಜಗುಲಿಯ ಬಾಗಿಲಿನಿಂದ ಭಯಪಡುತ್ತ ಇಣುಕಿದ್ದರು. ಸಾದಾ ನೀಲಿ ಸೂಟ್ ಧರಿಸಿದ ನೀಳ ಕಾಯದ ವ್ಯಕ್ತಿಯೊಬ್ಬ ಒಳಗೆ ಬರಲು ಸಂಕೋಚಪಡುತ್ತಲಿದ್ದ. ಆತನ ಬೆನ್ನಿಗೆ ನಿಂತ ಸಮವಸ್ತ್ರಧಾರಿ ಪೋಲೀಸರು ತಲೆ ಎತ್ತಿ ಇಣುಕುತ್ತಲಿದ್ದರು.

ಆತ ಪೆಟ್ಟಿಗೆಯತ್ತ ನೋಟಬೀರಿದ. ಮತ್ತೆ ನನ್ನತ್ತ ನೋಡಿ ಲೆಕ್ಕ ಹಾಕುತ್ತ ಪೋಲೀಸರಿಗೆ ಅಲ್ಲಿಂದ ಹೊರಟುಹೋಗುವಂತೆ ಸನ್ನೆ ಮಾಡಿ ಒಳಗೆ ಬಂದ.

''ತಾವು ಮೇಯರ್‌ರನ್ನು ಕಾಣಬೇಕೆ?''

ಬಾಗಿಲು ಭದ್ರಪಡಿಸಿಕೊಂಡು ನನ್ನನ್ನು ಕೇಳಿದ.

''ಹೌದು, ತಾವೇ ಮೇಯರ್ ಏನು?''

''ಅಲ್ಲ, ನಾನು ಲೆಫ್ಟಿನೆಂಟ್ ವೈಮರ್. ಮೇಯರ್‌ರನ್ನು ಏಕೆ ಕಾಣಬೇಕಿತ್ತು?'' ಆತನ ಮುಖದಲ್ಲಿ ನಗೆ ಪ್ರಯತ್ನಪೂರ್ವಕ ವಾಗಿ ಎಂಬಂತೆ ಕಾಣಿಸಿಕೊಂಡಿತು.

''ಈ ಕಾರಣವನ್ನು ಮೇಯರ್‌ರ ಮುಂದಷ್ಟೇ ಹೇಳಬಲ್ಲೆ.''

ಕೆಲವು ವ್ಯಗ್ರ, ನೀರವ ಕ್ಷಣಗಳು ಕಳೆದವು. ಕೂಡಲೇ ಲೆಫ್ಟಿನೆಂಟ್ ಕಿವಿ ನಿಮಿರಿಸಿ ಪೆಟ್ಟಿಗೆಯತ್ತ ದೃಷ್ಟಿ ಬೀರಿದ.

''ಇದರಲ್ಲಿ ಯಾವುದೋ ವಸ್ತು ಟಿಕ್ ಟಿಕ್ ಎಂದು ಸದ್ದು ಮಾಡುತ್ತಿದೆಯಲ್ಲ!'' ಆತನ ತರ್ಕ ಸರಿಯಾಗಿತ್ತು. ನನ್ನ ಕೈಯಿಂದ ಪೆಟ್ಟಿಗೆ ಜಾರಿ ಬೀಳುವುದರಲ್ಲಿ ತಡೆದು ಹಿಡಿದಿದ್ದೆ.

ಲೆಫ್ಟಿನೆಂಟ್ ಕಣ್ಣು ಮುಚ್ಚಿ ಆ ಸದ್ದನ್ನು ಆಲಿಸಲು ಪ್ರಯತ್ನಿಸುತ್ತ ದೀರ್ಘಶ್ವಾಸ ತೆಗೆದುಕೊಂಡು ಮತ್ತೆ ಕೇಳಿದ,

''ಈ ಪೆಟ್ಟಿಗೆಯಲ್ಲಿ ಏನಿದೆ?'' ನಂತರ ಆತ ಕಣ್ಣು ತೆರೆದ.

''ಇದು ಯಾರಿಗೂ, ಏನೂ ಸಂಬಂಧ ವಿಲ್ಲ. ಹತ್ತು ನಿಮಿಷದೊಳಗಾಗಿ ನಾನು ಮೇಯರ್‌ರನ್ನು ಕಾಣಬೇಕು,'' ನಾನು ಕೈಗಡಿಯಾರ ನೋಡುತ್ತ ಹೇಳಿದೆ.



ಆತನ ಕಣ್ಣಲ್ಲಿ ಮಿಂಚು ಕಂಡಿತು.

"ಹತ್ತು ನಿಮಿಷ? ಈಗ ಮೇಯರ್ ಕಾರ್ಯಮಗ್ನರಾಗಿದ್ದಾರೆ. ತಾವು ಸ್ವಲ್ಪ ತಡೆದು ಬನ್ನಿರಿ," ನನ್ನತ್ತ ಹೆಜ್ಜೆ ಹಾಕಿ ಆತ ಹೇಳಿದ.

"ಇಲ್ಲ, ತಕ್ಷಣ ಮೇಯರ್ ನನ್ನನ್ನು ಕಾಣದಿದ್ದರೆ ನಾನು ಒತ್ತಾಯದಿಂದ ಒಳಗೆ ಹೋಗಬೇಕಾಗುವುದು," ನಾನು ಪೆಟ್ಟಿಗೆಯನ್ನು ಬೆಂಚ್ ಮೇಲಿಡುತ್ತ ಹೇಳಿದೆ.

ಲೆಫ್ಟಿನೆಂಟ್ ಮಿಂಚಿನಂತೆ ಮುಂದೆ ಸಾಗಿ ಬಂದು, ಪೆಟ್ಟಿಗೆಯನ್ನು ಎತ್ತಿಕೊಂಡು, ಜಗುಲಿಯ ಬಾಗಿಲನ್ನು ತೆರೆದು, "ಬೇಗ ನೀರಿನ ಬಕೆಟ್ ತನ್ನಿರಿ. ಈ ಪೆಟ್ಟಿಗೆಯಲ್ಲಿ ಬಾಂಬ್ ಇದೆ. ಹತ್ತು ನಿಮಿಷದಲ್ಲಿ ಸಿಡಿಯಲಿದೆ.... ಬೇಗ...." ಎಂದು ಕೂಗಿ ಹೇಳಿದ.

ನಾನೂ ಆತನ ಬೆನ್ನು ಹತ್ತಿದ್ದೆ. ಆತ ನನ್ನನ್ನು ನೋಡುತ್ತ ಮತ್ತೆ ನೀರಿನ ಬಕೆಟ್ ತರಲು ಕೂಗಿದ್ದ. ನಾಲ್ಕಾರು ಜನ ಪೋಲೀಸರು ಸ್ನಾನಗೃಹದಿಂದ ನೀರಿನ ಪಾತ್ರೆ ತಂದಿದ್ದರು. ತಕ್ಷಣ ಲೆಫ್ಟಿನೆಂಟ್ ಆ ಪೆಟ್ಟಿಗೆಯನ್ನು ನೀರಿನಲ್ಲಿ ಮುಳುಗಿಸಿಬಿಟ್ಟ. ನಾನು ಕುತೂಹಲದಿಂದ, ಅಲ್ಲಿ ಏಳುತ್ತಿರುವ ಗುಳ್ಳೆಗಳನ್ನು ನೋಡುತ್ತಲಿದ್ದೆ.

"ನೀರಿನ ಪರಿಣಾಮ ಇದರ ಮೇಲಾಗದಂತೆ ದೇವರು ಕಾಪಾಡಲಿ!" ನಾನು ನಿಟ್ಟುಸಿರುಬಿಟ್ಟು ಹೇಳಿದೆ.

ಲೆಫ್ಟಿನೆಂಟ್ ಕಣ್ಣು ಕಿಸಿದು ನನ್ನತ್ತ ನೋಡಿದ.

"ಆಂ? ಇದನ್ನು ನಾನು ಯೋಚಿಸಿಯೇ ಇರಲಿಲ್ಲ. ಎಲ್ಲರೂ ದೂರ ಸರಿಯಿರಿ, ಹತ್ತು ನಿಮಿಷದಲ್ಲಿ ಬಾಂಬ್ ಆಸ್ಫೋಟಿಸಲಿದೆ."

ಎಲ್ಲರ ಜತೆ ನನ್ನನ್ನೂ ಹಿಂದೆ ನೂಕಿದರು. ಆದಾರೋ ಬಾಂಬ್ ಪಡೆಗೆ ಫೋನ್ ಮಾಡಿದರು. ಲೆಫ್ಟಿನೆಂಟ್ ನನ್ನನ್ನು ಎಳೆದುಕೊಂಡು ಎರಡನೆಯ ಮಹಡಿಯ ಒಂದು ಖಾಲಿ ಕೋಣೆಗೆ ಹೋದ. ನನ್ನ ಕಾವಲಿಗೆ ಇಬ್ಬರು



ಪೋಲೀಸರನ್ನಿಟ್ಟು ಅಲ್ಲಿಂದ ಮರೆಯಾದ.

ಹದಿನೈದು ನಿಮಿಷಗಳಾದ ಬಳಿಕ ಆತ ಮರಳಿ ಬಂದ. ಆತನ ಮುಖ ಅರಳಿತ್ತು. ಆತ ಕವರಿನಿಂದ ಒಂದು ಬೆರಳಚ್ಚಿನ ಕಾಗದ ತೆಗೆದು ನನ್ನ ಕಣ್ಣೆದುರು ಹಿಡಿದು,

"ಇದು ನೀವು ಬರೆದದ್ದ?" ಆತ ಕೇಳಿದ. ಆದರೆ ಆ ಕಾಗದವನ್ನು ನನ್ನ ಕೈಗೆ ಕೊಡಲಿಲ್ಲ. ಅದನ್ನು ದಿಟ್ಟಿಸಿ ನಾನು ದೂರದಿಂದಲೇ ಓದಿದೆ. ಅದರಲ್ಲಿ ಹೀಗೆ ಬರೆದಿತ್ತು:

*"ಮೇಯರ್ ಸಾಹೇಬರೆ,*

*ಮಾಜಿ ಸೈನಿಕರ ಸ್ಮಾರಕದ ನಿರ್ಮಾಣದ ಬಗೆಗೆ ತಮ್ಮ ಆದೇಶವು ಏಕಪಕ್ಷೀಯವಾಗಿದೆ. ಹಾಗೂ ಅದು ಜನಹಿತಕ್ಕೆ ಪ್ರತಿಕೂಲವಾಗಿದೆ. ತಮ್ಮನ್ನು ಕಾನೂನಿನಂತೆ ತೆಗೆದುಹಾಕಲು ಕಷ್ಟವಾಗಿದ್ದರೂ, ನಾನು ತಮ್ಮನ್ನು ಬಾಂಬಿನಿಂದ ಸುಟ್ಟು ಪರಲೋಕಕ್ಕೆ ಕಳಿಸುವ ಬಯಕೆಯಲ್ಲಿದ್ದೇನೆ."*

"ಇದು ನೀವು ಬರೆದದ್ದೇ?" ಲೆಫ್ಟಿನೆಂಟ್ ಕೂಗಿ ಕೇಳಿದ.

"ಮಿಸ್ಟರ್, ನಾನು ಮೇಯರರನ್ನು ಸುಟ್ಟುಹಾಕಲು ಬಯಸಿದ್ದರೆ ಮೊದಲೇ ಎಚ್ಚರಿಕೆ ಕೊಡುವ ಮೂರ್ಖತನವನ್ನು ಮಾಡುತ್ತಿರಲಿಲ್ಲ. ಈ ಪತ್ರದಲ್ಲಿ ನನ್ನ ಬೆರಳಿನ ಗುರುತಿ

ದೆಯೇ?''

ಲೆಫ್ಟಿನೆಂಟ್ ಉತ್ತರಿಸಲಿಲ್ಲ. ಬದಲಾಗಿ ನನ್ನ ಹೆಸರನ್ನು ಕೇಳಿದ.

''ಜೇಮ್ಸ್'' ಎಂದೆ.

''ವಿಳಾಸ?''

ನಾನು ಒಂದು ಸಾಮಾನ್ಯ ಹೋಟೇಲಿನ ಹೆಸರು ಹೇಳಿದೆ.

''ಸೈನಿಕ ಸ್ಮಾರಕದ ಪರಿವರ್ತನೆಯಿಂದ ನಿಮಗೆ ಯಾವ ಹಾನಿಯಾಗಿದೆ?''

''ವಕೀಲರ ಜತೆ ವಿಚಾರಿಸದೆ, ಈ ಪ್ರಶ್ನೆಗೆ ನಾನು ಉತ್ತರಿಸಲಾರೆ,'' ನಾನು ಹೇಳಿದೆ.

ಅದೇ ಕ್ಷಣ ಬಾಂಬ್ ಪಡೆಯ ಒಬ್ಬ ಸೇವಕ ಸುರಕ್ಷಾ ಪೋಷಾಕಿನಲ್ಲಿ ಒಳಗೆ ಬಂದ.

''ನಾವು ಅದನ್ನು ಪರೀಕ್ಷಿಸಿದೆವು,'' ಆತ ಸುರಕ್ಷಾ ಕವಚವನ್ನು ಸರಿಸಿ ಹೇಳಿದ.

''ಅದೇನೆಂದು ತಿಳಿಯಿತೇ?'' ಲೆಫ್ಟಿನೆಂಟ್ ಕೇಳಿದ.

''ಅಲಾರ್ಮ ಗಡಿಯಾರ! ಅಷ್ಟೆ. ತೀರ ಸಾಧಾರಣ ದರ್ಜೆಯದು.''

''ಅದು ಅಲಾರ್ಮ ಗಡಿಯಾರವೇ ಸರಿ. ಅದು ಬಾಂಬ್ ಆಗಿತ್ತೇನು?'' ನಾನು ಕೂಗಿ ಕೇಳಿದೆ.

''ನೀವು ಇನ್ನೂ ಮೇಯರ್‌ರನ್ನು ಭೇಟಿಯಾಗಬಯಸುವಿರಾ?'' ಲೆಫ್ಟಿನೆಂಟ್ ಸಂತಾಪವನ್ನು ತಡೆದು ಕೇಳಿದ.

''ಇಲ್ಲ, ಈಗ ಸಾಧ್ಯವಿಲ್ಲ. ನೀವು ನನ್ನ ಮೂಡ್ ಕೆಡಿಸಿಬಿಟ್ಟಿರಿ. ಸರಿ, ನಾನು ಮತ್ತೆ ಬರುವೆ, ಬಹುಶಃ ಇವತ್ತು ಸಂಜೆಗೆ......'' ನಾನು ಮಾತನ್ನು ಪೂರ್ತಿ ಮಾಡದೆ, ಲೆಫ್ಟಿನೆಂಟ್ ಬೇರೆ ಪ್ರಶ್ನೆಯನ್ನು ಕೇಳಲು ಅವಕಾಶ ಕೊಡದಂತೆ ಅಲ್ಲಿಂದ ಜಾರಿಬಿಟ್ಟೆ.

ದಾರಿಯಲ್ಲಿ ಒಂದು ಪುಸ್ತಕಾಲಯ. ಅಲ್ಲಿ ತೀರ ಅಶ್ಲೀಲವಾದ ಪುಸ್ತಕ, ಪತ್ರಿಕೆಗಳು ಕಂಡುಬಂದವು.

''ಇದೇನು ಹೊಲಸನ್ನು ಜೋಡಿಸಿಟ್ಟಿದ್ದೀರಿ?'' ನಾನು ಆ ಮಾರಾಟಗಾರನನ್ನು ಕೇಳಿದೆ. ಆ ಪುಸ್ತಕ ಮಾರುವ ಬಡಕಲು ಶರೀರದ ಮುದುಕ ಪಾಪ, ಬಡಪಾಯಿ. ''ಮಿಸ್ಟರ್, ನನ್ನ ಬಡ ಬದುಕಿಗೆ ಏಕೆ ಲತ್ತೆ ಕೊಡುವಿರಿ? ಹಣಕೊಟ್ಟು, ಸುಮ್ಮನೆ ಪುಸ್ತಕ ತೆಗೆದುಕೊಂಡು ಮರೆಯಲ್ಲಿ ಹೋಗಿರಿ. ಎಲ್ಲರೂ ಹೀಗೆಯೇ ಮಾಡುತ್ತಾರೆ. ನಾನು ಯಾರಿಗೂ ಹೇಳುವುದಿಲ್ಲ,'' ಎಂದ.

''ಮಹಾನುಭಾವಾ, ಈ ಕೊಳಚೆ ಜತೆ ನಾನು ಗೋರಿಗೆ ಹೋಗಲು ಸಿದ್ಧವಿಲ್ಲ. ಇವುಗಳ ಮಾರಾಟ ನಿಲ್ಲಬೇಕು! ಇಲ್ಲಿ ಒಂದು ಬಾಂಬ್ ಇಟ್ಟರೆ ನೋಡು, ಈ ನಿನ್ನ ಸಂಡಾಸದಂಥ ಕೋಣೆ 'ಧಡ್' ಎಂದು ಹಾರಿ ಹೋಗುವದು....'' ಎಂದು ನಾನು, ಆ ಪುಸ್ತಕದಂಗಡಿಯ ಮುಂದೆ ಕೈಯಲ್ಲಿನ ಬೆತ್ತದ ಚಡಿಯನ್ನು ಬೀಸುತ್ತ ಹೇಳಿ, ಜೋರಿನಿಂದ ಸಿಗಾರ್ ಎಳೆಯುತ್ತ ಅಲ್ಲಿಂದ ಮುಂದೆ ಸಾಗಿದೆ.

ಒಂದು ಫರ್ಲಾಂಗ್ ಮುಂದೆ ಹೋಗಿ ಹಿಂದಿರುಗಿ ನೋಡಿದೆ. ಆ ಪುಸ್ತಕ ಮಾರಾಟಗಾರ ಉದ್ದಕೋಟು ಹಾಗೂ ಹ್ಯಾಟ್ ಧರಿಸಿದ್ದ ಯಾವುದೋ ವ್ಯಕ್ತಿಯ ಜತೆ ಮಾತನಾಡುತ್ತಲಿದ್ದ. ಇಬ್ಬರೂ ನನ್ನತ್ತಲೇ ಕೈ ಮಾಡಿ ಮಾತಾಡುತ್ತಲಿದ್ದರು. ನಾನು ಅತ್ತ ಗಮನ ವೀಯದೆ ಒಂದಿಷ್ಟು ಮುಂದೆ ಹೋಗಿ, ಅಂಗಡಿಯೊಂದರಿಂದ ಒಂದು ಕಮ್ಮಿ ಬೆಲೆಯ ಅಲಾರ್ಮ್ ಗಡಿಯಾರವನ್ನು ಖರೀದಿಸಿದ್ದೆ. ಅದರ ಜತೆ ಎರಡು ಬ್ಯಾಟರಿ ಸೆಲ್ ಹಾಗೂ ಐದಡಿಯ ಒಂದು ತಂತಿಯನ್ನು ತೆಗೆದುಕೊಂಡೆ. ಆ ಅಂಗಡಿಯಿಂದ ಹೊರಬಂದಾಗ ಆ ಉದ್ದ ಕೋಟಿನವನಿಗೆ ಡಿಕ್ಕಿ ಹಾಯುವುದರಲ್ಲಿದ್ದೆ. ಆತ ತಕ್ಷಣ ತನ್ನ ಮುಖವನ್ನು ತಿರುಗಿಸಿದ್ದ. ತುಸು ಅಂತರದಲ್ಲಿ ವಸ್ತುಸಂಗ್ರಹಾಲಯವಿತ್ತು. ನಾನು ಅದರ ಎದುರು ನಿಂತು ಯೋಚನಾಮಗ್ನನಾದೆ.

ಈ ನಿರುಪಯುಕ್ತ ಕಟ್ಟಡವನ್ನು ನೆಲಸಮ

ಮಾಡಬೇಕಾದರೆ ಎಷ್ಟು ಮದ್ದು ಬೇಕಾಗಬಹುದು? ಎಂದು ವಿಚಾರಿಸುತ್ತ, ಸಿಗಾರ್ ಚೆಲ್ಲಿ ಆ ಕಟ್ಟಡವನ್ನು ಪ್ರವೇಶಿಸಿ, ಅಲ್ಲಿ ಸುತ್ತಾಡುತ್ತ ಕೊನೆಯ ಮೂಲೆಯಲ್ಲಿದ್ದ ಗ್ಯಾಲರಿಯತ್ತ ಸಾಗಿದೆ. ಅಲ್ಲಿ ಅಸಂಖ್ಯ ನಿರರ್ಥಕ ಹಾಗೂ ಅರ್ಥಹೀನ ಚಿತ್ರಗಳನ್ನು ತೂಗುಹಾಕಲಾಗಿತ್ತು.

"ನಿರರ್ಥಕ! ನಿರುಪಯುಕ್ತ!!" ಎಂದು ನನ್ನ ಬೆತ್ತವನ್ನು ನೆಲಕ್ಕೆ ಜೋರಾಗಿ ಬಡಿಯುತ್ತ ಎತ್ತರದ ಧ್ವನಿಯಲ್ಲಿ ಕೂಗಿಕೊಂಡೆ.

ಕೆಲವು ಜನ ನೌಕರರು ನನ್ನತ್ತ ಆಕರ್ಷಿತರಾಗಿ ಧಾವಿಸಿ ಬಂದರು.

"ಇದೆಂಥ ಅಸಂಬದ್ಧ ಪ್ರದರ್ಶನ! ಇವುಗಳನ್ನೆಲ್ಲ ಸುಟ್ಟು ಹಾಕಬೇಕು! ಇದಕ್ಕಿಂತ ಈ ಕಟ್ಟಡವನ್ನು ಬಾಂಬಿನಿಂದ ಹಾರಿಸಬಿಡುವುದೇ ಯೋಗ್ಯ," ನಾನು ಆ ಚಿತ್ರಗಳತ್ತ ಕೈ ಮಾಡಿ ಹೇಳಿದೆ.

ನಾನು ಆ ಚಿತ್ರಗಳನ್ನು ಹದಿನೈದು ನಿಮಿಷಗಳವರೆಗೆ ನೋಡುತ್ತಿದ್ದು, ಅನಂತರ ಹೊರಗೆ ಬಂದೆ. ಆ ಉದ್ದ ಕೋಟಿನವ ವಸ್ತುಸಂಗ್ರಹಾಲಯದ ಮೆಟ್ಟಿಲುಗಳನ್ನಿಳಿಯುತ್ತಿರುವುದು ನನಗೆ ಕಾಣಿಸಿತು. ಆತ ನನ್ನ ಬೆನ್ನಟ್ಟಿದ್ದು ಖಚಿತವಾಗಿತ್ತು. ನಾನು ಅನೇಕ ಅಂಗಡಿಗಳಲ್ಲಿ ಹೋಗುತ್ತ, ಅವುಗಳ ಪಕ್ಕದ ಹಾಗೂ ಹಿಂದಿನ ಬಾಗಿಲುಗಳಿಂದ ಹೊರಬರುತ್ತ, ಪಾರಾಗುತ್ತ, ಕಣ್ಣುತಪ್ಪಿಸಿ ನನ್ನ ಹೊಟೇಲಿಗೆ ಬಂದೆ.

ನಾನು ಹೊಟೇಲ್ ಪ್ರವೇಶಿಸುವುದರಲ್ಲಿ ಆತ ಅದೇ ಉದ್ದ ಕೋಟಿನವ, ಹಾಲ್‌ನಲ್ಲಿ ಪತ್ರಿಕೆ ಓದುತ್ತ ಕುಳಿತಿದ್ದು ಕಂಡುಬಂತು. ಒಂದು ಕ್ಷಣ ತಡೆದು ನಿಂತೆ. ಒಮ್ಮೆ ಆತನತ್ತ ದೃಷ್ಟಿಬೀರಿ ನನ್ನ ಕೋಣೆ ಸೇರಿದೆ.

ಫೋನ್ ಗಂಟೆ ಬಾರಿಸಿತು. ನನ್ನ ಕಾಲೇಜಿನ ಸಹಪಾಠಿ, ಸ್ನೇಹಿತ ಜಾಫ್ರೆ ಮಾತನಾಡುತ್ತಲಿದ್ದ,

"ಜೇಮ್ಸ್?"



"ಹಾಂ, ಮಾತನಾಡುತ್ತಲಿದ್ದೇನೆ."

"ಮೇಯರರ ಕಚೇರಿಗೆ ಹೋಗಿದ್ದೆಯೇನು?"

"ಹಾಂ....."

"ಏನಾಯ್ತು?"

"ಏನಾಗಬೇಕಿತ್ತೋ ಅದೇ....."

"ಮತ್ತೆ ಸಂಜೆ ಹೋಗುವಿಯಾ?"

"ಹೋಗುವ ವಿಚಾರವಿದೆ...." ಎಂದು ನಾನು ಫೋನ್ ಕೆಳಗಿಟ್ಟೆ. ಕಪಾಟಿನಿಂದ ಒಂದು ಚಚ್ಚೌಕಾದ ರಟ್ಟಿನ ಪೆಟ್ಟಿಗೆ ತೆಗೆದುಕೊಂಡು ನನ್ನ ಕೆಲಸದಲ್ಲಿ ತೊಡಗಿದೆ.

"ಕಾರ್ಪೊರೇಶನ್ ಕಚೇರಿ ಎಲ್ಲಿಯವರೆಗೆ ತೆರೆದಿರುತ್ತದೆ ಹೇಳಬಲ್ಲಿರಾ?" ಎಂದು ಮಧ್ಯಾಹ್ನ ಎರಡು ಗಂಟೆಗೆ ನಾನು ಹೊಟೇಲ್ ಕ್ಲಾರ್ಕನಿಗೆ ಫೋನಿನಲ್ಲಿ ಕೇಳಿದೆ.

"ತಾವು ಜೇಮ್ಸ್ ಸಾಹೇಬರೇನು?"

"ಹೌದು....."

ಅತ್ತ ದೀರ್ಘವಾದ ನೀರವತೆ ಹಬ್ಬಿದಂತಾಗಿತ್ತು. ಬಹುಶಃ ಯಾರ ಜತೆಗೋ ಅಲ್ಲಿ ವಿಚಾರ ವಿಮರ್ಶೆ ನಡೆದಿರಬೇಕು. ಕೆಲ ಕ್ಷಣಗಳ ನಂತರ ಕ್ಲಾರ್ಕ್ ಕೇಳಿದ.

"ಕಾರ್ಪೊರೇಶನ್ ಕಚೇರಿ ಇಪ್ಪತ್ನಾಲ್ಕು ಗಂಟೆ ತೆರೆದಿರುತ್ತದೆ. ಆದರೆ ಕೆಲವು ಜನ ಅಧಿಕಾರಿಗಳು ಐದು ಗಂಟೆಗೆ ಹೊರಟು ಹೋಗುತ್ತಾರೆ. ತಾವು ಯಾರನ್ನು ಭೇಟಿಯಾ

ಗಬೇಕಿತ್ತು?''

''ದಯವಿಟ್ಟು ಇಪ್ಪತ್ತು ನಿಮಿಷದೊಳಗಾಗಿ ನನಗೊಂದು ಟ್ಯಾಕ್ಸಿ ತರಿಸಿಕೊಡಿರಿ,'' ಎಂದು ಹೇಳಿ, ನಾನು ಫೋನ್ ಕೆಳಗಿಟ್ಟೆ. ಕೋಟು ಧರಿಸಿ, ನಾನು ಸಿದ್ಧಗೊಳಿಸಿದ ಪೆಟ್ಟಿಗೆಯನ್ನು ಎತ್ತಿಕೊಂಡು ಕೆಳಗೆ ಬಂದು ಟ್ಯಾಕ್ಸಿಯಲ್ಲಿ ಕುಳಿತೆ.

ಟ್ಯಾಕ್ಸಿ ಓಡಿತು. ಅನಂತರ ಕೆಲವು ಗಜ ದೂರ ನಿಂತ ಇನ್ನೊಂದು ಟ್ಯಾಕ್ಸಿ ಕೂಡ ಹೊರಟಿತು. ಕಾರ್ಪೊರೇಶನ್ ಹತ್ತಿರ ಒಂದು ಸಶಸ್ತ್ರಗಾಡಿ ನಿಂತಿದ್ದು ನನಗೆ ಕಂಡಿತು. ಅದರ ಹಿಂಭಾಗದಲ್ಲಿ ತಂತಿಯ ಜಾಳಿಗೆಯನ್ನು ಜೋಡಿಸಲಾಗಿತ್ತು. ಕಾರ್ಪೊರೇಶನ್ ಕಚೇರಿಯ ಎದುರು ಜನರ ಗುಂಪು ಸೇರಿತ್ತು. ಕಟ್ಟಡದ ಒಳಗೆ ಹೋಗುವವರನ್ನು ಪೋಲೀಸರು ತಡೆಯುತ್ತಿದ್ದರು.

ನಾನು ಮೇಲೆ ಹೋಗಲು ಹೆಜ್ಜೆ ಹಾಕಿದೆ. ನನ್ನನ್ನು ತಡೆಯಬಹುದೆಂದು ಭಾವಿಸಿಕೊಂಡಿದ್ದೆ. ಆದರೆ ಹಾಗಾಗಲಿಲ್ಲ. ಮೇಲೆ ಹೋದೆ. ಇಡೀ ಕಟ್ಟಡ ಭಣಗುಡುತ್ತಲಿತ್ತು. ಕೇವಲ ನನ್ನ ಹೆಜ್ಜೆಯ ಸದ್ದು ಆ ನೀರವತೆಯನ್ನು ಭಂಗಗೊಳಿಸುತ್ತಲಿತ್ತು. ನಾನು ಮೊದಲಿನಂತೆ ಸ್ವಾಗತ ಕಕ್ಷೆಗೆ ಹೋದೆ.

''ನಾನು ಮೇಯರರನ್ನು ಕಾಣಬೇಕು, ಕೇವಲ ಹತ್ತು ನಿಮಿಷದೊಳಗಾಗಿ,'' ನಾನು ಕಾರಕೂನನಿಗೆ ಹೇಳಿದೆ.

''ಆಗಲಿ, ಅವಶ್ಯ ಬನ್ನಿರಿ....'' ಕಾರಕೂನ ಒಂದಿಷ್ಟು ಗಲಿಬಿಲಿಗೊಂಡು ಹೇಳಿದ. ನಾನು ಕುಳಿತುಕೊಂಡೆ. ಆ ಪೆಟ್ಟಿಗೆಯನ್ನು ಬಹಳ ಜಾಗರೂಕತೆಯಿಂದ ಒಂದು ಕಡೆಗೆ ಇಡಬೇಕೆಂದೆ.

''ಮಿಸ್ಟರ್, ನನಗೊಂದಿಷ್ಟು ಸಹಾಯ ಮಾಡುವಿರಾ? ನನ್ನ ಈ ಅಲ್ಮೆರಾವನ್ನು ಬೇರೆ ಕಡೆಗೆ ಸರಿಸಿಡಬೇಕಾಗಿದೆ,'' ಆ ಕಾರಕೂನ ಹೇಳಿದ.

ನಾನು ಸಂತೋಷದಿಂದ ಸಿದ್ಧನಾದ. ಪೆಟ್ಟಿಗೆಯನ್ನು ನೆಲದ ಮೇಲಿಟ್ಟ ನಾನು ಆ ಕಪಾಟಿಗೆ ಕೈ ಹಚ್ಚುವುದರಲ್ಲಿಯೆ ಹೊರಗಿನ ಬಾಗಿಲು 'ಧಡ್' ಎಂದು ತೆರೆಯಿತು. ಲೆಫ್ಟಿನೆಂಟ್ ವ್ರೈಮರ್ ಕೆಲವು ಜನ ಪೋಲೀಸರ ಜತೆ ಒಳಗೆ ಬಂದ. ಆತನ ಜತೆ ಇನ್ನೂ ಇಬ್ಬರು ವ್ಯಕ್ತಿಗಳಿದ್ದರು. ಅವರು ದಪ್ಪ ಕೌದಿಯಂಥ ಪೋಷಾಕನ್ನು ಧರಿಸಿದ್ದರು.

''ಎಲ್ಲರೂ ಕೋಣೆಯಿಂದ ಹೊರಗೆ ಹೋಗಿರಿ....'' ಅವರಲ್ಲಿ ಒಬ್ಬ ಕೂಗಿ ಹೇಳಿದ.

''ಎಕ್ಸ್‌ರೇ ಮಶಿನ್ ಇಲ್ಲಿಯೇ ತಂದು ಈ ಪೆಟ್ಟಿಗೆಯ ಫೋಟೋ ತೆಗೆಯಬೇಕು,'' ಮತ್ತೆ ಆತ ಲೆಫ್ಟಿನೆಂಟನಿಗೆ ಹೇಳಿದ.

ಮೊದಲಿನಂತೆಯೇ ನನ್ನನ್ನು ಒಂದು ಖಾಲಿ ಕೋಣೆಗೆ ಕರೆದೊಯ್ಯಲಾಯಿತು.

''ನಿನ್ನ ತಲೆಯಲ್ಲಿ ಒಂದು ಹುಚ್ಚು ಸೇರಿದಂತೆ ಕಾಣುತ್ತದೆ!'' ಎಂದು ಲೆಫ್ಟಿನೆಂಟ್ ಗರ್ಜಿಸಿದ.

''ಯಾವ ಹುಚ್ಚು?''

''ಹಾಂ, ಒಂದು ಹುಚ್ಚು! ಮಾನಸಿಕ ರೋಗ! ನೀನು ಆ ಪುಸ್ತಕದ ಅಂಗಡಿಯನ್ನು ಬಾಂಬಿನಿಂದ ಹಾರಿಸುವ ಹೆದರಿಕೆ ಹಾಕಲಿಲ್ಲವೆ?''

''ಮಿಸ್ಟರ್, ನಾನಂತೂ ಇಡೀ ಜೀವನದಲ್ಲಿ......'' ನನ್ನ ಮಾತನ್ನು ಅರ್ಧಕ್ಕೆ ತಡೆದು ಆತ ಕೈಯನ್ನು ಮೇಲೆತ್ತಿ ಹೇಳಿದ,

''ಇಂಥ ಮಾತಿನಿಂದ ಯಾವ ಲಾಭವೂ ಇಲ್ಲ. ನಾವು ನಿನ್ನ ಬೆನ್ನುಹತ್ತಿದ್ದೇವೆ. ಅಲ್ಲದೆ ನೀನು ವಸ್ತುಸಂಗ್ರಹಾಲಯವನ್ನು ನೆಲಸಮ ಮಾಡುವ ಹೆದರಿಕೆಯನ್ನೂ ಹಾಕಿರುವಿ....''

''ಕೇವಲ ಆಧುನಿಕ ಚಿತ್ರಗಳಿವೆ ಅಲ್ಲಿ. ನಿಮಗೂ ಗೊತ್ತಲ್ಲವೆ? ಈ ನವ್ಯ ಚಿತ್ರಕಲೆ ಎಂಬುದೆಲ್ಲ ಅರ್ಥಹೀನ....!'' ನಾನು ಸ್ಪಷ್ಟಪಡಿಸಿದೆ.

''ನೀನು ಒಂದು ಗಡಿಯಾರ, ಕೆಲವು ಬ್ಯಾಟರಿ ಸೆಲ್ ಹಾಗೂ ತಂತಿಯನ್ನು ಕೂಡ

ಖರೀದಿಸಿರುವುದೂ ನಮಗೆ ಗೊತ್ತಾಗಿದೆ.''

ಕೌದಿಯಂಥ ಬಟ್ಟೆ ಧರಿಸಿದವ ಒಳಗೆ ಪ್ರವೇಶಿಸಿದ.

''ಅದೊಂದು ಬಾಂಬ್ ಸಾರ್. ಚಿತ್ರದಲ್ಲಿ ಗಡಿಯಾರ, ಸೆಲ್, ತಂತಿ ಹಾಗೂ ಬತ್ತಿಗಳು ಸ್ಪಷ್ಟವಾಗಿ ಕಂಡುಬರುತ್ತಿವೆ,'' ಆತ ಹೇಳಿದ.

ನಾನು ಈಗ ಗೃಹಬಂಧನಕ್ಕೊಳಗಾಗಿ ನಾಲ್ಕು ಗಂಟೆ ಕಳೆದಿರಬಹುದು. ಲೆಫ್ಟಿನೆಂಟ್ ವೈಮರ್ ಮತ್ತೆ ಬಂದ. ಆತನ ಮುಖದಲ್ಲಿ ಶವದ ಕಳೆ ಸುರಿಯುತ್ತಿತ್ತು. ಆತನ ಸಂಗಡ ಉತ್ತಮ ಬಟ್ಟೆ ಧರಿಸಿದವನೊಬ್ಬನಿದ್ದ. ತನಗೆ ಅಂಥ ಅಧಿಕಾರವಿದ್ದರೆ ಲೆಫ್ಟಿನೆಂಟ್ ನನ್ನ ಕುತ್ತಿಗೆಯನ್ನೂ ಹಿಸುಕಬಹುದಾಗಿತ್ತು.

''ಪೆಟ್ಟಿಗೆಯಲ್ಲಿ ಮದ್ದು ಇರಲಿಲ್ಲ, ಪುಡಿ ಸಕ್ಕರೆ ಪುಡಿ ಇತ್ತು. ಇದು ನಿಜವೇ?'' ಆತ ಒಂದೊಂದು ಶಬ್ದವನ್ನು ಬಾಯಲ್ಲಿ ಕಚ್ಚುತ್ತ ಸಂತಾಪದಿಂದ ಕೇಳಿದ.

ನಾನು ಮುಗುಳುನಗೆ ಬೀರಿದೆ.

''ಡಾಕ್ಟರ್ ಬಾರ್ಟನ್! ನಾನು ಈತನನ್ನು ನಿಮ್ಮ ವಶಕ್ಕೆ ಒಪ್ಪಿಸುವೆ,'' ಎಂದು ವೈಮರ್, ಉತ್ತಮ ಬಟ್ಟೆ ಧರಿಸಿದ ತನ್ನ ಸಂಗಾತಿಯತ್ತ ತಿರುಗಿ ಹೇಳಿದ.

ಡಾ. ಬಾರ್ಟನ್ ನನಗೆ ಬೇಕಾದ ಒಂದು ಸಿಗಾರ್ ಮುಂದೆ ಮಾಡಿದ.

''ಸೈನಿಕ ಸ್ಮಾರಕದ ಸಂಬಂಧದಲ್ಲಿ ನಿಮ ಗೇನಾದರೂ ಹಾನಿಯಾಗಿದೆಯೆ?'' ಡಾಕ್ಟರ್ ಧೈರ್ಯದಿಂದ ನಗುತ್ತ ಕೇಳಿದ.

ನಾನು ಬಾಯಿ ಬಿಚ್ಚಲಿಲ್ಲ.

''ಮೇಯರರೆ ಇದಕ್ಕೆ ಹೊಣೆಗಾರರೆಂದು ನೀವು ತಿಳಿದಿರುವಿರಾ?'' ಡಾಕ್ಟರ್ ಮತ್ತೆ ಕೇಳಿದ.

''ನನಗೆ ಬಹಳ ಚಳಿಯಾಗುತ್ತಿದೆ,'' ನಾನು ಸೀನುತ್ತ ಹೇಳಿದೆ.

ಡಾಕ್ಟರ್ ನಕ್ಕು, ಸ್ನೇಹದಿಂದ ನನ್ನ ಮೊಳ ಕಾಲನ್ನು ತಟ್ಟಿದ.

''ನೀವು ರಕ್ಷಣಾ ವ್ಯವಸ್ಥೆಯ ಅಂದಾಜು



ಮಾಡುತ್ತಿರುವಿರೆಂದು ನನಗನಿಸುತ್ತಿದೆ. ಮೊದಲನೆಯ ಸಲ ಕೇವಲ ಗಡಿಯಾರ, ಎರ ಡನೆಯ ಸಲ ಗಡಿಯಾರ, ಸೆಲ್ ಹಾಗೂ ತಂತಿ. ಪೋಲೀಸರು ಬೇಸತ್ತು ನಿಮ್ಮನ್ನು ಶೋಧಿಸುವುದನ್ನು ಬಿಡಬೇಕೆಂದೇ ನಿಮ್ಮ ತರ್ಕವಾಗಿರಬೇಕು. ಮೇಲಿಂದ ಮೇಲೆ ಹೀಗೆ ಮಾಡಿ, ಮತ್ತೆ ಒಂದು ದಿನ.....'' ಆತ ಯೋಗ್ಯ ಪದಗಳನ್ನು ಅರಸುತ್ತಲಿದ್ದ.

''ಯಾಹ್....!'' ಎಂದೆ ನಾನು.

''ಯಾಹ್....!'' ಆತ ಉತ್ತರಿಸಿದ. ಇದು ಆತನಿಗೂ ಸೇರಿರಬೇಕು.

''ಆದರೆ ಬಾಂಬಿನ ಮಶಿನರಿ ಬೇರೆ ರೀತಿ ಇರಬೇಕು. ನೀವು ಮೇಯರ್ ಹತ್ತಿರವಿ ದ್ದಾಗ, ಕೇವಲ ಅಲಾರ್ಮ್ ಇಡುವುದರಿಂದ ಬಾಂಬ್ ಸರಿಯಾದ ವೇಳೆಗೆ ಆಸ್ಫೋಟಿಸುವ ದೆಂದು ನಂಬಿಕೆ ಇರುವುದಿಲ್ಲ....'' ಡಾಕ್ಟರ್ ಹೇಳುತ್ತಲಿದ್ದ.

''ತಾವು ಬಹಳ ದೂರದೃಷ್ಟಿ ಉಳ್ಳವರಾಗಿ ದ್ದೀರಿ...'' ನನ್ನ ಮಾತಿಗೆ ಆತ ಲಜ್ಜಿತನಾದ.

''ತರ್ಕಶಾಸ್ತ್ರವು ನನ್ನ ಪ್ರೀತಿಯ ವಿಷಯ ವಾಗಿತ್ತು. ಸರಿ, ಈ ಕೆಲಸಕ್ಕಾಗಿ ಪೆಟ್ಟಿಗೆಯ ಹೊರಬದಿಗೆ ಗಂಟೆಯ ಬಟನ್ನಿನಂಥ ಗುಂಡಿ ಇರಬೇಕು. ಈ ಗುಂಡಿಯನ್ನು ಅದುಮಿದ

ಕೂಡಲೇ ಬಾಂಬ್ ಆಸ್ಫೋಟಿಸುವುದು.''

''ಆದರೆ ಹಾಗಲ್ಲ, ಗುಂಡಿಯನ್ನು ಹೊರ ಬದಿಗೆ ಹಚ್ಚಿದ್ದಾದರೆ, ಯಾವುದೇ ಸಮಯದಲ್ಲಿ ಮರೆತು ಅದನ್ನು ಒತ್ತಬಹುದು. ಗುಂಡಿಯನ್ನು ಒತ್ತಲು ನಿಮಗೆ ಅವಕಾಶ ಕೊಡದೇ ಪೋಲೀಸರು ತಕ್ಷಣ ನಿಮ್ಮನ್ನು ಗುಂಡಿಟ್ಟು ಹೊಡೆಯಬಹುದು....'' ಆತ ಹೇಳಿದ.

''ನಿಜವಾಗಿಯೂ ಇದು ಯೋಚಿಸಬೇಕಾದ ಸಂಗತಿ,'' ನಾನು ಚಿಂತೆಯಿಂದ ಉಸುರಿದೆ. ಆತ ನಕ್ಕ. ಆತನಿಗೆ ತನ್ನ ಜ್ಞಾನದ ಬಗೆಗೆ ಅಭಿಮಾನವಿತ್ತು.

''ನೀವು ಈ ಪ್ರಕಾರದ ಗುಂಡಿಯನ್ನು ಇನ್ನೂ ಖರೀದಿಸಿಲ್ಲವೆ?'' ಆತ ಕೇಳಿದ.

''ಇಲ್ಲ...''

''ಖರೀದಿಸುವುದಕ್ಕಿಂತ ಮೊದಲು ನನ್ನಿಂದ ಸಲಹೆ ಪಡೆಯಿರಿ,'' ಆತ ಸೂಚನೆಯನ್ನಿತ್ತ. ನಂತರ ನನಗೆ ತನ್ನ ಗುರುತಿನ ಚೀಟಿಯನ್ನು ಕೊಟ್ಟು, ಗುರುವಾರ ಹತ್ತು ಗಂಟೆಗೆ ತನ್ನನ್ನು ಕಾಣಲು ತಿಳಿಸಿದ.

''ಆದರೆ ಇಲ್ಲಿ ನಾನು ನಜರಬಂದಿಯಲ್ಲಿ ಇದ್ದೇನಲ್ಲ!'' ನಾನು ಕೇಳಿದೆ.

''ಇಲ್ಲ, ಈಗ ನೀವು ಸ್ವತಂತ್ರರು. ಎಲ್ಲಿಗೆ ಬೇಕಲ್ಲಿಗೆ ಹೋಗಬಹುದು.''

''ಏಕೆ?''

''ಏಕೆಂದರೆ, ನಿಮ್ಮ ವಿರೋಧವಾಗಿ ಯಾವ ಆರೋಪವೂ ಇಲ್ಲ. ನಿಜವಾಗಿ ಇದು ಪೋಲೀಸರ ಅತಿರೇಕವಾಗಿತ್ತು. ನಿಮ್ಮ ಪೆಟ್ಟಿಗೆಯಲ್ಲಿ ಬಾಂಬ್ ಕೂಡ ಇರಲಿಲ್ಲ. ಈಗ ನೀವು ಹೋಗಬಹುದು.''

ರಸ್ತೆಗೆ ಬಂದು ಸ್ವಲ್ಪ ಸಮಯ ನಾನು ಅತ್ತಿತ್ತ ಅಡ್ಡಾಡತೊಡಗಿದೆ. ಉದ್ದ ಕೋಟಿನವ ಮತ್ತೆ ನನ್ನನ್ನು ಬೆನ್ನಟ್ಟಿದ ಬಗೆಗೆ ಸಂದೇಹ ಬಂದಿತ್ತು. ಸಂಜೆಯಾಗಿತ್ತು. ನಾನು ಆತನಿಂದ ಮರೆಯಾಗಿ ಹೋಗಿ ಒಂದು ಅಂಗಡಿಯಿಂದ ಗುಂಡಿಯನ್ನು ಖರೀದಿಸಿದೆ. ನನ್ನ ಹೊಟೇಲಿಗೆ ಹೋಗುವ ಬದಲು ಜಾಫ್ರೆಯ ಹೊಟೇಲಿನತ್ತ ಕಾಲು ಹಾಕಿದೆ. ''ವಿಚಾರವೇನು? ನಾಳೆ ಮತ್ತೆ ಹೋಗುವಿಯಾ?'' ಜಾಫ್ರೆ ಕೇಳಿದ.

''ಹೌದು, ನಾನು ಗುಂಡಿಯನ್ನು ಕೂಡ ಕೊಂಡುಕೊಂಡೆ...''

''ಈ ಸಲ ನೀನು ಯಶಸ್ವಿಯಾಗುವಿ ಎಂದು ನನಗೆ ಭರವಸೆಯಿದೆ.''

''ಯಶಸ್ವಿಯಾಗಲೇಬೇಕಾಗಿದೆ,'' ಎಂದು ಹೇಳಿ ನನ್ನ ಹೊಟೇಲಿಗೆ ಬಂದೆ.

ರಾತ್ರಿ ಸರಿಯಾಗಿ ನಿದ್ರೆ ಹತ್ತಲಿಲ್ಲ. ಕೆಲವು ಆಸ್ಫೋಟಗಳಾದಂತೆ ಕನಸುಗಳು. ಇವುಗಳಲ್ಲಿ ಎಲ್ಲಕ್ಕಿಂತ ಭಯಂಕರವಾದುದೆಂದರೆ, ವಸ್ತುಸಂಗ್ರಹಾಲಯದಲ್ಲಿ ಜರುಗಲಿರುವ ಆಸ್ಫೋಟನ.

ಬೆಳಗಾದ ಕೂಡಲೇ ನಾನು ಜಾಫ್ರೆ ಹತ್ತಿರ ಹೋದೆ. ನಾವಿಬ್ಬರೂ ಸೇರಿ ಮೂರನೆಯ ಪೆಟ್ಟಿಗೆಯನ್ನು ಸಿದ್ಧಪಡಿಸಿದೆವು.

''ಡಾಕ್ಟರ್! ನಾನು ಗುಂಡಿಯನ್ನು ಖರೀದಿಸಿಬಿಟ್ಟೆ....'' ಹತ್ತು ಗಂಟೆಗೆ ನಾನು ಡಾ. ಬಾರ್ಟನ್‌ರಿಗೆ ಫೋನ್ ಮಾಡಿದೆ.

''ಇಷ್ಟು ಬೇಗ? ಮೊದಲೇ ನನ್ನನ್ನು ಕಾಣಬಹುದಿತ್ತಲ್ಲ!'' ಆತ ಗಾಬರಿಗೊಂಡು ಕೇಳಿದ.

''ನಾನು ಕೃತಜ್ಞತೆ ಸಲ್ಲಿಸಲು ನಿಮಗೆ ಫೋನ್ ಮಾಡಿದ್ದು. ಬಹುಶಃ ನಾವು ಈ ಜಗತ್ತಿನಲ್ಲಿ ಮತ್ತೆ ಭೆಟ್ಟಿಯಾಗಲಾರೆವೇನೋ.''

''ತಡೆಯಿರಿ, ತಡೆಯಿರಿ.... ನಿಮ್ಮ ವಿಚಾರವೇನು?'' ಆತ ಗಾಬರಿಗೊಂಡು ಕೇಳಿದ.

''ನಾನು ಮೇಯರ್‌ರನ್ನು ಕಾಣಲು ಹೋಗುತ್ತಲಿದ್ದೇನೆ. ಈ ಸಲ ನಾನು ಅಯಶಸ್ವಿ ಆಗಲಾರೆ....''

''ಈಗ ನೀವೆಲ್ಲಿರುವಿರಿ? ನಿಮ್ಮ ಹೊಟೇಲಿನಲ್ಲಿಯೇ?''

''ಇಲ್ಲ,'' ಎಂದು ಫೋನ್ ಕೆಳಗಿಟ್ಟು

ಬಿಟ್ಟೆ.

ನಾನು ನಿಶ್ಚಿಂತನಾಗಿ ಪತ್ರಿಕೆಯನ್ನು ಓದಿದೆ. ಸಿಗಾರ್ ಸೇದಿದೆ. ಮತ್ತೆ ಟ್ಯಾಕ್ಸಿಯಿಂದ ಕಾರ್ಪೊರೇಶನ್ ಕಚೇರಿ ಮುಟ್ಟಿದೆ. ಟ್ಯಾಕ್ಸಿಯನ್ನು ಒಂದಿಷ್ಟು ದೂರ ನಿಲ್ಲಿಸಿ, ನಾನು ಕೈಯಲ್ಲಿ ಎಲ್ಲರಿಗೂ ಕಾಣುವಂತೆ ಪೆಟ್ಟಿಗೆ ಹಿಡಿದು ಕಚೇರಿಯತ್ತ ಸಾಗಿದೆ. ನನ್ನ ಒಂದು ಕೈಯಿಂದ ಗುಂಡಿಯನ್ನು ಒತ್ತಿ ಹಿಡಿದಿದ್ದೆ.

ನಾನು ಅತ್ತಿತ್ತ ದೃಷ್ಟಿ ಹರಿಸಿದೆ. ಇಡೀ ಕ್ಷೇತ್ರ ಗಾಡಿಗಳಿಂದ ಹಾಗೂ ಜನರಿಂದ ಮುಕ್ತವಾಗಿತ್ತು. ಕೆಲವರು ಸಮವಸ್ತ್ರಧಾರಿ ಪೋಲೀಸರು ಅಕ್ಕಪಕ್ಕದ ರಸ್ತೆಗಳ ನಾಕಾಬಂದಿ ಮಾಡಿದ್ದರು. ಎದುರಿನ ರಸ್ತೆ ಮಾತ್ರ ಕಾರ್ಪೊರೇಶನ್ ಕಚೇರಿವರೆಗೆ ಮುಕ್ತವಾಗಿತ್ತು. ನಾನು ಅಲ್ಲಿಂದಲೇ ಸಾಗಿದ್ದೆ. ಲೆಫ್ಟಿನೆಂಟ್ ವೈಮರ್ ಹಾಗೂ ಡಾಕ್ಟರ್ ಬಾರ್ಟನ್ ಒಂದೆಡೆ ನಿಂತಿದ್ದು ಕಂಡಿತು. ಡಾಕ್ಟರ್ ಒಂದು ವಿದ್ಯುತ್ ಕಂಬದ ಹಿಂದೆ ಶರಣು ಪಡೆದಿದ್ದ.

ಅವರನ್ನು ಕಂಡ ಕೂಡಲೇ ನಾನು ನಡಿಗೆಯ ವೇಗವನ್ನು ತೀವ್ರಗೊಳಿಸಿದೆ. ಲೆಫ್ಟಿನೆಂಟ್ ಕೂಗಿದ. ನಾನು ಕೂಡಲೇ ಓಡತೊಡಗಿದೆ. ಹಿಂದಿರುಗಿ ನೋಡಿದರೆ ಡಾ. ಬಾರ್ಟನ್ ಹಾಗೂ ಪೋಲೀಸರು ನನ್ನನ್ನು ಬೆನ್ನಟ್ಟಿ ಬರುತ್ತಲಿದ್ದರು. ರಸ್ತೆಯಲ್ಲಿಯ ಅಸಂಖ್ಯ ಜನ ಕೂಡ ಈ ಮೋಜಿನಲ್ಲಿ ಪಾಲುಗೊಂಡಿದ್ದರು.

ನಾನು ಇನ್ನೂ ಜೋರಾಗಿ ಓಡಿ ವಸ್ತು ಸಂಗ್ರಹಾಲಯದ ಹತ್ತಿರ ಬಂದೆ. ಒಂದು ಗುಂಪು ನನ್ನ ಹಿಂದೆ ಇತ್ತು. ನಾನು ವಸ್ತು ಸಂಗ್ರಹಾಲಯದ ಮೆಟ್ಟಿಲೇರಿ ಕಟ್ಟಡವನ್ನು ಸೇರಿದೆ. ನನ್ನ ಉಸಿರಾಟ ಜೋರಾಗಿತ್ತು. ಹಳೆಯ ಕಲಾವಿದರ ಚಿತ್ರಗಳು ನನ್ನನ್ನು ದಿಟ್ಟಿಸಿ ನೋಡುತ್ತಲಿದ್ದವು. ಜನರ ಕೂಗಾಟ ನನ್ನ ಬೆನ್ನಿಗೆ ಅಂಟಿಕೊಂಡಿತ್ತು. ಬೆನ್ನಟ್ಟಿದ



ವರು ನನ್ನ ಹಿಂದೆ ಇದ್ದರು. ನಾನು ಒಂದು ಜಗುಲಿಯಿಂದ ಸಾಗಿ ಬೇರೆ ದಿಕ್ಕಿಗೆ ಓಡಿದೆ. ಮುಂದೆ ದಾರಿ ಇರಲಿಲ್ಲ. ಹಿಂದಕ್ಕೆ ಮರಳಿದೆ. ಅಲ್ಲಿ ಲೆ. ವೈಮರ್ ಹಾಗೂ ಡಾ. ಬಾರ್ಟನ್ ರಸ್ತೆಗೆ ಅಡ್ಡವಾಗಿ ನಿಂತಿದ್ದರು. ಅವರ ಹಿಂದೆ ಪೋಲೀಸರಿದ್ದರು.

''ನಿಲ್ಲಿರಿ, ಎಲ್ಲರೂ ತಡೆಯಿರಿ, ನೀವು ಏನಾದರೂ ಗೊಂದಲ ಮಾಡಿದರೆ ಇಲ್ಲವೆ ಒಂದು ಹೆಜ್ಜೆ ಮುಂದಿಟ್ಟರೆ, ನಾನು ಗುಂಡಿಯನ್ನು ಒತ್ತಿಬಿಡುತ್ತೇನೆ,'' ನಾನು ಬರಿಗೈಯನ್ನು ಎತ್ತರಿಸಿ ಕೂಗಿಕೊಂಡೆ.

ಲೆಫ್ಟಿನೆಂಟ್ ವೈಮರ್ ಹಾಗೂ ಆತನ ಪಡೆ ನಿಂತಲ್ಲಿಯೇ ಬೇರೂರಿದಂತೆ ತಡೆದಿತ್ತು. ನಾನು ಉಸಿರಾಟವನ್ನು ಸರಿಪಡಿಸಿಕೊಳ್ಳುತ್ತಲಿದ್ದೆ.

''ಲೆಫ್ಟಿನೆಂಟ್ ವೈಮರ್! ನಾನು ಮೇಯರರನ್ನು ಕಾಣುವ ವಿಚಾರ ಬಿಟ್ಟುಬಿಟ್ಟೆ. ಅವರ ಹತ್ತಿರ ಹೋಗುವುದು ಅಸಾಧ್ಯವೆಂದು ನನಗನ್ನಿಸಿತು.''

ಲೆಫ್ಟಿನೆಂಟ್‌ನ ಕಣ್ಣರಳಿದವು.

''ನೀವು ಬುದ್ಧಿವಂತಿಕೆಯನ್ನು ತೋರಿಸಿದಿರಿ,'' ಎಂದಾತ ಮುಂದೆ ಬಂದ.

''ನಿಲ್ಲಿ, ಒಂದು ಹೆಜ್ಜೆ ಮುಂದೆ ಬಂದರೂ ಕೇಡು,'' ನಾನು ಕೂಗಿ ಹೇಳಿದೆ. ಲೆಫ್ಟಿನೆಂಟ್ ಕಂಬದಂತಾದ.

"ಸರಿಯಾಗಿ ಹತ್ತು ನಿಮಿಷಗಳಾದ ಬಳಿಕ ನಾನು ಈ ಗುಂಡಿಯನ್ನು ಒತ್ತಿಬಿಡುತ್ತೇನೆ. ತಮಗಿದು ಸೂಚನೆ....." ನಾನು ಮತ್ತೆ ಕೂಗಿ ಹೇಳಿದೆ.

"ಮಾತುಕತೆಗೆ ಯಾವ ಅವಕಾಶವೂ ಇಲ್ಲವೆ?" ಡಾಕ್ಟರ್ ಬಾರ್ಟನ್ ಉಗುಳು ನುಂಗುತ್ತ ಕೇಳಿದ.

"ಈ ಪೆಟ್ಟಿಗೆ ಅದೆಷ್ಟು ಹಾನಿ ಮಾಡಬಲ್ಲದು?" ಲೆಫ್ಟಿನೆಂಟ್ ತನ್ನ ಸಹಾಯಕನನ್ನು ಕೇಳಿದ.

"ಹಾಗೆ ಹೇಳುವುದು ಕಠಿಣ. ಇತ್ತೀಚೆಗೆ ಬಾಂಬ್ ಬಹಳಷ್ಟು ಶಕ್ತಿಯುತವಾಗಿರುತ್ತವೆ. ಈ ಪೆಟ್ಟಿಗೆ ಇಡೀ ಕಟ್ಟಡವನ್ನೇ ಹಾರಿಸಬಲ್ಲದು" ಎಂದ ಸಹಾಯಕ.

"ಒಂಬತ್ತು ನಿಮಿಷ ಬಾಕಿಯಿದೆ," ನಾನು ಗಡಿಯಾರದತ್ತ ದೃಷ್ಟಿ ಹಾಕಿದೆ.

"ಕೂಡಲೇ ಈ ಕಟ್ಟಡವನ್ನು ಖಾಲಿ ಮಾಡಿರಿ," ತಕ್ಷಣ ಲೆಫ್ಟಿನೆಂಟ್ ತನ್ನ ನಿರ್ಧಾರ ಹೇಳಿದ.

"ಬೇಕಿದ್ದರೆ ನೀವು ಈತನನ್ನು ಇಲ್ಲಿಯೇ ತಡೆದು ಮಾತಿಗೆ ತೊಡಗಿಸಿರಿ. ಯಾರಾದರೂ ಪಾದರಿಯನ್ನು ಕರೆಯಿಸಿದರೆ ಒಳ್ಳೆಯದು," ಎಂದು ಡಾ. ಬಾರ್ಟನ್ ಒಂದಿಷ್ಟು ಬೇಸರದಿಂದ ನುಡಿದ.

"ಎಂಟು ನಿಮಿಷ!" ನಾನು ಮತ್ತೆ ಕೂಗಿದೆ.

ಡಾ. ಬಾರ್ಟನ್ ಕೂಡಲೇ ಕರಗುತ್ತಿರುವ ಗುಂಪಿನಲ್ಲಿ ಸೇರಿಕೊಂಡ. ನಾನು ಬಾಗಿಲಿನಿಂದ ನೋಡಿದೆ. ಮುಖ್ಯ ಹಾಲಿನಲ್ಲಿ ಜನ ಸೇರಿದ್ದರು. ನಾನು ಅವನತ್ತ ಒಂದು ಹೆಜ್ಜೆಯನ್ನು ಮುಂದಿರಿಸಿದೆ. ಆತ ಓಡಿ ಹೋದ. ನನಗೆ ತುಂಬಾ ಧೈರ್ಯ ಬಂದಿತ್ತು.

ನಾನು ಗುಂಪಿನತ್ತ ಒಂದು ಹೆಜ್ಜೆ ಹಾಕಿದರೆ, ಅದು ಹತ್ತು ಹೆಜ್ಜೆ ಹಿಂದೆ ಸರಿಯುತ್ತಿತ್ತು. ಜೋರಾಗಿ ಕೇಕೆ ಹಾಕಬೇಕೆಂದು- ಕೊಂಡೆ. ಇದೇ ರೀತಿ ನಾನು ಗುಂಪನ್ನು ಹಿಮ್ಮೆಟ್ಟಿಸುತ್ತ ಹೆಬ್ಬಾಗಿಲಿನಿಂದ ಹೊರಗೆ ಸಾಗಿಸಿದೆ. ನಂತರ ಇಡೀ ಕಟ್ಟಡದಲ್ಲೆಲ್ಲ ಪೆಟ್ಟಿಗೆ ಹಿಡಿದುಕೊಂಡು ಸುತ್ತತೊಡಗಿದೆ, ಇನ್ನೂ ಯಾರಾದರೂ ಬಡಪಾಯಿಗಳು ಕಟ್ಟಡದ ಒಳಗಿದ್ದರೆ ಅವರೂ ಹೊರಗೆ ಸಾಗಲಿ ಎಂಬ ಉದ್ದೇಶದಿಂದ.

ವಸ್ತುಸಂಗ್ರಹಾಲಯದ ಕಚೇರಿಯಲ್ಲಿ ಇಬ್ಬರು ವ್ಯಕ್ತಿಗಳಿದ್ದರು. ಅವರಿಬ್ಬರೂ ಭಯದಿಂದ ಮೇಜಿನ ಕೆಳಗೆ ನುಸುಳಿಕೊಂಡಿದ್ದರು. ನನ್ನ ಮುಖ ಕಂಡ ಕೂಡಲೇ ಅವರು ಬಾಲ ಮಡಿಚಿಕೊಂಡು ಅಲ್ಲಿಂದ ಧಾವಿಸಿ ಜನಸಂದಣಿಯಲ್ಲಿ ಸೇರಿಕೊಂಡರು.

ವಸ್ತುಸಂಗ್ರಹಾಲಯದ ಕಿಟಕಿಯಿಂದ ನೋಡಿದಾಗ, ಲೆಫ್ಟಿನೆಂಟ್ ವೈಮರ್, ಡಾಕ್ಟರ್ ಬಾರ್ಟನ್ ಮತ್ತು ಕೆಲವು ಜನರು ಆ ಕಟ್ಟಡದಾಚೆ ಒಂದಿಷ್ಟು ದೂರದಲ್ಲಿ ಮಾತನಾಡುತ್ತ ನಿಂತಿದ್ದು ಕಂಡಿತು. ಅವರನ್ನು ಒಂದಿಷ್ಟು ನೋಡುತ್ತ ನಿಂತೆ. ಅನಂತರ ಹೆಬ್ಬಾಗಿಲು ತೆರೆದು ಹೊರಗೆ ಬಂದು ನಿಂತೆ. ಗುಂಪಿನಲ್ಲಿ ಕೂಗಾಟ, ಚೀರಾಟ, ಗೊಂದಲ ಉಂಟಾಯಿತು. ಆದರೆ ಯಾರೂ ತಮ್ಮ ಸ್ಥಳದಿಂದ ಓಡಿ ಹೋಗಲಿಲ್ಲ. ಎಲ್ಲರೂ ಒಂದಿಷ್ಟು ಹಿಂದೆ ಸರಿದಿದ್ದರು. ಯಾರ ಚಿಂದಿ ಹಾರುವುದೋ ಎಂಬ ನಿರೀಕ್ಷೆಯಲ್ಲಿ ಅವರಿದ್ದರು.

ಒಂದು ನಿಮಿಷದವರೆಗೆ ನಾನು ಅವರ- ನ್ನೆಲ್ಲ ತೀಕ್ಷ್ಣವಾಗಿ ನೋಡುತ್ತಲಿದ್ದೆ. ಅನಂತರ ನನ್ನ ಬೆರಳನ್ನು ಗುಂಡಿಗೆ ಸ್ಪರ್ಶಿಸಿ ತೆಗೆದೆ. ಯಾವ ಆಸ್ಫೋಟವೂ ಆಗಲಿಲ್ಲ. ಆಗುವಂತೆಯೂ ಇರಲಿಲ್ಲ. ನಾನು ಕೂಡಲೇ ಆ ಪೆಟ್ಟಿಗೆಯ ಕಾಗದವನ್ನು ಬಿಚ್ಚಿದೆ. ಗಡಿಯಾರ ಮತ್ತು ತಂತಿಯನ್ನು ಹೊರದೆಗೆದು ಎಲ್ಲರಿಗೂ ತೋರಿಸಿದೆ. ಅನಂತರ ಪೆಟ್ಟಿಗೆಯನ್ನು ಕೆಳಮುಖಮಾಡಿ ತೋರಿಸಿದೆ. ಅದರಲ್ಲಿ ಏನೂ ಇರಲಿಲ್ಲವೆಂದು ಅವರಿಗೆಲ್ಲ ವಿಶ್ವಾಸ ಉಂಟಾಗಿರಬೇಕು. ಅನಂತರ ಪೆಟ್ಟಿಗೆ ಹಾಗೂ

ಕಾಗದವನ್ನು ಕಸದ ತೊಟ್ಟಿಯಲ್ಲಿ ಚೆಲ್ಲಿಬಿಟ್ಟೆ.

ಉದ್ವಿಗ್ನರಾದ ಕೆಲವು ಜನರು ಕೂಡಲೇ ನನ್ನನ್ನು ಸುತ್ತುವರಿದರು. ಅವರಲ್ಲಿ ಲೆಫ್ಟಿನೆಂಟ್ ವೈಮರ್ ಪ್ರಮುಖನಾಗಿದ್ದ. ಆತನ ಮುಖ ಸಂತಾಪದಿಂದ ರಕ್ತರಂಜಿತವಾಗಿತ್ತು.

''ಇದೆಂಥ ಹುಡುಗಾಟ?''

''ಹುಡುಗಾಟವೂ ಅಲ್ಲ, ಏನೂ ಅಲ್ಲ. ನಾನು ಕೇವಲ ಮೇಯರ್‌ರನ್ನು ಕಾಣಬಯಸಿದ್ದೆ. ಈ ದೇಶದಲ್ಲಿ ಇದಕ್ಕಿಂತ ದೊಡ್ಡ ಅಪರಾಧ ಯಾವುದೂ ಇಲ್ಲ ಎಂದೆನಿಸುತ್ತದೆ,'' ನಾನು ಆತನತ್ತ ಓರೆನೋಟ ಬೀರಿ ಹೇಳಿದೆ.

''ಹಾಗಾದರೆ ಪೆಟ್ಟಿಗೆಯಲ್ಲಿ ಬಾಂಬ್ ಇರಲಿಲ್ಲವೆ?'' ಆತ ಗರ್ಜಿಸಿದ.

''ಖಂಡಿತವಾಗಿಯೂ ಇರಲಿಲ್ಲ. ಇರುವುದೂ ಇಲ್ಲ....'' ನಾನೂ ಕೂಗಿ ಹೇಳಿದೆ.

''ಆದರೆ ಈ ಗಡಿಯಾರ, ಈ ತಂತಿ, ಈ ಗುಂಡಿ.....?''

''ಏನು, ಇವೆಲ್ಲ ಕಾನೂನುಬಾಹಿರ ವಸ್ತುಗಳೇನು? ಇವುಗಳನ್ನು ಪೆಟ್ಟಿಗೆಯಲ್ಲಿಡುವುದು ಅಪರಾಧವೆ? ಹೀಗೆ ಮಾಡುವುದು ನನಗೆ ಮೋಜಿನ ಸಂಗತಿ....''

''ಮಿಸ್ಟರ್, ನೀನು ಜೇಲಿಗೆ ಹೋಗಬೇಕಾಗುವುದು ತಿಳಿಯಿತೆ?'' ಲೆಫ್ಟಿನೆಂಟ್ ಬೆಂಕಿಯಾಗಿ ಹೇಳಿದ.

''ಯಾವ ಅಪರಾಧಕ್ಕಾಗಿ? ತೊಂದರೆ ಆದದ್ದು ನನಗೆ. ಈ ಜನರ ದೊಡ್ಡ ಗುಂಪನ್ನೇ ನನ್ನ ಬೆನ್ನ ಹಿಂದೆ ನಿಲ್ಲಿಸಿ ಅದರ ನೇತೃತ್ವವನ್ನು ಸ್ವತಃ ಕಾನೂನು ರಕ್ಷಕರೇ ವಹಿಸಿದ್ದೀರಿ. ಇಪ್ಪತ್ತು ಲಕ್ಷಡಾಲರ್ ಹಾನಿ ತುಂಬಿಕೊಡಲು ನಾನು ನಿಮ್ಮ ಮೇಲೆ ದಾವೆ ಹೂಡುತ್ತೇನೆ,'' ನಾನು ಹಲ್ಲು ಕಡಿದು ಹೇಳಿದೆ.

ಒಬ್ಬ ಕುಳ್ಳ ವ್ಯಕ್ತಿ ಲೆಫ್ಟಿನೆಂಟ್ ವೈಮರ್‌ನ ಪಕ್ಕದಲ್ಲಿ ಬಂದು ನಿಂತುಕೊಂಡು,

''ಒಂದೇ ನಿಮಿಷ ಲೆಫ್ಟಿನೆಂಟ್, ಅವಸರಕ್ಕೆ ಕಾರಣವಿಲ್ಲ. ಮೊದಲೇ ಬಜೆಟ್ಟಿನಲ್ಲಿ ಕೊರತೆಯಿದೆ,'' ಎಂದು ಹೇಳಿದ.

''ನೀವು ಯಾರು?'' ನಾನು ಕೂಗಿ ಕೇಳಿದೆ.

''ನಾನು ಇಲ್ಲಿಯ ಮೇಯರ್....!'' ಆತ ಕ್ಷಮಾಪಣೆಯ ರಾಗದಲ್ಲಿ ಹೇಳಿದ.

''ಆಹಾ! ತಾವು ಈಗ ಬಿಲದಿಂದ ಹೊರಬಿದ್ದಿರಾ? ಹೋಟೆಲಿನ ನನ್ನ ಕಿಟಕಿಯ ನೇರ ಕೆಳಭಾಗದಲ್ಲಿ ರಸ್ತೆಯಲ್ಲಿ ತಗ್ಗು ಬಿದ್ದಿದೆ. ದೊಡ್ಡ ತಗ್ಗು. ರಾತ್ರಿ ವಾಹನಗಳೆಲ್ಲ ತಗ್ಗಿನಲ್ಲಿಳಿದು ಜೋರಿನಿಂದ ಸದ್ದು ಮಾಡುತ್ತ ಸಾಗುತ್ತವೆ. ಇದರಿಂದ ನನ್ನ ನಿದ್ರೆ ಹಾಳಾಗುತ್ತಲಿದೆ. ಈ ತಗ್ಗನ್ನು ಬೇಗ ನೀವು ಸರಿಪಡಿಸಬೇಕು ಎಂದು ನಿಮಗೆ ಹೇಳಬೇಕೆಂಬ ಉದ್ದೇಶದಿಂದ ನಿಮ್ಮನ್ನು ಭೇಟಿಯಾಗಲು ಬಯಸಿದ್ದೆ,'' ಎಂದೆನ್ನುತ್ತ ಬೆತ್ತದ ಚಡಿಯನ್ನು ಜೋರಾಗಿ ನೆಲಕ್ಕೆ ಬೀಸಿ, ತಿರಸ್ಕಾರದ ನೋಟ ಬೀರಿ, ಹೆಜ್ಜೆಯನ್ನು ಅಪ್ಪಳಿಸುತ್ತ ಅಲ್ಲಿಂದ ಕಂಬಿ ಕಿತ್ತಿದೆ.

ಯಾರಾದರೂ ನನ್ನನ್ನು ತಡೆಯಬಹುದೆಂದೆನಿಸಿದರೂ ಹಾಗಾಗದೆ ನಾನು ಆ ಜನಸಂದಣಿಯನ್ನು ಸೀಳಿಕೊಂಡು ಹೊರಬಂದೆ. ಒಂದಿಷ್ಟು ದೂರ ಸಾಗಿದ ಬಳಿಕ ಒಂದು ಟ್ಯಾಕ್ಸಿ ಸಿಕ್ಕಿತು. ಆತನಿಗೆ ಹೊಟೇಲಿನತ್ತ ಸಾಗಲು ಹೇಳಿದೆ. ಆದರೆ ಅರ್ಧ ದಾರಿಯಲ್ಲಿಯೇ ನಿಲ್ಲಿಸಿ, ''ನಾನು ಈಗ ಬಂದೆ. ಚಿಕ್ಕ ವಸ್ತುವೊಂದನ್ನು ಖರೀದಿಸಬೇಕಾಗಿದೆ, ಅಷ್ಟೆ....'' ಎಂದು, ಆ ಚಾಲಕನಿಗೆ ಹೇಳಿ ಕೆಳಗಿಳಿದೆ. ಒಂದು ಅಂಗಡಿ ಹೊಕ್ಕು, ಹಿಂದಿನ ಬಾಗಿಲಿನಿಂದ ಹೊರಬಂದೆ.

ಆ ಕಿರು ರಸ್ತೆಯಲ್ಲಿ ನನ್ನ ಹ್ಯಾಟ್ ಹಾಗೂ ಬೆತ್ತದ ಚಡಿಗೆ ವಿದಾಯ ಹೇಳಿ, ಕೃತ್ರಿಮ ಗಡ್ಡವನ್ನು ಕಿತ್ತು ಬಿಸಾಕಿದೆ. ಕೋಟನ್ನು ತಿರುವಿಹಾಕಿಕೊಂಡು, ತಲೆಗೆ ಒಂದು ಸಾಮಾನ್ಯ ಟೊಪ್ಪಿಗೆಯನ್ನು ಏರಿಸಿಕೊಂಡು ಆ ರಸ್ತೆ ದಾಟಿ ಬೇರೊಂದು ಟ್ಯಾಕ್ಸಿ ಹಿಡಿದು,

ವಿಮಾನ ನಿಲ್ದಾಣಕ್ಕೆ ಹೋದೆ.

ಮರುದಿನ ಸೇಂಟ್‌ಲೂಯಿಯಲ್ಲಿ ಜಾಫ್ರೆ ಭೆಟ್ಟಿಯಾದ. ಆತ ವಸ್ತುಸಂಗ್ರಹಾಲಯದಿಂದ ಹಾರಿಸಿಕೊಂಡು ತಂದ ಅತ್ಯಂತ ದುರ್ಲಭವಾದ ಏಳು ಚಿತ್ರಗಳನ್ನು ತೋರಿಸಿದ.

''ಎಲ್ಲ ಕೆಲಸವೂ ನಿರಾಯಾಸವಾಗಿಯೇ ಆಯಿತು. ನಾನು ಸ್ನಾನಗೃಹದಲ್ಲಿ ಅಡಗಿಕೊಂಡಿದ್ದೆ. ನೀನು ಆ ಕಟ್ಟಡವನ್ನು ಖಾಲಿ ಮಾಡಿಸಿದ ಕೂಡಲೇ ನಾನು ಈ ಎಲ್ಲ ಚಿತ್ರಗಳನ್ನೂ ತೆಗೆದು ನನ್ನ ಕೋಟಿನ ಒಳಗೆ ಬಚ್ಚಿಟ್ಟುಕೊಂಡೆ. ಹಿಂದಿನ ಬಾಗಿಲಿನಿಂದ ಹೊರಬಿದ್ದಾಗ ಯಾರೂ ನನ್ನತ್ತ ಗಮನ ಹರಿಸಲಿಲ್ಲ. ಭಯದಿಂದ ಓಡುತ್ತಲಿದ್ದಾನೆಂದು ತಿಳಿದುಕೊಂಡರು ಜನ,'' ಜಾಫ್ರೆ ಹೇಳಿದ.

''ನೋಡಿದ್ದರಾದರೂ ಏನಾಗುತ್ತಿತ್ತು? ನನ್ನ ಮೇಲಂತೂ ಯಾವ ಆಪಾದನೆಯೂ ಬರುವಂತಿರಲಿಲ್ಲ. ನಾನೂ ಆ ಜನಸಂದಣಿಯಲ್ಲಿಯೇ ಇದ್ದೆನೆಂದು ನನ್ನ ವಕೀಲ ಸುಲಭವಾಗಿ ಸಿದ್ಧಮಾಡುತ್ತಲಿದ್ದ. ಅಲ್ಲದೆ ಈ ಸಮಯದಲ್ಲಿ ಯಾವನೋ ಕಳ್ಳ ಈ ಕೆಲಸ ಮಾಡಿರಬಹುದೆಂದು ಆತ ಹೇಳಬಹುದಾಗಿತ್ತು.''

''ಇಂಥ ಪ್ರಯತ್ನ ಮತ್ತೆ ಸಾಧ್ಯವೆ?'' ಜಾಫ್ರೆ ನಕ್ಕು ಕೇಳಿದ.

''ಇಲ್ಲ, ಆದರೆ ಮುಂದಿನ ಸಲ ಬೇರೆ ಇನ್ನೊಂದು ಉಪಾಯ ಹೊಳೆದೀತು....'' ನಾನು ನಗುತ್ತ ಹೇಳಿದೆ.

●

## ದರ್ಪಣವ್ಯಕ್ತಿ

ಆ ಕಾಲದಲ್ಲಿ ತಿಬೇಟಿನಲ್ಲಿ ಕನ್ನಡಿ ಇರಲಿಲ್ಲ. ಇಂಥದರಲ್ಲಿ ಒಂದು ಬಾರಿ ಒಬ್ಬ ಲಾಮಾನಿಗೆ ಅಂಥ ಒಂದು ಒಡೆದ ಕನ್ನಡಿ ಸಿಕ್ಕಿತು. ಅವನು ಆಶ್ಚರ್ಯದಿಂದ ಅದನ್ನು ತಿರುಗಿಸಿ ತಿರುಗಿಸಿ ನೋಡತೊಡಗಿದ. ಅವನಿಗೆ ಅದರಲ್ಲಿ ತನ್ನ ರೂಪ ಕಾಣಿಸಿತು. ಅವನು ತನ್ನ ತಂದೆಗೆ ಸ್ವರ್ಗದಲ್ಲಿ ಏನೋ ಕಷ್ಟವಾಗಿ ಇಲ್ಲಿಗೆ ಬಂದಿದ್ದಾರೆ ಎಂದು ಅಳತೊಡಗಿದ. ಅದನ್ನು ನೋಡಿ ಅವನ ಸ್ನೇಹಿತ ಅಲ್ಲಿಗೆ ಬಂದ. ಅವನ ಮಾತು ಕೇಳಿ ನಗುತ್ತಾ, ''ಇಲ್ಲಿ ತಾ, ನಾನು ನಿಮ್ಮ ತಂದೆಯನ್ನು ನೋಡುತ್ತೇನೆ,'' ಎಂದು ಕನ್ನಡಿ ತೆಗೆದುಕೊಂಡ. ಅವನು ಕನ್ನಡಿ ನೋಡಿ, ''ಇಲ್ಲಿ, ನನ್ನ ತಂದೆ ಇದ್ದಾರೆ. ಅವರು ಸ್ವರ್ಗದಲ್ಲಿ ಕುಳಿತು ನಗುತ್ತಿದ್ದಾರೆ,'' ಎಂದ. ಕನ್ನಡಿಯಲ್ಲಿ ಕಾಣುವುದು ಯಾರ ತಂದೆ? ಎಂಬ ಬಗೆಗೆ ಇಬ್ಬರೂ ಜಗಳವಾಡುತ್ತಾ ಧರ್ಮಗುರುವಿನ ಹತ್ತಿರಕ್ಕೆ ನ್ಯಾಯಕ್ಕಾಗಿ ಹೋದರು. ಆ ಧರ್ಮಗುರುವು ಕನ್ನಡಿಯನ್ನು ಸ್ವಲ್ಪ ಹೊತ್ತು ನೋಡಿ ಗಂಭೀರವಾಣಿಯಲ್ಲಿ ''ಈ ಚಿತ್ರ ಯಾರದ್ದೂ ಅಲ್ಲ, ಭಗವಂತನದು.'' ಎನ್ನುತ್ತಾ ಭಕ್ತಿಯಿಂದ ಅದನ್ನು ಬಟ್ಟೆಯಲ್ಲಿ ಚೆನ್ನಾಗಿ ಒರೆಸಿ ತನ್ನ ಪೂಜಾಗೃಹದಲ್ಲಿ ಇಟ್ಟುಕೊಂಡ.

● ಕೆ.ಶಾಂತಾಮಣಿ

ಒಂದು ಬಾರಿ ತೆಲುಗು ಫಿಲ್ಮ ನಟ ಶ್ರೀ ಶ್ರೀಯವರನ್ನು ಯಾರೋ ''ತಾವು ಬೋಳು ತಲೆಯ ಮೇಲೆ ಕವಿತೆ ಬರೆದಿಲ್ಲವೇನು?'', ಎಂದು ಪ್ರಶ್ನಿಸಿದಾಗ ಅವರು, ''ಇಲ್ಲ ಸರ್, ಯಾವಾಗಲೂ ನಾನು ಕಾಗದದ ಮೇಲೇ ಬರೆದಿದ್ದೇನೆ,'' ಎಂದು ಉತ್ತರಿಸಿದರಂತೆ.

● ಕೆ.ಶಾಂತಾಮಣಿ

ವೀರ ವನಿತೆ

# ಭೀಕಾಜಿ ಕಾಮಾ

—ಕಬ್ಬಳ್ಳಿ ಗಣಪತಿ ಶರ್ಮಾ

ರಾಣಿ ಝಾನ್ಸಿ ಲಕ್ಷ್ಮೀಬಾಯಿಯಂತೆ ಎಷ್ಟೋ ಜನ ವೀರ ಮಹಿಳೆಯರು ಭಾರತದ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟ ಉದಾಹರಣೆಗಳಿವೆ. ಅಂಥ ವೀರ ಮಹಿಳೆಯರಲ್ಲಿ ಭೀಕಾಜಿ ಕಾಮಾ ಒಬ್ಬರು. ಅವರು ಭಾರತದ ಪ್ರಥಮ ಕ್ರಾಂತಿಕಾರಿಣಿಯಾಗಿ, ಶ್ಯಾಮ್‌ಜಿ ಕೃಷ್ಣ ವರ್ಮ, ಸರದಾರ ಸಿಂಹ ರಾಣಾ, ವೀರೇಂದ್ರ ಚಟ್ಟೋಪಾಧ್ಯಾಯ ಮುಂತಾದವರ ಜೊತೆ ವಿದೇಶದಲ್ಲಿದ್ದು, ವಿದೇಶೀಯರಿಂದ ಸಹಾಯ ಪಡೆದು ಸಶಸ್ತ್ರ ಕ್ರಾಂತಿಯ ಮೂಲಕ ಭಾರತವನ್ನು ಬ್ರಿಟಿಶರಿಂದ ಮುಕ್ತಗೊಳಿಸಲು ಹೋರಾಡಿದರು.

1861ರ ಸಪ್ಟೆಂಬರ್ 24ರಂದು ಮುಂಬೈಯ ಒಂದು ಆಗರ್ಭ ಶ್ರೀಮಂತ ಪಾರಸಿ ಕುಟುಂಬದಲ್ಲಿ ಜನಿಸಿದ ಭೀಕಾಜಿಯವರ ತಂದೆ ಸೊರಬ್‌ಜೀ ಪಟೇಲ ಖ್ಯಾತ ಉದ್ಯೋಗಪತಿ. ಪ್ರಸಿದ್ಧ ಅಲೆಕ್ಸಾಂಡ್ರಿಯಾ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸ ಮುಗಿಸಿದ ಭೀಕಾಜಿ 1885ರಲ್ಲಿ ರುಸ್ತುಂಜಿ ಕಾಮಾರನ್ನು ಮದುವೆಯಾದರು. ಅದೇ ವರ್ಷ ಮುಂಬೈಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಜನ್ಮತಾಳಿತು. ಆಗ ನಡೆದ ಅಧಿವೇಶನಕ್ಕೆ ರಾಷ್ಟ್ರದ ವಿವಿಧ ಮೂಲೆಗಳಿಂದ ಎಪ್ಪತ್ತೆರಡು ಜನ ಗಣ್ಯ ವ್ಯಕ್ತಿಗಳು ಆಗಮಿಸಿದ್ದರು. ಭೀಕಾಜಿಯವರ ಮೇಲೆ ಇದು ಪರಿಣಾಮ ಬೀರಿತು. ಅಲ್ಲದೆ, 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಥೆ ಚಿಕ್ಕಂದಿನಿಂದಲೇ ಅವರಲ್ಲಿ ಸ್ವಾತಂತ್ರ್ಯ ಹೋರಾಟದ ಅರಿವು ಮೂಡಿಸಿತ್ತು. ಜೊತೆಗೆ ಓದುತ್ತಿರುವಾಗಲೇ ಬಾಲ ಗಂಗಾಧರ ತಿಲಕ ಹಾಗೂ ಬಂಗಾಲದ ಇತರ ಕ್ರಾಂತಿಕಾರಿ ಮುಖಂಡರ ವಿಚಾರಧಾರೆಯತ್ತ ಆಕರ್ಷಿತರಾಗಿದ್ದರು. ಇದೇ ಅವರನ್ನು ಕ್ರಾಂತಿಕಾರಿ ಮಾರ್ಗದತ್ತ ಸೆಳೆಯಿತು.

ನಂತರ 1902ರಲ್ಲಿ ಅವರು ಚಿಕಿತ್ಸೆಗಾಗಿ ಇಂಗ್ಲಂಡಿಗೆ ಹೋದರು. ಅಲ್ಲಿ ಭಾರತೀಯ ರಾಜಕಾರಣದ ಪಿತಾಮಹರೆನಿಸಿದ್ದ ದಾದಾಭಾಯಿ ನವರೋಜಿಯವರನ್ನು ಭೆಟ್ಟಿಯಾದರು. ಆ ಸಮಯದಲ್ಲೇ ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ್ದು.

1907ರಲ್ಲಿ ಭೀಕಾಜಿ ಫ್ರಾನ್ಸಿಗೆ ತೆರಳಿದರು. ಅಲ್ಲಿ ಪ್ಯಾರಿಸ್ಸಿನಲ್ಲಿ ಸರದಾರ ಸಿಂಹ ರಾಣಾ ಹಾಗೂ ವೀರೇಂದ್ರ ಚಟ್ಟೋಪಾಧ್ಯಾಯರ ಸಹಕಾರದಿಂದ 'ವಂದೇ ಮಾತರಂ' ಪತ್ರಿಕೆ ಹೊರಡಿಸಲಾರಂಭಿಸಿದರು. ಈ ಪತ್ರಿಕೆಯ ಪ್ರತಿಗಳು ಆಗ ಫ್ರೆಂಚರ ವಶದಲ್ಲಿದ್ದ ಪಾಂಡಿಚೇರಿ ಮೂಲಕ ಭಾರತಕ್ಕೆ ಬರುತ್ತಿದ್ದವು.

ಪ್ಯಾರಿಸ್ಸಿನಲ್ಲಿರುವಾಗಲೇ ಭೀಕಾಜಿ ಕಾಮಾ ಸ್ವತಂತ್ರ ಭಾರತದ ಮೊಟ್ಟ ಮೊದಲ ರಾಷ್ಟ್ರಧ್ವಜ ತಯಾರಿಸಿದರು. ಜರ್ಮನಿಯ ರಾಜಧಾನಿ ಬರ್ಲಿನ್ನಿನಲ್ಲಿ ನಡೆದ ಜಾಗತಿಕ ಸಮಾಜವಾದಿ ರಾಷ್ಟ್ರಗಳ ಸಮ್ಮೇಳನದಲ್ಲಿ ಪ್ರಥಮ ಬಾರಿಗೆ ಈ ತ್ರಿವರ್ಣ ಧ್ವಜವನ್ನು ಹಾರಿಸಲಾಯಿತು. ಆ ಧ್ವಜಕ್ಕೂ ಇಂದು ಬಳಕೆಯಲ್ಲಿರುವ ತ್ರಿವರ್ಣ ರಾಷ್ಟ್ರಧ್ವಜಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ. ಭೀಕಾಜಿ ತಯಾರಿಸಿದ ಧ್ವಜದಲ್ಲಿ ಕೇಸರಿ ಬಣ್ಣದ ಬದಲು ಕೆಂಪು ಬಣ್ಣ

ವಿತ್ತು. ಅಶೋಕ ಚಕ್ರದ ಸ್ಥಾನದಲ್ಲಿ ಗುಲಾಬಿ ಹೂ ಹಾಗೂ ಏಳು ನಕ್ಷತ್ರಗಳ ಚಿಹ್ನೆಗಳಿದ್ದವು. ಶ್ವೇತವರ್ಣದ ಮಧ್ಯಭಾಗದಲ್ಲಿ 'ವಂದೇ ಮಾತರಂ' ಎಂದು ಬರೆಯಲಾಗಿತ್ತು. ಬದಲಾವಣೆಗಳೇನೇ ಇದ್ದರೂ ರಾಷ್ಟ್ರಧ್ವಜಕ್ಕೆ ಮೊದಲಿಗೆ ರೂಪು ಕೊಟ್ಟ ಕೀರ್ತಿ ಭೀಕಾಜಿಯವರಿಗೆ ಸಲ್ಲುತ್ತದೆ.

ವಿದೇಶದಲ್ಲಿ ನೆಲೆಸಿದ್ದ ಭಾರತೀಯ ಕ್ರಾಂತಿಕಾರಿಗಳ ಸಂಸ್ಥೆ 'ಅಭಿನವ ಭಾರತ'ಕ್ಕೆ ಭೀಕಾಜಿ ಪ್ರೇರಕರಾಗಿದ್ದರು. 1910ರಲ್ಲಿ ಅವರು ಪ್ಯಾರಿಸ್ಸಿನಲ್ಲಿ ನಡೆದ ಕ್ರಾಂತಿಕಾರಿಗಳ ಸಮ್ಮೇಳನದಲ್ಲಿ, ಸ್ವಾತಂತ್ರ್ಯಕ್ಕಾಗಿ ಹೋರಾಟಕ್ಕಿಳಿಯುವಂತೆ ಭಾರತೀಯರಿಗೆ ಕರೆ ನೀಡಿದರು. ಆ ಸಂದರ್ಭದಲ್ಲಿ ತ್ರಿವರ್ಣ ರಾಷ್ಟ್ರ ಧ್ವಜವನ್ನು ಹಾರಿಸಿ, ಸ್ವಾತಂತ್ರ್ಯ ಹೋರಾಟದ ಮೇಲೆ ಒಂದು ಕವನವನ್ನೇ ಕಟ್ಟಿ ಹಾಡಿ ಸಶಸ್ತ್ರ ಹೋರಾಟಕ್ಕಿಳಿಯುವಂತೆ ಜನತೆಯನ್ನು ಹುರಿದುಂಬಿಸಿದರು.

1909ರಿಂದಲೇ ಪ್ಯಾರಿಸ್ಸು ಭಾರತೀಯ ಕ್ರಾಂತಿಕಾರಿಗಳ ಕೇಂದ್ರವಾಗಿತ್ತು. ಅಲ್ಲಿಂದಲೇ ಕ್ರಾಂತಿಕಾರಕ ಸಾಹಿತ್ಯ, ಶಸ್ತ್ರಾಸ್ತ್ರ, ಮುಂತಾದವು ಭಾರತಕ್ಕೆ ಬರುತ್ತಿದ್ದವು. ಲಾಲಾ ಹರದಯಾಳ, ಶ್ಯಾಮಜಿ ಕೃಷ್ಣ ವರ್ಮ ಮುಖ್ಯ ಮುಂದಾಳುಗಳಾಗಿದ್ದರು. ಆದರೆ ಪ್ಯಾರಿಸ್ಸಿನಲ್ಲಿ ಪ್ರಕಟವಾಗುತ್ತಿದ್ದ ಸಮಾಜವಾದಿ ಪತ್ರಿಕೆಗಳಲ್ಲಿ ಭೀಕಾಜಿ ಕಾಮಾ ಸಹ ಮಹತ್ವಪೂರ್ಣ ಸ್ಥಾನ ಪಡೆದಿದ್ದರು.

ಏತನ್ಮಧ್ಯೆ ಭೀಕಾಜಿ ಲಂಡನ್ನಿಗೆ ತೆರಳಿ ಬಿಪಿನ್‌ಚಂದ್ರ, ಪಾಲರನ್ನು ಭೇಟ್ಟಿಯಾದರು. ಅಲ್ಲಿದ್ದಾಗಲೇ ವೀರ ಸಾವರಕರರ ಜೊತೆ ಪ್ರಸಿದ್ಧ ಹೈಡ್ ಪಾರ್ಕಿನಲ್ಲಿ ಸ್ವಾತಂತ್ರ್ಯ ಹೋರಾಟದ ಬಗ್ಗೆ ಭಾಷಣ ಮಾಡಿದರು. ಇದರಿಂದ ಬ್ರಿಟಿಶ್ ಸರಕಾರ ಸಿಟ್ಟಿಗೆದ್ದು ಅವರನ್ನು ಬಂಧಿಸಬೇಕೆನ್ನುವಷ್ಟರಲ್ಲಿ ಪ್ಯಾರಿಸ್ಸಿಗೆ ಮರಳಿದರು. ನಂತರ ಸಾವರಕರ ಪ್ಯಾರಿಸ್ಸಿಗೆ ಬರುವಾಗ ಅವರಿಗೆ ಫ್ರಾನ್ಸ್ ಸರಕಾರ ಆಶ್ರಯ ನೀಡಲು ಸಹಾಯವಾಗುವಂತೆ ಜನಮತ ಸಂಗ್ರಹಿಸಿದರು. ಸಾವರಕರ ಹಡಗಿನಿಂದ ಧುಮುಕಿ ಸಮುದ್ರ ಈಜಿ ಪ್ಯಾರಿಸ್‌ಗೆ ಬಂದಾಗ ತಾವೇ ಸ್ವಾಗತಿಸಿದರು.

ಭೀಕಾಜಿ ಫ್ರಾನ್ಸ್ ಮಾತ್ರವಲ್ಲ, ಜರ್ಮನಿ ಅಮೇರಿಕಗಳಿಗೂ ತೆರಳಿ ಭಾರತದ ಸ್ವಾತಂತ್ರ್ಯ ಹೋರಾಟದ ಪ್ರಚಾರ ಮಾಡಿದರು. ಅಷ್ಟರಲ್ಲಿ ಪ್ರಥಮ ಮಹಾಯುದ್ಧ ಆರಂಭವಾಯಿತು. ಯುದ್ಧದಲ್ಲಿ ಫ್ರಾನ್ಸ್ ಬ್ರಿಟನ್ನಿನ ಜೊತೆಯಿದ್ದ ಕಾರಣ 1915ರಲ್ಲಿ ಬ್ರಿಟನ್ ಸರಕಾರದ ಕೋರಿಕೆಯನ್ನು ಮನ್ನಿಸಿ ಭೀಕಾಜಿಯವರನ್ನು ಬಂಧಿಸಿತು. ಮೂರು ವರ್ಷ ಸೆರೆಮನೆಯಲ್ಲಿದ್ದ ಅವರು ಯುದ್ಧ ಮುಗಿದ ನಂತರ ಬಿಡುಗಡೆಯಾಗಿ ತಮ್ಮ ಸ್ವಾತಂತ್ರ್ಯ ಹೋರಾಟವನ್ನು ಮುಂದುವರಿಸಿದರು. ರಶಿಯದ ಕ್ರಾಂತಿಕಾರಕ ಲೆನಿನ್‌ರೊಂದಿಗೆ ವ್ಯವಹರಿಸಿದರು.

ಈ ನಿರಂತರ ಹೋರಾಟದಿಂದ ಭೀಕಾಜಿಯವರ ಆರೋಗ್ಯ ಕೆಟ್ಟು 1935ರಲ್ಲಿ ಭಾರತಕ್ಕೆ ಹಿಂದಿರುಗಿದರು. ಮರುವರ್ಷವೇ ಕೊನೆಯುಸಿರೆಳೆದರು. ಆಗ ಅವರಿಗೆ 75 ವರ್ಷ ವಯಸ್ಸಾಗಿತ್ತು. ಜೀವನವಿಡಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದರೂ ಸ್ವತಂತ್ರ ಭಾರತವನ್ನು ನೋಡುವ ಭಾಗ್ಯ ಅವರಿಗಿರಲಿಲ್ಲ.

ಮುಂಬೈಯಲ್ಲಿ ಅವರ ಸ್ಮರಣಾರ್ಥ ಒಂದು ರಸ್ತೆಗೆ ಭೀಕಾಜಿ ಕಾಮಾ ರೋಡ್ ಎಂಬ ಹೆಸರಿಡಲಾಗಿದೆ. 1966ರಲ್ಲಿ ಭಾರತ ಸರಕಾರ ಅವರ ಸ್ಮರಣಾರ್ಥ ಅಂಚೆ ಚೀಟಿಯೊಂದನ್ನು ಹೊರಡಿಸಿ ಗೌರವ ಸಲ್ಲಿಸಿದೆ. ●

# ಬೇಹುಗಾರನ ಬೆನ್ನಟ್ಟಿ....

ರೇಣುಕ

ಗೂಢಚಾರನೊಬ್ಬನ ಕತೆ ಎಂದೊಡನೆ ಸಾಮಾನ್ಯವಾಗಿ ನಮ್ಮ ಚಿತ್ತಭಿತ್ತಿಯ ಮೇಲೆ ಮೂಡುವ ಚಿತ್ರವೆಂದರೆ ದೊಗಲೆ ಮೇಲಂಗಿಯನ್ನು ತೊಟ್ಟು, ಕೃತಕವಾದ ಮೀಸೆಯನ್ನಂಟಿಸಿಕೊಂಡು ಕೈಯಲ್ಲಿ ಪಿಸ್ತೂಲಿನಿಂದ ಸಜ್ಜಿತನಾದ ಅಪರೂಪ ವ್ಯಕ್ತಿಯೊಬ್ಬನದು. ಆದರೆ ನಾನು ಹೇಳಲಿರುವ ವೃತ್ತಾಂತ ಬೇರೆಯೆ ತೆರನಾದದ್ದು. ಆತನೊಬ್ಬ ನಮ್ಮ ನಿಮ್ಮಂಥ ಒಬ್ಬ ಸಾಮಾನ್ಯ ವ್ಯಕ್ತಿ. ಎಂದಾಕ್ಷಣ, ಓದುಗರು ಕುತೂಹಲ, ಆಸಕ್ತಿಗಳನ್ನು ಕಳೆದುಕೊಳ್ಳಬೇಕಿಲ್ಲ. ಇಂಥ ಸಾಮಾನ್ಯನೊಬ್ಬನ ಪ್ರಸಂಗ ಅಮೇರಿಕದ ಪ್ರತಿಷ್ಠಿತ ತನಿಖಾ ಸಂಸ್ಥೆಯಾದ ಎಫ್.ಬಿ.ಐ.ದ ಕಾರ್ಯಾಚರಣೆಯ ಇತಿಹಾಸದಲ್ಲೇ ಅತ್ಯಂತ ಕುತೂಹಲ ಕೆರಳಿಸಿದ ಮತ್ತು ಶ್ರಮದಾಯಕವೆನಿಸಿದ ಒಂದು ಅಸಾಮಾನ್ಯ ಪ್ರಕರಣವೆಂದು ಖ್ಯಾತಿಗಳಿಸಿತು. ಎಫ್.ಬಿ.ಐ ಕಾರ್ಯಾಚರಣೆಯ ಕೇಂದ್ರಬಿಂದು ನ್ಯೂಯಾರ್ಕ್ ನಗರದಲ್ಲಿನ ಲಕ್ಷಾಂತರ ಪ್ರಜೆಗಳಲ್ಲಿ ಒಬ್ಬನೆನಿಸಿದ ಓರ್ವ ಅನಾಮಧೇಯನೆಂಬುದೇ ಈ ಕಥಾನಕದ ಒಂದು ಕುತೂಹಲಕರ ಅಂಶ.

20, ಫೆಬ್ರುವರಿ 1942ರ ಒಂದು ರಾತ್ರಿ. ಅಂಚೆ ಪತ್ರ ಪರೀಕ್ಷಕನೊಬ್ಬ ಅಂಚೆ ಪತ್ರಗಳ ರಾಶಿಯ ನಡುವೆ ಆಯ್ದ ಪತ್ರಗಳ ಪರೀಕ್ಷೆಯಲ್ಲಿ ತಲ್ಲೀನನಾಗಿದ್ದ. ಪೋರ್ಚುಗಲ್ ವಿಳಾಸವುಳ್ಳ ಟೈಪ್ ಮಾಡಿದ್ದ ಪತ್ರವೊಂದನ್ನು ಆತ ಗಮನವಿಟ್ಟು ಪರೀಕ್ಷಿಸುತ್ತಿದ್ದ. ಪತ್ರದಲ್ಲಿ ಗಮನ ಸೆಳೆಯುವಂತಹ ವಿಶೇಷವಾದ ಒಕ್ಕಣೆಯೇನೂ ಇರಲಿಲ್ಲ. ಒಬ್ಬ ಹಳೆಯ ಗೆಳೆಯ ತನ್ನ ಮತ್ತೊಬ್ಬ ಗೆಳೆಯನಿಗೆ ಬರೆಯಬಹುದಾದಂತಹ ಸಾಮಾನ್ಯ ಪತ್ರ ಅದಾಗಿತ್ತು. ಪತ್ರದಲ್ಲಿನ ಒಕ್ಕಣೆ ಸಾಮಾನ್ಯ ಗೃಹಕೃತ್ಯಗಳಿಗೆ ಸಂಬಂಧಿಸಿದ ವಿಷಯಗಳಿಗಿಂತ ಹೆಚ್ಚು ಭಿನ್ನವಿರಲಿಲ್ಲ. ಆದರೆ, ಪತ್ರ ಪರೀಕ್ಷಕನ ಗಮನ ಸೆಳೆದ ಅಂಶವೆಂದರೆ ಪತ್ರದ ವಿಳಾಸ. ವಿದೇಶಗಳಲ್ಲಿ ಜರ್ಮನ್ ಗೂಢಚಾರರಿಗೆ ಆಶ್ರಯ ನೀಡುವ ತಾಣಗಳೆಂದು ಪಟ್ಟಿ ಮಾಡಲ್ಪಟ್ಟ ವಿಳಾಸಗಳಲ್ಲಿ ಅದೂ ಒಂದಾಗಿತ್ತು.

ಕೆಲವೇ ಗಂಟೆಗಳಲ್ಲಿ ಆ ಪತ್ರ ವಾಷಿಂಗ್‌ಟನ್ ನಗರದ ಎಫ್.ಬಿ.ಐ.ನ ರಾಸಾಯನಿಕ ಪ್ರಯೋಗಾಲಯದಲ್ಲಿ ಹೆಚ್ಚಿನ ಪರೀಕ್ಷೆಗೆ ಗುರಿಯಾಯಿತು. ತಜ್ಞನೊಬ್ಬ ರಾಸಾಯನಿಕದಲ್ಲಿ ನೆನೆಯಿಸಿದ ಸ್ಪಂಜಿನಿಂದ ಪತ್ರದಲ್ಲಿ ಟೈಪ್ ಮಾಡದ ಖಾಲಿ ಸ್ಥಳಗಳನ್ನು ಸವರಿದಾಗ ನಿಧಾನವಾಗಿ ಸಂಕೇತಾತ್ಮಕವಾದ ಜರ್ಮನ್ ಭಾಷೆಯ ಗೂಢ ಲಿಪಿಗಳು ಮೂಡಿ ಬಂದವು. ಈ ಗೂಢ ಲಿಪಿಗಳನ್ನು ಪರಿಷ್ಕರಿಸಿ ಸಾಮಾನ್ಯ ಬರಹಕ್ಕೆ ತರ್ಜುಮೆ ಮಾಡಿದಾಗ ಹೊರಬಂದ ಅಂಶಗಳಿಂದ ಅಧಿಕಾರಿಗಳಿಗೆ ದಿಗ್ಭ್ರಮೆಯಾಯಿತು. ನ್ಯೂಯಾರ್ಕ್ ಬಂದರಿನಿಂದ ಸೈನಿಕರನ್ನು ಮತ್ತು ಸೇನಾ ಸರಂಜಾಮುಗಳನ್ನು ಹೊತ್ತು ಹೊರಡುವ ಹಡಗುಗಳ ಚಲನವಲನಗಳ ಬಗ್ಗೆ ಮುಖ್ಯ ಮಾಹಿತಿಗಳನ್ನೊಳಗೊಂಡಿತ್ತು ಆ ಪತ್ರದಲ್ಲಿನ ನಿಗೂಢ ಸಂದೇಶ.

ಆ ಪತ್ರದಲ್ಲಿನ ರಹಸ್ಯ ಸಂದೇಶ ಸಕಾಲದಲ್ಲಿ ಶತ್ರುಗಳ ಕೈವಶವಾಗಿದ್ದರೆ ಸಾವಿರಾರು ಮಂದಿ ಅಮೇರಿಕನ್ ಸೈನಿಕ ಮತ್ತು ನಾವಿಕರ ಜೀವಗಳು ಅಪಾಯಕ್ಕೀಡಾಗುತ್ತಿದ್ದವು.

ನ್ಯೂಯಾರ್ಕ್ ನಗರದಲ್ಲಡಗಿರುವ ಈ ಗೂಢಚಾರನನ್ನು ಹೇಗಾದರೂ ಮಾಡಿ ಹಿಡಿಯಲೇ ಬೇಕಾಗಿತ್ತು. ಆದರೆ ಆ ಪತ್ರದ ಕರ್ತೃವನ್ನು ಗುರುತಿಸುವ ಬಗ್ಗೆ ಯಾವ ಮುಖ್ಯ ಮಾಹಿತಿಗಳನ್ನು ಸಂಗ್ರಹಿಸಲೂ ಆ ಪ್ರಯೋಗಾಲಯದಿಂದ ಸಾಧ್ಯವಾಗಲಿಲ್ಲ. ಬದಲು ಆ ಪತ್ರವನ್ನು ಪೋರ್ಟೆಬಲ್ ಟೈಪ್ ರೈಟರಿನಲ್ಲಿ ಟೈಪ್ ಮಾಡಲಾಗಿದೆಯೆಂಬ ಚಿಕ್ಕ ಸುಳುವನ್ನು ಮಾತ್ರ ಕಂಡು ಹಿಡಿಯಲು ಸಾಧ್ಯವಾಯಿತು. ಸರಿ. ಎಫ್.ಬಿ.ಐ ಏಜೆಂಟರು ನಗರದಲ್ಲಿನ ಟೈಪ್‌ರೈಟರುಗಳನ್ನು ಮಾರುವ ಮತ್ತು ಬಾಡಿಗೆಗೆ ಕೊಡುವ ಅಂಗಡಿಗಳನ್ನೆಲ್ಲ ಕೂಲಂಕಷವಾಗಿ ತಪಾಸಣೆ ನಡೆಸಿದರು. ಆದರೆ ಪ್ರಯೋಜನವಾಗಲಿಲ್ಲ.

ಕೆಲವೇ ವಾರಗಳಲ್ಲಿ ಅದೇ ವಿಳಾಸಕ್ಕೆ ಬರೆದ ಮತ್ತೆರಡು ಪತ್ರಗಳು ಎಫ್.ಬಿ.ಐ ಪತ್ರ ಪರೀಕ್ಷಕರ ಕೈ ಸೇರಿದವು. ಈ ಎರಡೂ ಪತ್ರಗಳು ನ್ಯೂಯಾರ್ಕ್ ನಗರದ ಪ್ರಧಾನ ಅಂಚೆಕಚೇರಿಯ ಟಪಾಲು ಪೆಟ್ಟಿಗೆಯಲ್ಲಿ ಹಾಕಲ್ಪಟ್ಟಿದ್ದವು. ಇದರ ಅರ್ಥ ಗೂಢಚಾರನು ನ್ಯೂಯಾರ್ಕ್ ನಗರದಲ್ಲಿಯೇ ಇರುವನೆಂದಾಯಿತು! ಹಾಗಿದ್ದ ಪಕ್ಷದಲ್ಲಿ ಆ ನಿಗೂಢ ವ್ಯಕ್ತಿಯ ಚಹರೆಗಳಾದರೂ ಏನು? ಸಾಮಾನ್ಯವಾಗಿ ಪೋಲೀಸರು ಅಪರಾಧಿಯನ್ನು ಹುಡುಕುವಾಗ ಆತನನ್ನು ಗುರುತಿಸಲು ಸಾಧ್ಯವಾಗಬಹುದಾದ ಹಲವಾರು ಚಹರೆಗಳ ವಿವರಗಳೊಂದಿಗೆ ಸಜ್ಜಾಗಿರುವುದು ಅನಿವಾರ್ಯ. ಆದರೆ ಈ ಪ್ರಸಂಗದಲ್ಲಿ ಎಫ್.ಬಿ.ಐ ಬಳಿ ಅಂತಹ ಯಾವ ಚಹರೆಗಳೂ ಲಭ್ಯವಿರಲಿಲ್ಲ.

ಒಂದು ರಾತ್ರಿ ಎಫ್.ಬಿ.ಐ.ನ ವಿಶೇಷ ಏಜೆಂಟನೊಬ್ಬ ಬಾರೊಂದರಲ್ಲಿ ಮದ್ಯಪಾನ ಮಾಡುತ್ತಾ ಕುಳಿತಿದ್ದ. ಅವನು ತನ್ನ ಕೈಯಲ್ಲಿದ್ದ ಮೂಲ ಪತ್ರದ ಪ್ರತಿಯನ್ನೇ ಮತ್ತೆ ಮತ್ತೆ ಓದುತ್ತಿದ್ದ. ಥಟ್ಟನೆ ಅವನ ಬುದ್ಧಿ ತಿಳಿಯಾಯಿತು. ಆ ಪತ್ರದಲ್ಲಿ ಬರೆದಿದ್ದ



ಕೆಲವು ಸಾಮಾನ್ಯ ಅಂಶಗಳಿಂದ ಗಣನೀಯವಾದ ತಥ್ಯಗಳು ಹೊರಬೀಳುವ ಸಾಧ್ಯತೆಗಳನ್ನಾತ ಕಂಡುಕೊಂಡು ತಾನೇ ಚಕಿತನಾದ. ಯಾರಿಗೂ ಮುಖ್ಯವೆನಿಸದ ದಿನನಿತ್ಯದ ಕೆಲವು ವಿವರಗಳನ್ನು ಒಕ್ಕಣಿಸುವಾಗ ಆ ಗೂಢಚಾರ ತನ್ನ ಬಗೆಗಿನ ಕೆಲವು ವಾಸ್ತವವಾದ ಸಂಗತಿಗಳನ್ನು ತನಗರಿವಿಲ್ಲದಂತೆ ಹೊರಗೆಡವಿದ್ದ. ಆಕಸ್ಮಿಕವಾಗಿ ಕಂಡುಕೊಂಡ ಈ ವಿವರಗಳಿಂದ ಎಫ್.ಬಿ.ಐ ಏಜೆಂಟ ಪುಲಕಿತನಾದ. ಪತ್ರಮುಖೇನ ತಾನು ಕಂಡುಕೊಂಡ ವಿವರಗಳ ವಿಶ್ಲೇಷಣೆಯಿಂದ ಆತ ನಿಗೂಢ ಗೂಢಚಾರನ ಬಗೆಗೆ ಈ ರೀತಿಯ ಒಂದು ತೀರ್ಮಾನಕ್ಕೆ ಬಂದ:

1) ಗೂಢಚಾರ ವಿವಾಹಿತನಾಗಿದ್ದಾನೆ. 2) ಅವನಿಗೆ ಸ್ವಂತ ಮನೆಯಿದೆ. 3) ಅವನ ಬಳಿ ನಾಯಿಯೊಂದಿದ್ದು ಅದು ಕಾಯಿಲೆಯಿಂದ ಬಳಲುತ್ತಿದೆ. 4) ಅವನಿಗೆ ಕಾಯಂ ಆದ ವೃತ್ತಿಯೊಂದಿದೆ. 5) ಅವನು ವಾರದ ದಿನಗಳಲ್ಲಿ ಪ್ರತಿದಿನ ಬೆಳಿಗ್ಗೆ ಏಳರಿಂದ ಎಂಟುಗಂಟೆಯ ಒಳಗೆ ಮನೆ ಬಿಡುತ್ತಾನೆ. 6) ಇತ್ತೀಚಿಗೆ ಆತ ತನ್ನ ಕನ್ನಡಕದ ಗಾಜುಗಳನ್ನು ಬದಲಿಸಿರುತ್ತಾನೆ. 7) ಅವನು ವಿಮಾನ ದಾಳಿಯ ಬಗ್ಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿ ಏರ್‌ರೈಡ್ ವಾರ್ಡನ್ ಆಗಿ ತಾನು ವಾಸಿಸುವ ವಿಭಾಗದಲ್ಲಿ ನಿಯಮಿಸಲ್ಪಟ್ಟಿದ್ದಾನೆ.

ಗ್ರೇಟರ್ ನ್ಯೂಯಾರ್ಕ್ ನಗರವೊಂದರಲ್ಲೇ 98,338 ಮಂದಿ ಏರ್‌ರೈಡ್ ವಾರ್ಡನ್‌ಗಳಿದ್ದರು. ಈ ಎಲ್ಲಾ ವಾರ್ಡನ್ನರನ್ನು ಪರೀಕ್ಷೆಗೆ ಗುರಿಮಾಡುವುದು ಸಾಧ್ಯವಿಲ್ಲವೆನ್ನುವುದು ಎಫ್.ಬಿ.ಐ ಏಜೆಂಟನಿಗೆ ಗೊತ್ತಿತ್ತು. ಹಾಗಾದರೆ ತನಿಖೆಯನ್ನು ಮುಂದುವರೆಸುವುದು ಹೇಗೆ? ಎಂದಾತ ಚಿಂತಿಸತೊಡಗಿದ. ಆಗ ಅವನಿಗೆ ಸರಿಯಾದ ನಿಟ್ಟಿನಲ್ಲಿ ಮುಂದುವರಿಯಲು ಕಿರಿದಾದ ಸೀಳು ಹಾದಿಯೊಂದು ಗೋಚರಿಸಿತು. ಹಾದಿ ಎಷ್ಟು ದೂರವಾದರೇನು! ದೊರೆತ ಸುಳಿವಿನ ಅತಿ ಸಣ್ಣ ಎಳೆಯ ಆಧಾರದ ಮೇಲೆ ಎಫ್.ಬಿ.ಐ ಅಂಗಸಂಸ್ಥೆಯ ನೂರಾರು ಮಂದಿ ಕಾರ್ಯಭಾರಿಗಳು ತನಿಖೆಯನ್ನಾರಂಭಿಸಿದರು.

ನಗರದಲ್ಲಿರುವ ಏರ್‌ರೈಡ್ ವಾರ್ಡನ್ನರಲ್ಲಿ ಎಷ್ಟು ಮಂದಿ ವಿವಾಹಿತರಿದ್ದಾರೆ? ಎಷ್ಟು ಜನರಿಗೆ ಸ್ವಂತ ಮನೆಯಿದೆ? ಎಷ್ಟು ಮಂದಿಯ ಬಳಿ ನಾಯಿಗಳಿವೆ? ಯಾರು ಯಾರು ಕನ್ನಡಕಗಳನ್ನು ಉಪಯೋಗಿಸುತ್ತಾರೆ? ಎಂಬಿತ್ಯಾದಿ ವಿವರಗಳನ್ನು ಸಂಗ್ರಹಿಸುವುದು ಈಗ ಅನಿವಾರ್ಯವಾಗಿತ್ತು. ಸಾವಿರಾರು ಏರ್‌ರೈಡ್ ವಾರ್ಡನ್‌ಗಳ ಬಗ್ಗೆ ಸೂಕ್ಷ್ಮಾತಿಸೂಕ್ಷ್ಮವಾದ ಮಾಹಿತಿಗಳನ್ನು ಎಫ್.ಬಿ.ಐ ಏಜೆಂಟರು ಶ್ರಮವಹಿಸಿ ಕಲೆಹಾಕತೊಡಗಿದರು.

ಈ ನಡುವೆ ಪೋರ್ಚುಗಲ್ ವಿಳಾಸಕ್ಕೆ ಬರೆದಿದ್ದ ಮತ್ತೆರಡು ಪತ್ರಗಳು ಟಪಾಲು ಪೆಟ್ಟಿಗೆಯಲ್ಲಿ ದೊರೆತವು. ಆ ಪತ್ರಗಳಲ್ಲಿನ ವಿವರಗಳಿಂದಾಗಿ ನಿಗೂಢ ವ್ಯಕ್ತಿಯು ಎಫ್.ಬಿ.ಐ. ದಾಖಲೆಗಳಲ್ಲಿ ಅಸ್ಪಷ್ಟ ಆಕಾರವನ್ನು ಪಡೆಯತೊಡಗಿದ. ಪತ್ರಗಳಲ್ಲಿ ದೊರೆತ ವಿವರಗಳನ್ನು ಪಟ್ಟಿ ಮಾಡಿ ಅದರ ಆಧಾರದ ಮೇಲೆ ನಿಗೂಢ ವ್ಯಕ್ತಿಯು ತೋಟವನ್ನು ಹೊಂದಿದ್ದಾನೆ; ಭೋಗ್ಯಕ್ಕೆ ಹಾಕಿದ ಅವನ ಆಸ್ತಿಯು ಸಕಾಲಕ್ಕೆ ಹಣ ಪಾವತಿ ಮಾಡದೆ ಮಾರಾಟಕ್ಕೆ ಬಂದಿರುವ ಹಾಗಿದೆ; ಅವನು ಕೋಳಿ ಸಾಕಣೆಯ ವ್ಯವಹಾರದಲ್ಲಿ ಪ್ರವೇಶಿಸಲು ಪ್ರಯತ್ನಿಸುತ್ತಿದ್ದಾನೆ ಎಂಬ ತೀರ್ಮಾನಕ್ಕೆ ಬರಲಾಯಿತು. ಇಷ್ಟಾದರೂ ಆ ಗೂಢಚಾರನನ್ನು ಗುರುತಿಸುವುದು ಕಷ್ಟಕರವೇ ಆಗಿತ್ತು.

ಎಫ್.ಬಿ.ಐ. ಅಧಿಕಾರಿಗಳು ಹಗಲು ರಾತ್ರಿ ಕಷ್ಟಪಟ್ಟು ಸಾವಿರಾರು ಏರ್ ರೈಡ್ ವಾರ್ಡನ್ನರ ಚಲನವಲನಗಳ ಮೇಲೆ ಕಣ್ಣಲ್ಲಿ ಕಣ್ಣಿಟ್ಟರು. ಮೂಲತಃ 98,338 ಮಂದಿ ವಾರ್ಡನ್‌ಗಳ ಪೈಕಿ ಹಂತಹಂತವಾಗಿ 88000

ಮಂದಿ, ಕೊನೆಗೆ 81000 ಮಂದಿ ವಾರ್ಡನ್‌ಗಳು ಎಫ್.ಬಿ.ಐ. ಅಧಿಕಾರಿಗಳ ಸಂಶಯದ ವ್ಯಾಪ್ತಿಯಲ್ಲಿ ಉಳಿದುಕೊಂಡರು. 81,000 ಜನರನ್ನು ಪರೀಕ್ಷೆಗೊಳಪಡಿಸುವುದು ಸುಲಭವಾಗಿರಲಿಲ್ಲ.

ಏಪ್ರಿಲ್ 14ರ ರಾತ್ರಿ ಗೂಢಚಾರನ ಹನ್ನೆರಡನೆಯ ಪತ್ರವನ್ನು ವಶಪಡಿಸಿಕೊಳ್ಳಲಾಯಿತು. ವಿದೇಶಿಯನೊಬ್ಬ ಸ್ವದೇಶದ ಹಂಬಲದಿಂದ ಗೆಳೆಯನಿಗೆ ಬರೆದುಕೊಂಡ ಸಾಮಾನ್ಯವಾದ ಪತ್ರ ಅದಾಗಿತ್ತು. ಈ ಪತ್ರ ಎಫ್.ಬಿ.ಐ. ತನಿಖೆಗೆ ಹೊಸ ತಿರುವನ್ನೇ ಕೊಟ್ಟಿತು. ಪತ್ರದ ಒಕ್ಕಣೆ ಹೀಗಿತ್ತು: ''ಇಲ್ಲಿನ ಹವಾಗುಣ ಬಹಳ ಸೆಕೆಯದಾಗಿದೆ. ಮರಗಿಡಗಳಲ್ಲಿ ಹೂಮೊಗ್ಗುಗಳು ಕುಡಿಯೊಡೆಯುತ್ತಿವೆ. ವಸಂತಕಾಲದಲ್ಲಿ ಯಾವಾಗಲೂ ನನಗೆ ನೆನಪಿಗೆ ಬರುವುದೆಂದರೆ ಎಸ್ತೊರಿಲ್ ಸಮುದ್ರ ದಂಡೆಯ ಮೇಲೆ ನಾವು ಕಳೆದ ಆ ಸುಂದರ ದಿನಗಳು.....''

ಎಸ್ತೊರಿಲ್! ಎಫ್.ಬಿ.ಐ. ಏಜೆಂಟರುಗಳಿಗೆ ಅದು ಚಿರಪರಿಚಿತ ಹೆಸರು. ಲಿಸ್ಬನ್ನಿನಿಂದ ಕೆಲವೇ ಮೈಲು ದೂರದಲ್ಲಿನ ಒಂದು ಪ್ರವಾಸಿಗಳ ತಾಣವದು. ಜರ್ಮನ್ ಗೂಢಚಾರರು ಮೇಳವಿಸುತ್ತಿದ್ದ ಜಾಗ ಅದಾಗಿತ್ತು.

ಒಡನೆ ತುರ್ತಾಗಿ ಎಫ್.ಬಿ.ಐ. ಅಧಿಕಾರಿಗಳ ಸಭೆಯನ್ನು ಕರೆಯಲಾಯಿತು. 1941ರ ವಸಂತಕಾಲದಿಂದ ಲಿಸ್ಬನ್ನಿನಿಂದ ಅಮೇರಿಕವನ್ನು ಪ್ರವೇಶಿಸಿದ ಪ್ರತಿಯೊಬ್ಬ ಪ್ರವಾಸಿಗನ ಮಾಹಿತಿಯನ್ನು ಪರಿಶೀಲಿಸುವ ಬಗ್ಗೆ ಚರ್ಚಿಸಲಾಯಿತು. ಅವರ ಬಳಿ ಪ್ರವಾಸಿಗರ ಪಾಸ್‌ಪೋರ್ಟ್ ಫೋಟೋ ಜೊತೆಯಲ್ಲಿ ಹೋಲಿಸಿ ನೋಡಲು ಸಂಶಯಿತ ವ್ಯಕ್ತಿಯ ಭಾವಚಿತ್ರವಾಗಲಿ ಕೈಬೆರಳುಗಳ ಗುರುತಿನ ಪಡಿಯಚ್ಚಾಗಲಿ ಲಭ್ಯವಿರಲಿಲ್ಲ. ಸಂಶಯಿತ ವ್ಯಕ್ತಿಯ ನಿಖರವಾದ ಹೆಸರೂ ಅವರಿಗೆ ಗೊತ್ತಿರಲಿಲ್ಲ. ಸಭೆಯಲ್ಲಿ ಹಾಜರಿದ್ದ ಏಜೆಂಟನೊಬ್ಬನಿಗೆ ಒಂದು ವಿಷಯ ಹೊಳೆಯಿತು. ''ನಮ್ಮ ಬಳಿ ಆ ಗೂಢಚಾರನು ಬರೆದ ಪತ್ರಗಳಲ್ಲಿ ಸಾಕಷ್ಟು ಒಳ್ಳೆಯ ಕೈಬರಹದ ಮಾದರಿಗಳಿವೆ. ಪತ್ರದಲ್ಲಿನ ಸಹಿ ಫ್ರೆಡ್ ಲೆವಿಸ್ ಎಂದಿದೆ. ಹೆಸರು ಕೃತಕವಾದರೂ ಅದನ್ನು ಬರೆದವನ ಕೈ ಬರಹ ಮಾತ್ರ ಬದಲಾಗಲು ಸಾಧ್ಯವಿಲ್ಲ. ಬೆರಳೊತ್ತಿನ ಗುರುತನ್ನು ಬದಲಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಕೈಬರವಣಿಗೆಯನ್ನು ಬದಲಿಸುವುದೂ ಸಾಧ್ಯವಿಲ್ಲ. ಅಮೇರಿಕವನ್ನು ಪ್ರವೇಶಿಸುವ ಪ್ರತಿಯೊಬ್ಬ ಪ್ರವಾಸಿಗನೂ ಕಸ್ಟಮ್ಸ್ ಅಧಿಕಾರಿಯ ಮುಂದೆ ತಾನು ತಂದಿರುವ ಸಾಮಾನಿನ ಬಗ್ಗೆ ಲಿಖಿತ ಪ್ರಮಾಣ ಪತ್ರವನ್ನು ಸಲ್ಲಿಸಬೇಕಾಗಿದೆ. ಸುಂಕದ ಕಚೇರಿಯಲ್ಲಿರುವ ಫೈಲುಗಳನ್ನು ತೀವ್ರವಾಗಿ ಪರಿಶೀಲಿಸಿ ಪ್ರಮಾಣ ಪತ್ರಗಳ ಹಸ್ತಾಕ್ಷರಗಳನ್ನು ಪತ್ರದಲ್ಲಿನ ಗೂಢಚಾರನ ಹಸ್ತಾಕ್ಷರದೊಂದಿಗೆ ಹೋಲಿಸಿದರೆ ಹೇಗೆ?''

ಮಾರನೆಯ ದಿನ ಎಫ್.ಬಿ.ಐ.ನ ಕೈಬರಹ ತಜ್ಞರು ಗೂಢಚಾರನ ಕೈಬರಹದ ಫೋಟೋ ಪ್ರತಿಗಳೊಂದಿಗೆ ಸುಂಕದ ಕಚೇರಿಯಲ್ಲಿನ ಸಾವಿರಾರು ಪ್ರಮಾಣ ಪತ್ರಗಳನ್ನು ತಾಳೆ ನೋಡುವ ಕಾರ್ಯದಲ್ಲಿ ತೊಡಗಿದರು. 1941ರ ವಸಂತಕಾಲದಲ್ಲಿ ಲಿಸ್ಬನ್ನಿನಿಂದ ನಿರಾಶ್ರಿತರ ಪ್ರವಾಹವೇ ಅಮೇರಿಕಕ್ಕೆ ಹರಿದು ಬಂದಿತ್ತು. ಕೈ ಬರಹದಲ್ಲಿದ್ದ ಆ ಲಿಖಿತ ಹೇಳಿಕೆಯ ಪತ್ರಗಳಾದರೋ ಪೋಲಿಷ್, ಜರ್ಮನ್, ಫ್ರೆಂಚ್, ರಶಿಯನ್ ಹೀಗೆ ಬೇರೆ ಬೇರೆ ಭಾಷೆಗಳಲ್ಲಿದ್ದವು.

ಕೈಬರಹ ತಜ್ಞರ ಕಾರ್ಯ ಪೂರ್ಣತಃ ವೈಜ್ಞಾನಿಕವಾಗಿತ್ತು. ಸುಳುವನ್ನು ಪಡೆಯುವ ಸಾಧ್ಯತೆ ಪ್ರತಿಯೊಂದು ಅಕ್ಷರಗಳ ಅಂಕುಡೊಂಕುಗಳನ್ನು ಕೂಲಂಕಷವಾಗಿ ಪರಿಶೀಲಿಸುವುದನ್ನು ಅವಲಂಬಿಸಿತ್ತು. ಪ್ರತಿಯೊಂದು ಪ್ರಮಾಣ ಪತ್ರವನ್ನೂ ಅತಿ ಜಾಗರೂಕತೆಯಿಂದ ಪರೀಕ್ಷಿಸುವುದು ಅಗತ್ಯವಾಗಿತ್ತು. ತಜ್ಞರು ಬೆಟ್ಟದಂತೆ ರಾಶಿಬಿದ್ದಿದ್ದ

ಪ್ರಮಾಣಪತ್ರಗಳನ್ನು ಅತ್ಯಂತ ಪರಿಶ್ರಮದಿಂದ ಪರಿಶೀಲಿಸಿದರು. ನಿಗೂಢ ಗೂಢಚಾರನ ಬಗೆಗೆ ಇದುವರೆಗೆ ನಡೆಸಿದ ಕಾರ್ಯಚರಣೆ ಕೇವಲ ಪ್ರಥಮ ಹಂತದ್ದಾಗಿತ್ತು. ಆತ ಬರೆದಿದ್ದ ಹನ್ನೆರಡು ಪತ್ರಗಳಿಂದ ಸಂಗ್ರಹಿಸಿದ ಅತ್ಯಂತ ಕ್ಷುಲ್ಲಕ ವಿಷಯಗಳನ್ನೂ ಎರಡೆರಡು ಸಲ ಪರೀಕ್ಷೆಗೆ ಗುರಿಪಡಿಸಲಾಯಿತು. ಇದರ ಪರಿಣಾಮವಾಗಿ 98,000 ಏರ್‌ರೈಡ್ ವಾರ್ಡನ್‌ಗಳ ಬೃಹತ್ ಪಟ್ಟಿಯಿಂದ 60,000 ಜನ ಸಂಶಯದಿಂದ ಮುಕ್ತರಾದರು. ಎಫ್.ಬಿ.ಐ ಏಜೆಂಟರು ನಗರದ ಮೂಲೆ ಮೂಲೆಯಲ್ಲಿ ಮಾರು ವೇಷದಿಂದ ಸಂಚರಿಸುತ್ತಾ ಗೂಢಾಚಾರನ ಬಗೆಗೆ ಮಾಹಿತಿಗಳನ್ನು ಸಂಗ್ರಹಿಸಲು ಪ್ರಯತ್ನಿಸುತ್ತಿದ್ದರು.

1943ರ ಜೂನ್ ಆರರ ರಾತ್ರಿ ಒಂಭತ್ತು ಗಂಟೆಯ ಸಮಯ. ಎಫ್.ಬಿ.ಐ ಏಜೆಂಟನೊಬ್ಬ ನ್ಯೂಯಾರ್ಕ್ ನಗರದ ಸುಂಕದ ಕಚೇರಿಯಲ್ಲಿ ಮೇಜಿನ ಮೇಲೆ ಪೇರಿಸಿದ್ದ ಸಾವಿರಾರು ಪ್ರಮಾಣ ಪತ್ರಗಳಲ್ಲಿ ಒಂದನ್ನು ಕೈಗೆ ತೆಗೆದುಕೊಂಡು ಪರೀಕ್ಷಿಸತೊಡಗಿದ. ಇದುವರೆಗೂ ಪರೀಕ್ಷಿಸಿದ ಪ್ರಮಾಣ ಪತ್ರಗಳ ಪೈಕಿ ಅದು 4,881 ನೆಯದ್ದಾಗಿತ್ತು. ಅವನ ದೃಷ್ಟಿ ಪ್ರಮಾಣಪತ್ರದ ಕೊನೆಯಲ್ಲಿದ್ದ ಸಹಿಯ ಮೇಲೆ ಸರಿದಾಗ ಥಟ್ಟನೆ ಅವನ ಆಯಾಸವೆಲ್ಲ ಕ್ಷಣಮಾತ್ರದಲ್ಲಿ ಮಾಯವಾಯಿತು. ಅವನು ಸೂಕ್ಷ್ಮದರ್ಶಕವನ್ನು ತೆಗೆದುಕೊಂಡು ಮತ್ತೊಮ್ಮೆ ಸಹಿಯನ್ನು ಪರೀಕ್ಷಿಸಿದ. ನೂರಾರು ಜನ ಎಫ್.ಬಿ.ಐ. ಏಜೆಂಟರು ಕಣ್ಣಲ್ಲಿ ಕಣ್ಣಟ್ಟು ಪರೀಕ್ಷಿಸುತ್ತಿದ್ದ ಆ ಅಮೂಲ್ಯ ಪ್ರಮಾಣಪತ್ರ ಅದೇ ಆಗಿತ್ತು.

ಸಹಿಯಲ್ಲಿನ ಅಕ್ಷರಗಳಲ್ಲಿ ಒಂದಾದ E ಅಕ್ಷರವನ್ನು ಕೊಂಕಿಸಿ ಕುಣಿಕೆಯಾಕಾರದಲ್ಲಿ ಮತ್ತು F ಅಕ್ಷರವನ್ನು ವಕ್ರವಾಗಿ ಇಳಿಜಾರಿನ ಕ್ರಮದಲ್ಲಿ ಬರೆಯಲಾಗಿತ್ತು. ಪತ್ರಗಳಲ್ಲಿನ E ಮತ್ತು F ಅಕ್ಷರಗಳಿಗೆ ಹೋಲಿಸಿದಾಗ ತಿಲ ಮಾತ್ರವೂ ವ್ಯತ್ಯಾಸ ಕಂಡು ಬರಲಿಲ್ಲ.

ಆ ದಿನ ರಾತ್ರಿ ವಾಷಿಂಗ್‌ಟನ್ನಿನ ಎಫ್.ಬಿ.ಐ ಪ್ರಯೋಗಾಲಯದಲ್ಲಿ ಸಹಿಯ ಛಾಯಾಚಿತ್ರವನ್ನು ತೆಗೆದು ಚಿತ್ರದ ವಿಷಮ ಮತ್ತು ಸಮ ಪ್ರತಿಗಳನ್ನು ದೊಡ್ಡದು ಮಾಡಿ ಗೂಢಚಾರನು ಬರೆದಿದ್ದ ಪತ್ರಗಳೊಂದಿಗೆ ಹೋಲಿಸಿ ನೋಡಿದಾಗ ತಜ್ಞರಿಗೆ ಸಂಶಯ ಉಳಿಯಲಿಲ್ಲ. ಅರ್ನೆಸ್ಟ್ ಎಫ್ ಲೆಮಿಟ್ಸ್ ಎಂಬ ಹೆಸರಿನಲ್ಲಿ ಪ್ರಮಾಣ ಪತ್ರದಲ್ಲಿ ಸಹಿ ಮಾಡಲಾಗಿತ್ತು.

ರಾತ್ರಿ ಒಂದು ಗಂಟೆಯ ಸರಿ ಹೊತ್ತಿನಲ್ಲಿ ಏರ್ ರೈಡ್ ವಾರ್ಡನ್ನರ ಉದ್ದನೆಯ ಪಟ್ಟಿಯನ್ನು ಪರಿಶೀಲಿಸಿದಾಗ ಲೆಮಿಟ್ಸ್. 123, ಆಕ್ಸ್‌ಫರ್ಡ್ ಪ್ಲೇಸ್, ಟಾಮ್ಸ್‌ಕಿನ್ಸ್ ವಿಲೆ, ಸ್ಟಾಟನ್ ಐಲಂಡ್, ನ್ಯೂಯಾರ್ಕ್ ಎಂಬ ವಿಳಾಸ ದೊರೆಯಿತು. ಮಾಹಿತಿ ದೊರೆತ ಒಂದು ಗಂಟೆಯೊಳಗೆ ಎಫ್.ಬಿ.ಐ ನ ವಿಶೇಷ ಏಜೆಂಟರು ಮನಹಟನ್ನಿನಿಂದ ಸ್ಟಾಟನ್ ಐಲಂಡ್ ತಲುಪಿ ದಾಪುಗಾಲು ಹಾಕುತ್ತಾ ಅಲೆದಾಡತೊಡಗಿದರು. ಗೂಢಚಾರನನ್ನು ಬಂಧಿಸಿದಾಕ್ಷಣ ಎಫ್.ಬಿ.ಐನ ಕೆಲಸ ಮುಗಿದಂತಾಗುತ್ತಿರಲಿಲ್ಲ. ಗೂಢಾಚಾರನ ಬಗೆಗೆ ನ್ಯಾಯಾಲಯದಲ್ಲಿ ಅನೇಕ ಪ್ರಶ್ನೆಗಳಿಗೆ ಉತ್ತರಿಸಬೇಕಾದ ಹೊಣೆಗಾರಿಕೆ ಅವರಿಗಿತ್ತು. ಗೂಢಚರ್‍ಯೆಯನ್ನು ಲೆಮಿಟ್ಸ್ ಒಬ್ಬನೇ ಮಾಡುತ್ತಿದ್ದಾನೋ ಅಥವಾ ಇತರರ ಸಹಾಯದಿಂದ ಅವನು ಈ ಕಾರ್ಯವನ್ನು ಮಾಡುತ್ತಿದ್ದಾನೋ? ಇತರರ ಸಹಾಯ ಅವನಿಗಿದೆಯೆಂದರೆ ಅವನ ಸಹಭಾಗಿಗಳು ಯಾರು? ಗೂಢಚಾರ ಎಲ್ಲಿಂದ ಮತ್ತು ಹೇಗೆ ಸುದ್ದಿಗಳನ್ನು ಸಂಗ್ರಹಿಸುತ್ತಿದ್ದ? ಬಂಧನಕ್ಕೊಳಗಾದ ಗೂಢಾಚಾರರು ಏನು ಮಾಡಿದರೂ ಸಾಮಾನ್ಯವಾಗಿ ಬಾಯಿ ಬಿಡುತ್ತಿರಲಿಲ್ಲ. ಮತ್ತೊಂದು ಮುಖ್ಯ ಸಂಗತಿಯೆಂದರೆ ಬಂಧನಕ್ಕೊಳಗಾದ ಗೂಢಚಾರನು ನ್ಯಾಯಾಲಯದಲ್ಲಿ ವಿಚಾರಣೆ ನಡೆಯುವ ಸಮಯದಲ್ಲಿ ಜ್ಯೂರಿಗಳಿಗೆ ಸಮ್ಮತವಾಗುವಂತೆ ಸಾಕ್ಷ್ಯಾಧಾ

ರಗಳನ್ನು ಒದಗಿಸಿ ಅಪರಾಧವನ್ನು ರುಜುವಾತುಪಡಿಸಬೇಕಾಗಿತ್ತು.

ರಾತ್ರಿಯಿಡಿ ಎಫ್.ಬಿ.ಐ. ಏಜೆಂಟರು ಆಕ್ಸ್‌ಫರ್ಡ್ ಪ್ಲೇಸಿನ 123ನೆಯ ಮನೆಯ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿದರು. ಮಾರನೆಯ ದಿನ ಬೆಳಗ್ಗೆ ಏಳು ಕಾಲು ಗಂಟೆಗೆ ತೆಳು ದೇಹದ, ಎತ್ತರದ ನಿಲುವಿನ, ಕನ್ನಡಕ ಧರಿಸಿದ ಆಸಾಮಿಯೊಬ್ಬ ಮನೆಯಿಂದ ಹೊರಬಿದ್ದು ರಸ್ತೆಯ ಮೇಲೆ ಲಗುಬಗೆಯಿಂದ ನಡೆಯತೊಡಗಿದ. ಏಜೆಂಟನೊಬ್ಬ ಅವನನ್ನು ಹಿಂಬಾಲಿಸಿದ. ಸ್ವಲ್ಪ ದೂರ ನಡೆದು ಆ ಆಸಾಮಿ ರಸ್ತೆ ಬದಿಯ ಹೋಟೆಲೊಂದನ್ನು ಹೊಕ್ಕ.

ಬೆಳಗಿನ ಹೊತ್ತಾದರೂ ಆಗಲೇ ಬಂದರಿನ ಕಾರ್ಮಿಕರು, ನಾವಿಕರು, ಸೈನಿಕರಿಂದ ಹೋಟೆಲು ಗಿಜಗುಡುತ್ತಿತ್ತು. ಎಫ್.ಬಿ.ಐ. ಏಜೆಂಟನು ಹೋಟೆಲನ್ನು ಪ್ರವೇಶಿಸಿ ಕಾಫಿ ಕುಡಿಯುತ್ತಾ ಕನ್ನಡಕಧಾರಿ ಆಸಾಮಿಯನ್ನು ನಿರೀಕ್ಷಿಸತೊಡಗಿದ. ಸ್ವಲ್ಪ ಸಮಯದ ನಂತರ ಆ ಕನ್ನಡಕಧಾರಿ ವ್ಯಕ್ತಿ ಒಳಗಿನಿಂದ ಮಾಸಿದ ಏಪ್ರನ್ ತೊಟ್ಟು ನೆಲವನ್ನು ಒರೆಸತೊಡಗಿದ. ನಸು ನೀಲಿಕಣ್ಣುಗಳ ಒರಟು ಕೆಂಗೂದಲಿನ ಆತ ಸುಮಾರು ಐವತ್ತೈದು ವಯಸ್ಸಿನವನಂತೆ ಕಾಣುತ್ತಿದ್ದ. ಹೀಗಾಗಿ ಗುಂಪಿನ ನಡುವೆ ಎದ್ದು ಕಾಣುವ ವ್ಯಕ್ತಿತ್ವ ಅವನದಾಗಿರಲಿಲ್ಲ. ಒಂದು ಸಲ ಆತನನ್ನು ನೋಡಿದ ಮೇಲೆ ಮತ್ತೆ ಅವನನ್ನು ಗುರುತಿಸುವುದು ಕಷ್ಟವಾಗಿತ್ತು.

ಸೇನೆಗೆ ಪೂರಕವಾದ ಸಾಮಗ್ರಿಗಳನ್ನೂ ಸೈನಿಕರನ್ನೂ ಹೊತ್ತ ಹಡಗುಗಳು ಬಂದರಿನಿಂದ ಹೊರಡುವ ದಿನಗಳ ಬಗೆಗೆ ಮತ್ತು ಸಾಗರದಲ್ಲಿ ಅವುಗಳು ಸಂಚರಿಸುವ ಮಾರ್ಗಗಳ ಬಗೆಗೆ ಬಂದರಿನ ಕಾರ್ಮಿಕರು ಮಾತನಾಡುತ್ತಿದ್ದರು. ಏಜೆಂಟನು ಕಾಫಿಯನ್ನು ಕುಡಿದು ಹೋಟೆಲಿನಿಂದ ಹೊರಬಿದ್ದ.

ಮುಂದಿನ ಹದಿನಾರು ದಿನಗಳಲ್ಲಿ ಗೂಢಚಾರನ ಪ್ರತಿಯೊಂದು ಚಲನವಲನವನ್ನು ಕಣ್ಣಲ್ಲಿ ಕಣ್ಣಿಟ್ಟು ಗಮನಿಸಲಾಯಿತು. ಇದಕ್ಕಾಗಿಯೇ ನಿಯಮಿತರಾದ ಎಫ್.ಬಿ.ಐನ ವಿಶೇಷ ಏಜೆಂಟರು ತಿರುಗು ವ್ಯಾಪಾರಿಗಳಂತೆ, ಕುಡುಕರೊಂದಿಗೆ ಕುಡುಕರಂತೆ, ಜೂಜಾಡುವವರೊಂದಿಗೆ ಜೂಜುಕೋರರಂತೆ ಮಾರುವೇಷದಲ್ಲಿ ಸುತ್ತಮುತ್ತಲ ಜನರೊಂದಿಗೆ ಬೆರೆತು ಅನೇಕ ವಿಷಯಗಳನ್ನು ಸಂಗ್ರಹಿಸಿದರು. ಅವರು ಕಲೆ ಹಾಕಿದ ಮಾಹಿತಿ ಗೂಢಚಾರನು ಬರೆದಿದ್ದ ಪತ್ರಗಳಲ್ಲಿನ ಪ್ರತಿಯೊಂದು ಅಂಶಕ್ಕೂ ಪೂರ್ಣವಾಗಿ ತಾಳೆಯಾಗುತ್ತಿತ್ತು:

"ಅರ್ನೆಸ್ಟ್? ಆತ ನನಗೆ ಚೆನ್ನಾಗಿ ಗೊತ್ತು. ನಮ್ಮ ವಿಭಾಗದ ಏರ್‌ರೈಡ್ ವಾರ್ಡನ್ ಆತ. ರಾತ್ರಿಯಲ್ಲಿ ಯಾರಾದರೂ ಮನೆಯ ದೀಪಗಳನ್ನು ಆರಿಸದಿದ್ದರೆ ಸಿಟ್ಟಿನಿಂದ ಅಬ್ಬರಿಸಿ ದೀಪಗಳನ್ನು ಆರಿಸುವಂತೆ ಗದರಿಸುತ್ತಿದ್ದ. ಈ ಯುದ್ಧವನ್ನು ಆತ ತೀವ್ರವಾಗಿ ಪರಿಗಣಿಸಿದ್ದಾನೆ. ಆತನಷ್ಟು ಕರ್ತವ್ಯಶೀಲನನ್ನು ನಾನು ಬೇರೆಲ್ಲೂ ಕಂಡಿಲ್ಲ."

"ಅರ್ನೆಸ್ಟ್! ಆತನಂಥ ದಯಾಳುವನ್ನು ನಾನೆಲ್ಲೂ ಕಂಡಿಲ್ಲ. ಕಳೆದ ಬೇಸಿಗೆಯಲ್ಲಿ ಆತನ ನಾಯಿ ಕಾಯಿಲೆಯಿಂದ ಸತ್ತು ಹೋಯಿತು. ನಂಬುಗೆಯ ಗೆಳೆಯನನ್ನು ಕಳೆದುಕೊಂಡಷ್ಟೇ ಆತನಾಗ ದುಃಖ ಪಟ್ಟಿದ್ದ."

"ಅರ್ನೆಸ್ಟ್ ಲಿಮಿಟ್ಜ್! ಈ ಪ್ರದೇಶದಲ್ಲೇ ಉತ್ತಮವಾದ ತೋಟ ಅವನದಾಗಿತ್ತು."

"ಅವನದು ಕೆಟ್ಟ ಅದೃಷ್ಟ. ಸಮಯಕ್ಕೆ ಸರಿಯಾಗಿ ಸಾಲದ ಹಣವನ್ನು ಹಿಂದಿರುಗಿಸಲು ತಪ್ಪಿದ್ದರಿಂದ ಆಧಾರದ ಸ್ವತ್ತು ಬಿಡಿಸಿಕೊಳ್ಳುವ ಹಕ್ಕನ್ನು ಬ್ಯಾಂಕು ರದ್ದು ಮಾಡಿತು.

"ಲಿಮಿಟ್ಜ್! ನನಗೆ ಚೆನ್ನಾಗಿ ಗೊತ್ತು. ಆಗಾಗ ಒಂದು ಗ್ಲಾಸ್ ಬೀರು ಕುಡಿಯುವ ಸಲುವಾಗಿ ಇಲ್ಲಿಗೆ ಬರುತ್ತಾನೆ. ಯಾವಾಗಲೂ ತಾನು ಕೊಳ್ಳಲಿರುವ ಕೋಳಿ

ಫಾರ್ಮಿನ ಬಗ್ಗೆಯೇ ಮಾತನಾಡುತ್ತಿರುತ್ತಾನೆ.''

ಸ್ಥಳೀಯರ ಮತ್ತು ಮಾರು ವೇಷಧಾರಿಗಳಾದ ಎಫ್.ಬಿ.ಐ. ಏಜೆಂಟರ ನಡುವೆ ನಡೆಯುತ್ತಿದ್ದ ಸಾಂದರ್ಭಿಕವಾದ ಮಾತುಕತೆಗಳಿಂದ ಹೊರಬಿದ್ದ ಸಂಗತಿಗಳು ಗೂಢಚಾರನು ಬರೆದಿದ್ದ ಪತ್ರಗಳಲ್ಲಿನ ವಿವರಗಳಿಗೆ ಹೊಂದಿಕೆಯಾದವಲ್ಲದೆ ಪತ್ರದ ಕರ್ತೃ ಲಿಮಿಟ್ಜನೆಂಬುದಕ್ಕೆ ಬಲವಾದ ಪುರಾವೆಗಳನ್ನೂ ಒದಗಿಸಿದವು. ಗೂಢಚಾರನು ಬರೆದ ಮೊದಲ ಪತ್ರವನ್ನು ವಶಪಡಿಸಿಕೊಂಡು ಒಂದು ವರ್ಷ, ನಾಲ್ಕು ತಿಂಗಳು ಮತ್ತು ಏಳು ದಿನಗಳ ನಂತರ ಆತನನ್ನು ಬಂಧಿಸುವಲ್ಲಿ ಎಫ್.ಬಿ.ಐ ಅಧಿಕಾರಿಗಳು ಸಫಲರಾದರು.

27, ಜೂನ್ 1943ರ ಪ್ರಾತಃಕಾಲ ಎಂಟು ಗಂಟೆಗೆ ಲಿಮಿಟ್ಜನನ್ನು ಬಂಧಿಸಿ ಎಫ್.ಬಿ.ಐ. ಕಾರ್ಯಾಲಯಕ್ಕೆ ತರಲಾಯಿತು. ಅವನು ಬರೆದ ಪತ್ರಗಳನ್ನೂ ಬಹು ಶ್ರಮವಹಿಸಿ ಸಂಗ್ರಹಿಸಿದ ಅಪಾರ ಸಾಕ್ಷ್ಯಾಧಾರಗಳ ರಾಶಿಯನ್ನೂ ಅವನಿಗೆ ತೋರಿಸಿದರು. ಅವನ್ನೆಲ್ಲಾ ಕಂಡು ಲಿಮಿಟ್ಜನು ದಿಗ್ಭ್ರಮೆಗೊಂಡ. ಬಳಿಕ ಮರು ಮಾತನಾಡದೆ ತಪ್ಪೊಪ್ಪಿಗೆಯ ಪತ್ರಕ್ಕೆ ಸಹಿ ಹಾಕಿದ.

ಅರ್ನೆಸ್ಟ್ ಲಿಮಿಟ್ಜ ಮೊದಲ ಬಾರಿಗೆ ನ್ಯೂಯಾರ್ಕಿ ನಗರದಲ್ಲಿನ ಜರ್ಮನ್ ರಾಯಭಾರಿ ಕಚೇರಿಗೆ ಗುಮಾಸ್ತನಾಗಿ ಬಂದು ಸೇರಿಕೊಂಡ. ಆತ ನ್ಯೂಯಾರ್ಕ್‌ನಿಂದ ಜರ್ಮನಿಗೆ ಆಗಾಗ ಹೋಗಿ ಬರುತ್ತಿದ್ದ. 1938ರಲ್ಲಿ ಲಿಮಿಟ್ಜ ಜರ್ಮನಿಗೆ ಹೋಗಿದ್ದಾಗ ಅವನನ್ನು ಅಲ್ಲಿಯ ಗೂಢಚಾರ ಸಂಸ್ಥೆಗೆ ಸೇರಿಸಿಕೊಳ್ಳಲಾಯಿತು. ಅಲ್ಲಿ ರಹಸ್ಯ ಶಾಯಿಯನ್ನು ಬಳಸುವುದರ ಬಗ್ಗೆ ಮತ್ತು ಬೇಹುಗಾರಿಕೆಯ ಸಂಕೀರ್ಣ ಚಟುವಟಿಕೆಗಳ ಬಗ್ಗೆ ಆತನಿಗೆ ತರಬೇತಿಯನ್ನು ನೀಡಲಾಯಿತು. 1941ರಲ್ಲಿ ಆತನನ್ನು ಜರ್ಮನಿಯ ಪರವಾಗಿ ಬೇಹುಗಾರಿಕೆ ನಡೆಸಲು ಅಮೇರಿಕಕ್ಕೆ ಕಳುಹಿಸಲಾಯಿತು. ಅಲ್ಲಿ ಆತ ಕೆಲಸವೊಂದನ್ನು ಗಿಟ್ಟಿಸಿಕೊಂಡು ಒಳ್ಳೆಯ ನಾಗರಿಕನಂತೆ ನಟಿಸುತ್ತಾ ನ್ಯೂಯಾರ್ಕ್ ನಗರದ ಲಕ್ಷಾಂತರ ಜನರಲ್ಲೊಬ್ಬನಾಗಿ ಜೀವಿಸತೊಡಗಿದ.

ತನ್ನ ತಪ್ಪೊಪ್ಪಿಗೆಯ ಪತ್ರದಲ್ಲಿ ಆತ ಬೇಹುಗಾರಿಕೆಯಲ್ಲಿ ತನ್ನ ಸಹಚರರಾಗಿದ್ದ ಇರ್ವಿನ್ ಹ್ಯಾರಿ ಮತ್ತು ಡಿ ಸ್ಲೈಟರ್ ಎಂಬಿಬ್ಬರ ಹೆಸರುಗಳನ್ನು ಬಹಿರಂಗೊಳಿಸಿದ. ಮುಂದೆ ಇವರಿಬ್ಬರಿಗೂ ಲಿಮಿಟ್ಜನೊಂದಿಗೆ ಮೂವತ್ತು ವರ್ಷಗಳ ಕಠಿಣ ಶಿಕ್ಷೆ ವಿಧಿಸಲಾಯಿತು.

ಲಿಮಿಟ್ಜನು ಸ್ಟೆಟನ್ ಐಲಂಡಿನಲ್ಲಿ ತಾನು ನಡೆಸುತ್ತಿದ್ದ ಬೇಹುಗಾರಿಕೆಯ ಬಗ್ಗೆ ಸ್ಥಳೀಯರಿಗೆ ಎಳ್ಳಷ್ಟೂ ಸಂದೇಹಬಾರದಂತೆ ನಡೆದುಕೊಂಡಿದ್ದ. ಅವನ ಬಂಧನದ ನಂತರ ಅನೇಕ ಜನ ಅವನ ಮನೆಗೆ ಹೋಗಿ ಅವನ ಹೆಂಡತಿಗೆ ತಮ್ಮ ಸಹಾನುಭೂತಿಯನ್ನು ಸೂಚಿಸಿದರು. ಲಿಮಿಟ್ಜನ ಪಕ್ಕದ ಮನೆಯ ಹೆಂಗಸೊಬ್ಬಳು ಅವನ ಬಂಧನದ ಸುದ್ದಿಯನ್ನು ಕೇಳಿ, 'ಇಂತಹ ಸರಳ, ಸಭ್ಯ ಮನುಷ್ಯನಿಗೆ ಇಂಥ ಶಿಕ್ಷೆಯೆ!' ಎಂದು ಅತ್ತುಬಿಟ್ಟಳಂತೆ.

ಬಾಗಿದ ಭುಜದ, ಸಭ್ಯತೆಯ ಮುಖವಾಡ ಧರಿಸಿದ್ದ ಈ ನಿಗೂಢಚಾರನ ಬಂಧನ ದ್ವಿತೀಯ ಜಾಗತಿಕ ಸಮರದ ಇತಿಹಾಸದಲ್ಲಿ ಎಫ್.ಬಿ.ಐ. ಸಾಧಿಸಿದ ಅನೇಕ ಮಹತ್ವದ ಸಾಧನೆಗಳಲ್ಲೊಂದಾಗಿತ್ತು. ಒಬ್ಬ ಗೂಢಚಾರನನ್ನು ಬಂಧಿಸಲು ಅವನ ಚಹರೆ, ರೂಢಿಬದ್ಧ ಕಾರ್ಯಗಳ ತಿಳಿವಿನಿಂದಾಗಿ ಅನೇಕ ಅನುಕೂಲಗಳಿರುತ್ತವೆ. ಆದರೆ ಹೋಟೆಲಿನಲ್ಲಿ ನೆಲ ಸಾರಿಸುವ ಒಬ್ಬ ಸಾಮಾನ್ಯ ವ್ಯಕ್ತಿಯನ್ನು ಬಂಧಿಸಿ, ಬೇಹುಗಾರಿಕೆಯಂತಹ ಗುರುತರ ಆಪಾದನೆಯನ್ನು ಹೊರಿಸಿ, ನ್ಯಾಯಾಲಯದಲ್ಲಿ ಸಾಕ್ಷ್ಯಾಧಾರಗಳಿಂದ ರುಜುವಾತು ಪಡಿಸುವುದು ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ.

(ಸಾಧಾರ) ●

# ಬಂಡಾಯ



ಮೂಲ ಕಾದಂಬರಿ: ವ್ಯಾಸರಾಯ ಬಲ್ಲಾಳ

ಸಂಗ್ರಹ: ಎ. ರಮಾ ಕಾರಂತ

# ಬಂಡಾಯ

*ನಾಲ್ಕು ದಶಕಗಳಿಗೂ ಮೀರಿದ ತಮ್ಮ ಸಾಹಿತ್ಯ ಕೃಷಿಯ ಫಲವಾಗಿ ಕಾದಂಬರಿಕಾರ ನಿಡಂಬೂರು ವ್ಯಾಸರಾಯ ಬಲ್ಲಾಳರು ಕನ್ನಡ ಓದುಗರಿಗೆ ನೀಡಿದ್ದು ಐದು ಕಾದಂಬರಿಗಳು, ನಾಲ್ಕು ಕಥಾ ಸಂಗ್ರಹಗಳು ಜತೆಗೆ 'ಸಂಗ್ರಹ ಭಾರತಾಯಣ'ವೆಂಬ ವಿಡಂಬನೆಯೊಂದನ್ನು.*

*'ಬಂಡಾಯ'(ಅವರ ಐದನೆಯ ಕಾದಂಬರಿ)ದ ಕುರಿತು ಡಾ.ಶ್ರೀನಿವಾಸ ಹಾವನೂರರು, ಹೀಗೆ ಅಭಿಪ್ರಾಯಪಡುತ್ತಾರೆ: ''..ಮುಂಬಯಿ ವಾಸಿಗಳಾದ ಬಲ್ಲಾಳರ ಕೃತಿಗಳಲ್ಲಿ ಈ ಮಹಾನಗರದ ಜಟಿಲ ಹಾಗೂ ಸಂಕೀರ್ಣ ಜೀವನದ ಪಡಿನೆಳಲು ಬಂದಿರುವುದು ಸಹಜವೇ.... ಈ ಬೃಹತ್ ನಗರದ ಹಲವಾರು ರೌದ್ರ ಮುಖಗಳಲ್ಲಿ ಕಾರ್ಮಿಕ ಜೀವನವು ಹೆಚ್ಚು ಪ್ರಖರವಾದದ್ದು. ಕಾರ್ಮಿಕ-ಮಾಲಿಕರ ಇತ್ತೀಚಿನ ಸಂಬಂಧವು ವಿಚಿತ್ರ-ವಿಶಿಷ್ಟ ಸ್ವರೂಪವನ್ನು ಪಡೆದಿದ್ದು, ಪರಿಚಿತ ವ್ಯವಸ್ಥೆಯನ್ನೇ ಬುಡಮೇಲು ಮಾಡಬೇಕು ಎನ್ನುವ ಬಂಡಾಯ ಪ್ರವೃತ್ತಿ; ಆ ಪ್ರವೃತ್ತಿಯಲ್ಲಿ ಅಡಗಿರುವ ಹಿಂಸೆ; ಹಿಂಸೆಯೇ ಮೂಲವಾಗಿ ಸೃಷ್ಟಿಯಾಗುವ ವ್ಯವಸ್ಥೆಯು ರೂಢಿಸಿಕೊಳ್ಳಬೇಕಾದ ಹಿಂಸೆ-ಇದೆಲ್ಲ ಮನಕಲಕುವಂತೆ ಚಿತ್ರಿತವಾಗಿದೆ 'ಬಂಡಾಯ'ದಲ್ಲಿ. ಈಚಿನ ಕಾರ್ಮಿಕ ಸಮಸ್ಯೆಯ ಮರ್ಮವನ್ನೇ ಭೇದಿಸುವಂತಿರುವ ಈ ಬಗೆಯ ಕಾದಂಬರಿ, ಮುಂಬಯಿಯ ಇತರ ಭಾಷಾ ಕಾದಂಬರಿಕಾರರಿಂದ ಇದುವರೆಗೆ ಹೊರಬಂದಿಲ್ಲ.''*

★

*ಇದು 'ಬಂಡಾಯ' ಕಾದಂಬರಿಯ ಸಂಗ್ರಹದ ಮೊದಲ ಕಂತು.*

## ಭಾಗ ಒಂದು
## ಸಂದೇಹ

ಕಟ್ಟಡದ ಹದಿನೆಂಟನೆಯ ಮಾಳಿಗೆಗೆ ಗೋಡೆಗಳೇ ಇಲ್ಲ. ಎಲ್ಲ ತೆರೆದು ತೋರಿಸುವಂತಿದ್ದ ಗಾಜಿನ ಬಾಗಿಲುಗಳೇ ದೃಷ್ಟಿ ಪ್ರಶಾಂತವಾದ ಅರಬ್ಬೀ ಸಮುದ್ರವನ್ನೇ ನೋಡುತ್ತ, ಅದರೊಂದಿಗೆ ಬೆರೆಯುವಾಗ, ಮೇಲೆ, ಬದಿಗೆ, ಉದ್ದಗಲಕ್ಕೆ ಶೂನ್ಯದೊಂದಿಗೆ ಬೆರೆತಂಥ ಅನುಭವ. ಬದಿಯಲ್ಲಿ ಚುಕ್ಕೆಗಳಂತೆ ಕಾಣುವ 'ಕಫ್ ಪೆರೇಡ್'ನ ಸಾಲು ಸಾಲು ಕಟ್ಟಡಗಳನ್ನು ನೋಡುವಾಗ, ಕೆಳಗೆ ಸಮುದ್ರ, ಕಾಣುವುದಿಲ್ಲ, ಬುಸುಗುಡುವುದಿಲ್ಲ. ಚುಕ್ಕೆಯೆ ಬೆಳೆಯುತ್ತ ವಿಸ್ತಾರವಾಗುತ್ತ ನೀಲಿ, ಕಪ್ಪು, ಕಡುವರ್ಣಗಳೆಲ್ಲ ಒಂದೇ ಬಣ್ಣವಾಗಿ, ಅಂಥ ಬಣ್ಣ ಆಕಾಶವಾಗಿ, ಆಕಾಶವೇ ಸಾಗರವಾಗಿ ಎಲ್ಲ ಶೂನ್ಯವಾಗಿ ಕಾಣುತ್ತಿರುವಾಗ-

ಒಮ್ಮಿಂದೊಮ್ಮೆಗೆ ಯಾಮಿನಿಯ ನೆನಪೇಕೆ ಆಗುತ್ತಿದೆ?

'ಹಾರ್ನಿಮನ್' ವೃತ್ತದ ತೋಟದಲ್ಲಿ ಕೆಲವೆಡೆ ಒಣಗಿದ್ದ, ಕೆಲವೆಡೆ ಹುಲುಸಾಗಿ ಬೆಳೆದಿದ್ದ ಗರಿಕೆ ಹುಲ್ಲಿನ ಹಾಸಿಗೆಯಲ್ಲಿ ಕುಳಿತು ಅನತಿ ದೂರದಲ್ಲಿ ಮಲಗಿರುವ ಕುಷ್ಠರೋಗಿಯೊಬ್ಬನನ್ನು ನೋಡುತ್ತ, ಅವನು ಸತ್ತಿದ್ದರೆ ವಾಸಿ ಎನ್ನುವ ಮನಸ್ಸಿನ ಚಡಪಡಿಕೆಯನ್ನು ಹತ್ತಿಕ್ಕುತ್ತ, ಪಕ್ಕದಲ್ಲೇ ಕಾಣುವ 'ಟೌನ್‌ಹಾಲ್'ನ ಪಾವಟಿಗೆಗಳ ಕಡೆ ನೋಡುವಾಗ ಹೆಗ

ಲಗೆ ಒಂದು ಕೈ ಚೀಲವನ್ನು ಜೋತು ಹಾಕಿಕೊಂಡು, ನಿಧಾನವಾಗಿ ಪಾವಟಿಗೆಗಳನ್ನಿಳಿಯುತ್ತ ಯಾಮಿನಿ ಬರುತ್ತಾಳೆ. ಉಟ್ಟಿರುವುದು ಕೆಂಪು ಜರತಾರೀ ಪೀತಾಂಬರ.

ವೃತ್ತಗಳ ಸುತ್ತ ವರ್ತುಲಾಕಾರದ ದಾರಿಯಲ್ಲಿ ಅನಂತ ವೃತ್ತಗಳನ್ನೆ ನಿರ್ಮಿಸುವಂತೆ ಕಾಣುವ ಕಾರುಗಳು, ಬಸ್ಸುಗಳು. ಹಲವಾರು ಬಳಸುದಾರಿಯಲ್ಲಿ, ಹಲವು ಕಡೆ ಸಾಗುವ ವಾಹನಗಳ ಗತಿಯೊಂದಿಗೆ ದೃಷ್ಟಿ ಬೆರೆಯುವಾಗ ಯಾಮಿನಿ ಒಮ್ಮಿಂದೊಮ್ಮೆಗೆ ಮರೆಯಾಗಿಬಿಡುತ್ತಾಳೆ. ಪುನಃ ಕುಷ್ಠರೋಗಿ ಕೊಳೆತ ಕೈ ಬೆರಳಲ್ಲೆ ಕಡಲೆ ಕಾಯಿಯನ್ನೆತ್ತಿಕೊಂಡು ಕೆಮ್ಮುವ ಬಾಯಿಗೆ ತುರುಕಿ ತಿನ್ನುವಾಗ, ಒಮ್ಮಿಂದೊಮ್ಮೆಗೆ ಪ್ರತ್ಯಕ್ಷಳಾದಂತೆ ಯಾಮಿನಿ ಕಾಣಿಸಿಕೊಳ್ಳುತ್ತಾಳೆ. ಈಗ ಜರತಾರಿ ಪೀತಾಂಬರವಿಲ್ಲ, ಮಾಸಿದ ಬಟ್ಟೆಯೂ ಇಲ್ಲ. ಈಗ ಆಕೆ ತೊಟ್ಟಿದ್ದುದು ಫ್ಲಾರೆನ್ಸ್ ನೈಟಿಂಗೇಲ್ ಸಮವಸ್ತ್ರ. ಕುಷ್ಠರೋಗಿಯ ಕೊಳೆತ ಬೆರಳುಗಳನ್ನು ತೊಳೆದು ಒರೆಸಿ, ಆತ ಕೊಂಡ ಕಡಲೆಕಾಯಿಗಳನ್ನು ಆತನ ಬಾಯಿಗೆ ತುರುಕಿಸುವಾಗ ಹಸಿವು ಹಿಂಗುವ ತೃಪ್ತಿಯ ಭಾವ ಅವನಿಗೆ.

ಅಲ್ಲಿ ಯಾಮಿನಿಯಿಲ್ಲ.

ಒಮ್ಮಿಂದೊಮ್ಮೆಗೆ ಇಡಿಯ ಹಾರ್ನಿಮನ್ ವೃತ್ತವೇ ಜನಸಾಗರವಾಗಿ ಮಾರ್ಪಡುತ್ತದೆ. ಅಕ್ಕಪಕ್ಕದಲ್ಲಿರುವ ಎಲ್ಲ ಕಟ್ಟಡಗಳೂ ಕಾರಿಕೊಳ್ಳುವಂತಿರುವ ಜನ ಸಮುದಾಯ, ಬೀದಿಗಳನ್ನು, ತೋಟಗಳನ್ನು, ಖಾನಾವಳಿಗಳನ್ನು ಇರುವೆಗಳಂತೆ ಮುತ್ತಿಕೊಳ್ಳುತ್ತದೆ. ದುಡಿಮೆಯ ಬೆವರನ್ನು ಟೆರಿಲಿನ್ ಬಟ್ಟೆಗಳಿಗೆ ಅಂಟಿಸಿಕೊಂಡು ಒದ್ದಾಡುತ್ತಿರುವ ಜನ, ಹೊರಗೆ ಸುಡುವ ಬಿಸಿಲೇ ಆದರೂ ದೇವದಾರು ಮರದ ನೆರಳಿನಡಿ ತಂಪಿದೆಯೆಂಬ ಭ್ರಮೆಯಿದೆ.

ಲಂಚ್ ಬಿಡುವು... ಸೆಂಟ್ರಲ್ ಬಿಸಿನೆಸ್ ಡಿಸ್ಟ್ರಿಕ್ಟ್!

ಹುಲ್ಲಿನ ಹಾಸಿಗೆ... ದೇವದಾರು ಮರದ ನೆರಳು... ಸುಖವಾದ ನಿದ್ರೆ. ಅತ್ತ ಇತ್ತ ನೊಣಗಳಂತೆ ಜನ ಮುತ್ತಿಕೊಳ್ಳುವಾಗಲೂ ಏಳಲು ಮನಸ್ಸಾಗುವುದಿಲ್ಲ. ಕತ್ತು ಕೊಂಕಿಸಿ ನೋಡುವಾಗ ಶಹರಕ್ಕೇ ಶಿಖರದಂತೆ ಕಾಣಿಸಬೇಕು ಎಂದು ಮುಗಿಲು ಮುಟ್ಟಲು ಧಾವಿಸುತ್ತಿರುವ 'ಸ್ಟಾಕ್ ಎಕ್ಸ್‌ಚೇಂಜ್' ಕಟ್ಟಡ ಎದ್ದು ಕಾಣುತ್ತದೆ. ಪಾತಾಳದ ಒಂಡೆಯನ್ನೇ ಮೆಟ್ಟಿ, ಕುಟ್ಟಿ ಮೇಲೆದ್ದು, ಭೂಮಿ ವ್ಯೋಮಗಳ ಸಂಬಂಧದ ಸೇತುವೆಯಾಗಿ ಶಹರದ ವ್ಯವಹಾರವನ್ನೆಲ್ಲಾ ಕಬಳಿಸಿ ನಿಂತಂಥ

'ಬಕಾಸುರ' ಎನ್ನುವ ಮನಸ್ಸಾಗುತ್ತದೆ.

'ತ್ರಿವಿಕ್ರಮ' ಎಂದು ಯಾಮಿನಿ ಹೇಳುತ್ತಾಳೆ ಕಿಲಕಿಲನೆ ನಗುತ್ತಾ....

ಯಾಮಿನಿ ನಗುವಾಗ 'ಡೈನಮೈಟ್' ನೆನಪಾಗುವುದಿಲ್ಲ. ಪ್ರಶಾಂತವಾದ ಸಾಗರ ಹಕ್ಕಿ... ಹೂ.... ಯಾವುದನ್ನೂ ಹೆಸರಿಡಲು ಸಾಧ್ಯವಾಗದಂತೆ, ಎಲ್ಲ ಒಂದಕ್ಕೊಂದು ಹೊಂದಿಕೊಂಡುಬಿಡುವಾಗ, ಎದೆ ಮಿದುವಾದಂತೆ ಭಾಸವಾದಾಗ, ಎದೆಯ ಮೇಲೆ 'ಬುಲ್‌ಡೋಜರ್' ಎಳೆದರೆ ಒಳ್ಳೆಯದಿತ್ತು ಎಂದು ಒಮ್ಮಿಂದೊಮ್ಮೆಗೆ ತೋರುವಾಗ,

ಬಳಿಯಲ್ಲಿ ಯಾಮಿನಿ ಇರುವುದಿಲ್ಲ...

ಬಾಂದ್ರಾದಲ್ಲಿ ಒಮ್ಮೆ ಹಳೆಯ ಕಸಾಯಿಖಾನೆಯನ್ನು ಕೆಡಹುವಾಗ, ಅದರ ಬಳಿಯಲ್ಲೆ ಇದ್ದ ಸಾವಿರ ಜೋಪಡಿಗಳನ್ನು ನಿರ್ನಾಮ ಮಾಡಲೆಂದು 'ಬುಲ್‌ಡೋಜರ್' ಕೆಲಸ ಮಾಡುತ್ತಿತ್ತು. ಚಿಂದಿ ಬಟ್ಟೆ, ಗೋಣಿ, ರಟ್ಟು, ಹರಿದ ಟಾರ್ಪಲಿನ್, ಹಳೆಯ [illegible]ಳೆಯ ಬಟ್ಟೆ, ಬಿದಿರು, ಕೋಲು, ಒಡೆದ [illegible]ತು, ಇಂಥವುಗಳ ಮನೆ... [illegible]ಳಿಯಲ್ಲೇ [illegible], ಮೂತ್ರ... ಎಲ್ಲವನ್ನೂ ನೆಲಸಮ ಮಾಡುತ್ತಾ 'ಬುಲ್‌ಡೋಜರ್' ಕೆಲಸ [illegible]ಡುತ್ತಿದ್ದಾಗ... ಪಕ್ಕದಲ್ಲಿ ಲಂಬೋದರ ಮಕ್ಕಳನ್ನು ಎದೆಗವಚಿಕೊಂಡು, ಅಳುತ್ತ ನಿಂತ ಅಳುಬುರುಕಿ ಹೆಂಗಸರನ್ನೂ, ಅಸಹಾ

ಯಕ್ಷಿಣಿಯಂತೆ ಕೈಕಟ್ಟಿ ನಿಂತ ಗಂಡಸರನ್ನೂ ನೋಡುವಾಗ, ವಿಲಕ್ಷಣ ಆನಂದವಾಗಿತ್ತು... ಆ 'ಬುಲ್‌ಡೋಜರ್'ಗಳ ಗತಿ ಬಾಂದ್ರಾದ ಕಸಾಯಿಖಾನೆಗೆ, ಪಕ್ಕದ ಜೋಪಡಿಗಳಿಗಷ್ಟೇ ಸೀಮಿತವಾಗಿರುವುದಿಲ್ಲ. ಇಡಿಯ ಶಹರಕ್ಕೇ ವ್ಯಾಪಿಸಲಿದೆ, ವ್ಯಾಪಿಸುತ್ತಿದೆ. ಆಗ 'ಬುಲ್‌ಡೋಜರ್' ನೆಲಸಮ ಮಾಡುವುದು, ಇಡಿಯ ಶಹರದ ವ್ಯವಸ್ಥೆಯನ್ನೆ... ಎಂತಲೇ ವಿಚಿತ್ರ ಆನಂದ. ಹಿಂದೆ, ಎಷ್ಟೋ ವರ್ಷಗಳ ಹಿಂದೆ ಗಿರಿಗಾಂವ್‌ನ ಖೇತ್‌ವಾಡಿಯ ಕಟ್ಟಡವೊಂದರ ಕೆಳಮಾಳಿಗೆಯಲ್ಲಿ 'ನಮ್ಮೆಲ್ಲರ ಜತೆಗಿರಲು ನಿನಗೆ ಅರ್ಹತೆಯಿದೆ' ಎಂಬ ಪ್ರಮಾಣ ಪತ್ರ ದೊರಕಿಸಿಕೊಂಡಾಗ, ಅನುಭವಿಸಿದ ವಿಚಿತ್ರ ಆನಂದ.

ಹಾಗೆ ಎಲ್ಲ ನೆಲಸಮವಾಗುವಾಗ...

'ರಾಜೂ... 'ವಾಸಾಂಸಿ ಜೀರ್ಣಾನಿ ಯಥಾ' ಎಂದು ಯಾಮಿನಿ ನಕ್ಕಿದ್ದಳು. 'ನವಾನಿ ಗೃಹ್ಣಾತಿ' ಎನ್ನುವುದಿಲ್ಲ... ''ಬಾಂದ್ರಾದಲ್ಲಿದ್ದ ಜೋಪಡಿಗಳು ನೆಲಸಮವಾದರೆ, ಗೋರೆಗಾಂವ್‌ನಲ್ಲಿ ಅಂಥವೇ ಬೇರೆ ಜೋಪಡಿಗಳು ಹುಟ್ಟಿಕೊಳ್ಳುತ್ತವೆ... ಇಲ್ಲಿ ನಿಂತು ಯಾವ ಪ್ರಯೋಜನವೂ ಇಲ್ಲ, ಬಾ.''

ಆಗ 'ಬುಲ್‌ಡೋಜರ್' ಕಾಣಿಸುವುದಿಲ್ಲ. ಆ ಕ್ಷಣದಲ್ಲಿ ತುಸುವೆ ಭುಜಕ್ಕೆ ಆತುಕೊಂಡಂತೆ ನಿಂತ ಯಾಮಿನಿ, ಎಲ್ಲ ಸತ್ಯಗಳ ಪ್ರತಿನಿಧಿಯಾಗಿಬಿಡುತ್ತಾಳೆ.

ನರಿಮಾನ್ ಪೈಂಟನ್ ಆ ಕಟ್ಟಡದ ಹದಿನೆಂಟನೆಯ ಮಾಳಿಗೆಯನ್ನೇರುವಾಗ ಕಾಲು ಸೋಲುವುದಿಲ್ಲ. ಆ ಗಗನಚುಂಬಿಯ ಅಂತರಾಳದಲ್ಲಿ ಬಿಡುವಿರದಂತೆ ಮೇಲೆ ಕೆಳಗೆ ಧಾವಿಸುತ್ತಲೇ ಇರುವ ದೈತ್ಯಾಕಾರದ 'ಲಿಫ್ಟ್' ಯಂತ್ರಶಕ್ತಿಯ ದೈತ್ಯಸಾಹಸವನ್ನು ಪ್ರದರ್ಶನಕ್ಕಿಡುವಂತೆ ಮುಚ್ಚಿ, ತೆರೆದು, ಬಂದವರನ್ನೆಲ್ಲ ಕಬಳಿಸಿ ನಿಂತ ಬಕಾಸುರನಾಗಿಯೂ ಗುಂಡಿಯ ಸಂಜ್ಞೆಗೆ ತಪ್ಪಿದಾಗ ಮಣಿದು ಬೇಕೆಂದಲ್ಲಿಗೆ ಒಯ್ಯುತ್ತಿದೆ... ಹತ್ತು, ಹದಿನೆರಡು, ಹದಿನಾಲ್ಕು... ಆದರೆ ಸಂಜ್ಞೆ ತಪ್ಪಿದಾಗ ಗತಿಯೇ ಬದಲಾಗುತ್ತದೆ... ಗತಿ ತಪ್ಪಿದೆಯೇನೋ ಎಂಬಂತೆ ಸಂದೇಹ ಮೊಳೆತಾಗ, ಆ ಪಂಜರದೊಳಗೆ, ಬೇರೆ ಯಾರೂ ಇರದೆ, ಪಥಭ್ರಾಂತನಂತೆ ಒಬ್ಬನೇ ಮೇಲೆ - ಕೆಳಗೆ ಓಡಾಡುವಾಗ, ಉಸಿರುಕಟ್ಟುವ ಭಯ. ಯಾಮಿನೀ ಎಂದು ಕಿರುಚಬೇಕೆಂದು ತೋರುವಾಗ, ತಪ್ಪಿ ಒತ್ತಿದ ಗುಂಡಿಯ ಸಂಜ್ಞೆಗೆ ಮಣಿದು ಯಾವುದೋ ಮಹಡಿಯ ಬಾಗಿಲು ತೆರೆದುಕೊಳ್ಳುವಾಗ...

ಸಿಮೆಂಟ್, ಉಕ್ಕು, ಯಂತ್ರೋಪಕರಣಗಳು, ವಾಹನ, ಬಟ್ಟೆ, ವಿದ್ಯುತ್... ಒಂದೇ ವ್ಯವಸ್ಥೆಯ ಸಾವಿರ ಮುಖಗಳು ಗಾಜಿನ ಗೋಡೆ ಬಾಗಿಲುಗಳು ಪಾರದರ್ಶಕವೆನಿಸುವಂತಿದ್ದರೂ ಬಳಿಯ ಸಮುದ್ರ ಕಾಣಿಸುವುದಿಲ್ಲ. 'ಕಫ್ ಪೆರೇಡ್'ನ ತುಂಬ ಈ ಕಟ್ಟಡಗಳ ಬದಿಯಲ್ಲೆ, ಕುರುಚಲು ಗಿಡ್ಡದಂತೆ ಹರಡಿಕೊಂಡ ಚಿಂದಿಬಟ್ಟೆ, ಗೋಣಿ, ರಟ್ಟು, ಕಾಗದಗಳ, ಸಾವಿರ ಜೋಪಡಿಗಳು ಕಾಣಿಸುವುದಿಲ್ಲ.

ಅಲ್ಲಿ ಕಾಣಿಸುವುದು ಗೋಡೆಗೆ, ಮಾಡಿಗೆ, ಆಸನ ವ್ಯವಸ್ಥೆಗೆ ಒಂದಕ್ಕೊಂದು ವ್ಯವಸ್ಥಿತವಾಗಿ ಹೊಂದಿಕೊಳ್ಳುವಂತೆ, ನೆಲದ ಮೇಲೆ ಹಾಸಿದ ಮಿದುವಾದ ರತ್ನಗಂಬಳಿ. ಅಲ್ಲಿ ಎಂಜಲಿಗೂ ಮಡಿಯಾದ ಸ್ಥಾನ. ಜಗಜಗಿಸುವ ಹಿತ್ತಾಳೆಯ ಪೀಕದಾನಿ. ಅಲ್ಲೇ ತೊಳೆದು ಜಗಜಗಿಸುವ ತಾಮ್ರದ ಹೂದಾನಿಯೊಂದಿತ್ತು. ಆ ಹೂದಾನಿಯ ತುಂಬ ಅಂದವಾದ ದೊಡ್ಡ ಕೆಂಪು - ರಕ್ತ ಕೆಂಪು - ಗುಲಾಬಿ ಹೂಗಳು. ಆ ಹೂಗಳಲ್ಲೆ ಮುಖ ಹುದುಗಿಸಿ, ಬೆನ್ನು ಹಾಕಿ ನಿಂತು... ನಿಧಾನವಾಗಿ ಮುಖ ತಿರುಗಿಸಿದಾಗ-

ಅದು ಯಾಮಿನಿಯಲ್ಲ.

''ಪ್ಲೀಸ್, ಇನ್ನೈದೇ ನಿಮಿಷಗಳಲ್ಲಿ ಅವರು ನಿಮ್ಮನ್ನು ನೋಡುತ್ತಾರೆ. ನಿನ್ನೆ

ಅಮೇರಿಕದಿಂದ ಬಂದ ಅಧಿಕಾರಿಯೊಬ್ಬ ರನ್ನು, ಅನಿವಾರ್ಯವಾಗಿ ನೋಡಬೇಕಾಗಿ ಬಂದುದರಿಂದ... ಈ ಕೆಂಪು ಗುಲಾಬಿ ಎಷ್ಟು ಚೆಂದವಾಗಿದೆಯಲ್ಲ! ಬ್ಯೂ....ಟಿಫುಲ್!''

ದಾರಿಯಲ್ಲಿ ನಡೆದೇ ಬರುತ್ತಿದ್ದಾಗ, ಆ ಜನಸಾಗರದಲ್ಲಿ ಬಿಂದುವಾಗಿ ತೇಲುತ್ತಿದ್ದಾಗ, ಚರ್ಚ್‌ಗೇಟಿಗೆ ಅನತಿ ದೂರದಲ್ಲೇ ಒಂದು ರೆಸ್ಟೊರಾದ ಮೇಲೊಂದು ಪ್ರತಿಕೃತಿಯಿತ್ತು. 'ಲಾಲ್ ಬಾವುಟಾ ಜಿಂದಾಬಾದ್, ರಾಜನ್ ಪಿತ್ರೆ ಮುರ್ದಾಬಾದ್...' ಎಂಬ ಬೊಬ್ಬೆಯನ್ನು ಕೇಳುತ್ತಾ, ಅನಾಮಧೇಯನಂತೆ ಮುಂದುವರಿಯುತ್ತಿದ್ದಾಗ,

ಜನರಲ್ ಇನ್ಶೂರೆನ್ಸ್ ಕಾರ್ಪರೇಶನ್ ಕಟ್ಟಡದ ಬಾಗಿಲಲ್ಲೇ ಹಲವಾರು ಸಹೋದ್ಯೋಗಿಗಳ ಮುಂದೆ ಎತ್ತರವಾದ ಮೆಟ್ಟಿಲಲ್ಲಿ ನಿಂತು ''ನಹೀ ಚಲೇಗಿ... ಏ ವಾಂಟ್ ಬೋನಸ್... ಲಾಲ್ ಬಾವುಟಾ ಜಿಂದಾಬಾದ್... ಪಹಲೇ ಬೋನಸ್ ಪೀಛೇ ಕಾಮ್'' ಎಂದು ಕೂಗುತ್ತಿದ್ದ ಹಸಿರು ಸೀರೆಯುಟ್ಟಲತ್ಥ ಮಹಿಳೆ. ತುಸು ಮುಂದೆ ಹೋಗುವಾಗ ಇನ್ಶೂರೆನ್ಸ್ ಸಾಮ್ರಾಜ್ಯದ ಅರಮನೆ 'ಯೋಗಕ್ಷೇಮ'ದ ಮುಂಬಾಗಿಲಲ್ಲೂ ಅದೇ ಬೊಬ್ಬೆ.

ಯಾಮಿನಿ ಕಿಲಕಿಲನೆ ನಗುತ್ತಿದ್ದಳು.

'ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ-' 'ಏ ವಾಂಟ ಬೋನಸ್'

ಥಾಣೆ - ಬೇಲಾಪುರ ಪಟ್ಟಿ ಪುನಃ ಕಾಣಿಸುತ್ತದೆ.

'ಕ್ರೀಂಚ್' ಎಂಬ ಶಬ್ದ ಬ್ರೇಕ್ ಬೀಳುವುದರೊಳಗಾಗಿ 'ಡಬ್ಬಲ್‌ಡೆಕ್ಕರ್' ಬಸ್ ಒಂದು ತಿರುವಲ್ಲಿ ವೇಗವಾಗಿ ಬರುತ್ತಿದ್ದ ಟ್ಯಾಕ್ಸಿಯೊಂದಕ್ಕೆ ಡಿಕ್ಕಿಹೊಡೆಯುವಾಗ ಯಾಕಾಗಿ ನಡುವೆ ಬಂದನೋ ಬಡಪಾಯಿ! ಆಂ ಎಂದು ಕೂಗಿದ ಸದ್ದು... ಬ್ರೇಕು. ಬಿದ್ದ ವ್ಯಕ್ತಿಯ ನಡು ಮುರಿದು ರಕ್ತದ ಮಡುವು... ಒಮ್ಮೆಗೇ ಸೇರಿದ ಸಾವಿರ ಜನರ ಗುಂಪು...

ಹೂದಾನಿ ಬಳಿಯಿದ್ದ ಯುವತಿಯ ಬಳಿಯಿದ್ದ ಮೇಜಿನ ಮೇಲೆ ಗೋಡೆಯಲ್ಲಿ ಕೆಂಪು ದೀಪವೊಂದು ಕಾಣಿಸಿಕೊಳ್ಳುತ್ತದೆ 'ಕ್ರೀಂ' ಎಂದು ಸದ್ದು ಮಾಡುತ್ತಾ....

''ಈಗ ನೀವು ಒಳಗೆ ಹೋಗಬಹುದು ಬನ್ನಿ,''

ಒಳಗೆ ಬಂದಾಗ ದೃಷ್ಟಿ ಸಮುದ್ರದೊಂದಿಗೆ ಬೆರೆಯುವಂತಿಲ್ಲ... ಕಿಟಕಿಗೆ ಅಡ್ಡವಾದ ಪರದೆ... ''ಬನ್ನಿ ಬನ್ನಿ, ಸ್ವಲ್ಪ ಕಾಯಿಸಿದೆ, ಕ್ಷಮಿಸಿ. ನಿನ್ನೆ ಬಂದ ಅಮೇರಿಕನ್ ಅಧಿಕಾರಿಯೊಬ್ಬರು...''

''ನನಗೆ ತಿಳಿದಿದೆ... ಹೊರಗಡೆ ಕುಳಿತಾಗಲೇ...''

''ತುಂಬಾ ಒಳ್ಳೆಯದೇ ಆಯಿತು. ನೋಡಿ ಮಿಸ್ಟರ್ ರಾಜೀವ್, ಎಷ್ಟೋ ಸಮಯದಿಂದ ನಿಮ್ಮನ್ನು ನೋಡಬೇಕು, ನಿಮ್ಮೊಡನೆ ಮಾತಾಡಬೇಕು ಎಂದು ಯೋಚಿಸುತ್ತಿದ್ದೆ. ಹೊರನೋಟಕ್ಕೆ ನಮ್ಮಿಬ್ಬರ ಸಂಬಂಧ ಬೇರೆ, ಬೇರೆ ಎಂದು ಕಾಣಬಹುದು. ನೀವೋ ಈ ಶಹರದ ಕಾರ್ಮಿಕವರ್ಗದ ಸಂಘಶಕ್ತಿಯ ಪ್ರತಿನಿಧಿ. ನಾವೋ, ಹೊಟ್ಟೆಯ ಪಾಡಿಗಾಗಿ ಒಂದು ಉದ್ಯಮಕ್ಷೇತ್ರದಲ್ಲಿ ಏನೋ ಕೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿರುವವರು. ಉದ್ಯಮಿಗಳು, ಕೆಲಸಗಾರರು, ಪರಸ್ಪರ ಹೋರಾಡಿಕೊಂಡೇ ಇರುವವರು ಎನ್ನುವ ತಿಳಿವಳಿಕೆ ಸಾಮಾನ್ಯ. ಆದರೆ ಮನುಷ್ಯ-ಮನುಷ್ಯನ ಸಂಬಂಧದ ನಡುವೆ ಕೃತ್ರಿಮ ಗೋಡೆಗಳೇಕೆ? ಎನ್ನುವವ ನಾನು.''

ಮಾತು ಅತಿಯಾಗಿ ಉರುಳುತ್ತಿದೆ. ರಾಜೀವನ ಮನಸ್ಸು ಚಿಂತಿಸುತ್ತಲೇ ಇದೆ. ಯಾವುದರಲ್ಲೆಲ್ಲ ವ್ಯವಹಾರ! 'ಕೆಮಿಕಲ್ಸ್', 'ಸಿಂಥೆಟಿಕ್‌ಫೈಬರ್ಸ್', 'ರಬ್ಬರ್' ಯಾಕೆ ಈ ಭೇಟಿ? ಮುಖ ಕಲ್ಲಿನಂತೆ. ಯಾವ ಭಾವವನ್ನೂ ಪ್ರಕಟಿಸುತ್ತಿಲ್ಲ..

"ನಿಮ್ಮ ಕಾಗದದ ಉದ್ದೇಶ ನನಗಿನ್ನೂ ಸ್ಪಷ್ಟವಾಗಿಲ್ಲ. ಇರಲಿ, ಮಿಸ್ಟರ್ ಶರ್ಮಾ, ಸ್ಪಷ್ಟ ಹೇಳಿ, ನಿಮ್ಮ ಯಾವ ಫ್ಯಾಕ್ಟರಿಯಲ್ಲಿ ತೊಂದರೆಯಾಗಿದೆಯೆಂದು ನನ್ನನ್ನು ಕರೆಸಿದ್ದೀರಿ?...." ಸತೀಶ ಶರ್ಮಾ ನಗತೊಡಗಿದ... ಮತ್ತನ್ನ ಕುರ್ಚಿಯಲ್ಲಿ ಮೈಚಾಚಿ,

"ನನ್ನ ಮಾತಿನ ಪ್ರಾಮಾಣಿಕತೆಯನ್ನು ನೀವು ಒಂದು ಕ್ಷಣವೂ ನಂಬಿಲ್ಲ. ನಾನು ಮೊದಲೇ ಕೇಳಿದೆ ಮನುಷ್ಯ ಮನುಷ್ಯನ ಸಂಬಂಧಗಳಲ್ಲಿ ಅಂತರ ಯಾಕೆ? ಎಂತ. ನಾನು ನಿಮ್ಮನ್ನು ಬರಹೇಳಿದ್ದು ಎರಡು ಕಾರಣಗಳಿಗಾಗಿ... ಒಂದು, ನಿಮ್ಮ ಪರಿಚಯ ಬೆಳೆಸಿ ಸ್ನೇಹಗಳಿಸಬೇಕು ಎಂದು. ಎರಡು, ನಾವು ಪನವೇಲ್‌ನಲ್ಲಿ ನಡೆಸಬೇಕೆಂದು ನಿಶ್ಚಯಿಸಿದ ಒಂದು ಅಪಾಂಗ ಮಕ್ಕಳ ಶುಶ್ರೂಷೆ ಮತ್ತು ಪುನರ್ವಸತಿ ಕೇಂದ್ರದ ಉದ್ಘಾಟನೆಗಾಗಿ... ನೀವು ಸಾಧ್ಯವಿಲ್ಲ ಎನ್ನಬೇಡಿ. ಇದು ಅವಸರದ ಆಮಂತ್ರಣವೇನಲ್ಲ, ನಿಮಗೆ ಬಿಡುವಿದ್ದಾಗ ತಿಳಿಸಿ, ಭಾನುವಾರವಾದರೂ ಸರಿಯೆ. ಅಲ್ಲಿಗೊಮ್ಮೆ ಬನ್ನಿ, ಆ ಮಕ್ಕಳನ್ನು ನೋಡಿ. ಸಮಾಜದ ಈ ದುರ್ದೈವಿ ಮಕ್ಕಳಿಗೆ ಏನಾದರೂ ಬೆಳಕು ಕಾಣುವುದಾದರೆ ಅದರಿಂದ ನಿಮಗೂ ಸಂತೋಷವಾಗಬಹುದು."

ಸತೀಶ ಕೈ ಮುಂದೆ ಮಾಡಿದ... ವಿದಾಯದ ಸೂಚನೆ...

ರಾಜೀವನ ಕೈಯೂ ಮುಂದೆ ಬಂತು..

"ಇಂಥವೆಲ್ಲ ನನ್ನ ಕಾರ್ಯಕ್ಷೇತ್ರದಿಂದಲೇ ಹೊರಗೆ... ಹಾಗೆಂದ ಮಾತ್ರಕ್ಕೆ ಅವಿನಯವೇ ನನ್ನ ಸ್ವಭಾವವೆಂದರ್ಥವಲ್ಲ. ನಿಮಗೆ ತೃಪ್ತಿ ಕೊಡುವ ಕೆಲಸದಿಂದ ನಾಲ್ಕು ಅಪಾಂಗ ಮಕ್ಕಳಿಗೆ ಒಳ್ಳೆಯದಾಗುವಂತಿದ್ದರೆ ಸಂತೋಷವೇ. ಇದಕ್ಕೆ ನನ್ನ ಸರ್ಟಿಫಿಕೇಟ್ ಅನಗತ್ಯ... ಆದರೂ ನೀವು ಸ್ನೇಹದಿಂದ ಕೇಳಿದ್ದೀರಿ. ನಿಮಗೆ [illegible]ಕೂಲವಾಗುವ ದಿನ ತಿಳಿಸಿ... ಬರಲು ಪ್ರಯತ್ನಿಸುತ್ತೇನೆ... ಬರಲೆ?"

ಸತೀಶ ಕೈ ಕುಲುಕಿ ನಕ್ಕ ನಡೆಯುತ್ತ ಹೊರಬಂದು ರಾಜೀವ ಆ ದೈತ್ಯಾಕಾರದ ಲಿಫ್ಟ್ ಸೇರುವವರೆಗೂ ನೋಡುತ್ತಲೇ ಇದ್ದ.

* *

ಬೆಡ್‌ರೂಮ್‌ಗೆ ಹೊಂದಿಕೊಂಡ ಬಾಲ್ಕನಿಯಲ್ಲಿ ಒಂದು ಕೈಯಲ್ಲಿ ಸಿಗರೇಟು ಹಿಡಿದು ನಿಂತೇ ಬೆಳಗಿನ ಕಾಫಿ ಹೀರುತ್ತ ಅನತಿ ದೂರದಲ್ಲೇ ಕಾಣುವ ಸಮುದ್ರದ ತುಂಡಿನ ಕಡೆ, ಶೂನ್ಯ ದೃಷ್ಟಿಯಿಂದ ನೋಡುತ್ತಾ ಒಳಗೆ ಇನ್ನೂ ಮಲಗಿಯೇ ಇರುವ ಲಕ್ಷ್ಮಿಯ ಗೂರಲು ಕೆಮ್ಮು ಹಿಂದಿನ ರಾತ್ರಿ ಕೊಟ್ಟ ಉಪದ್ರ ಈಗ ಇಲ್ಲವಲ್ಲ ಎಂಬ ಸಮಾಧಾನ ಮನಸ್ಸಿನಲ್ಲಿ ಮೂಡಿದಾಗ, ದಿನವಿಡೀ ಮಾಡಬೇಕಾದ ಕೆಲಸಗಳ ನೆನಪಿನ ಪಟ್ಟಿ ಮಾಡಬೇಕು ಎಂಬ ಯೋಚನೆ ಒಮ್ಮೆಗೇ ಕಾಡಿದಾಗ, ದೂರದಲ್ಲಿ ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಾ ನಡೆಯುತ್ತಿದ್ದ ಆಕೃತಿ ಪಪ್ಪನದೆಂದು ಖಚಿತವಾದಾಗ, ಅವರು ಬೆಳಗಿನ ವಾಕಿಂಗ್ ಮುಗಿಸಿ ದಂಟೆಯೂರಿಕೊಂಡೇ 'ಸಾಗರ ದರ್ಶನ'ದ ಪ್ರಾಂಗಣದ ಒಳಗೆ ಬರುತ್ತಿದ್ದಾಗ, ಸತೀಶನಿಗೆ ಒಮ್ಮಿಂದೊಮ್ಮೆಗೆ ರಾಜೀವನ ನೆನಪಾಯಿತು.

ಬಾಲ್ಕನಿಯ ಬದಿಯ ಕೋಣೆಯ ಬಾಗಿಲು ತೆರೆದು ನೋಡಿದಾಗ ಸತೀಶನ ಕಣ್ಣೆದುರಿಗೆ ಎರಡು ಮೊಲಗಳು ಓಡಿ ಹೋದವು. ಕೋಣೆಯ ತುಂಬೆಲ್ಲ ಅವನು ಸಾಕಿದ ಪ್ರೀತಿಯ ಪ್ರಾಣಿಗಳು, ಪಕ್ಷಿಗಳು.... ಮೊಲ, ಅಳಿಲು, ಮೈನಾ, ಪಾರಿವಾಳ. ಗುಬ್ಬಚ್ಚಿಯ ಗೂಡು ಕೂಡ..... ಅವುಗಳಿಗೆ ಬೇಕಾದ ನಿಸರ್ಗಸಹಜ ಪರಿಸರವನ್ನು ಸೃಷ್ಟಿಸುವಂತೆ, ಅಲ್ಲಲ್ಲಿ ತೆಂಗಿನ ಕಾಂಡ, ಪೊಟರೆಗಳು, ಗುಹೆಯನ್ನೇ ಹೋಲುವ ಬುಟ್ಟಿ, ತೊಟ್ಟಿ, ಮಳಲು....

ಬಾಲ್ಕನಿಯಿಂದ ಡ್ರಾಯಿಂಗ್ ರೂಮಿನತ್ತ ಬಂದಾಗ ಅದು 'ಬಿಕೋ' ಎನ್ನುತ್ತಿದ್ದಂತೆ



ಭಾಸವಾಯಿತು. ನಯನಾ ಎದ್ದಿರಲಿಲ್ಲ. ಆ ಕಾರಣ ಡ್ರಾಯಿಂಗ್ ರೂಮ್‌ನಲ್ಲೂ ಸದ್ದಿಲ್ಲ. ಮೂಲೆಯಲ್ಲಿದ್ದ 'ಬಾರ್' ತನ್ನನ್ನೇ ಅಣಕಿಸಿ ನಗುವಂತಿತ್ತು.

ನಾಗೇಶ ಶರ್ಮಾ ಒಳಗೆ ಬಂದವರು ರಾತ್ರಿಯ ಪೋಷಾಕಿನಲ್ಲೇ ಬಾಲ್ಕನಿಯಲ್ಲಿ ನಿಂತಿದ್ದ ಮಗನನ್ನು ನೋಡಿದರು. ತಾನು ಬರುವುದನ್ನೇ ಕಾಯುತ್ತ ನಿಂತಂತೆ ತೋರುತ್ತಿದ್ದ ಮಗನನ್ನು ಕಂಡಾಗ ವಿಲಕ್ಷಣ ತೃಪ್ತಿಯ ಅನುಭವ.

ಇಂದು ಸತೀಶ ತಾನೇ ಏನನ್ನೋ ಹೇಳಲು ಬಯಸುತ್ತಾನೆ ಎಂದು ಕಂಡುಕೊಂಡ ಶರ್ಮಾ ಮಗ ನಿಂತಿದ್ದಲ್ಲಿಗೆ ಹೆಜ್ಜೆಯಿಡುತ್ತಾ ಬಂದಾಗ ಸತೀಶ ಹೇಳಿದ...

"ಪಪ್ಪಾ, ನಿನ್ನೆ ರಾಜೀವ್ ಬಂದಿದ್ದ ಆಫೀಸಿಗೆ. ಅವನಿಗೆ ಸೂಕ್ಷ್ಮವಾಗಿ ಎಲ್ಲವನ್ನೂ ವಿವರಿಸಿದೆ. 'ಓ ಯೆಸ್, ರೆಡಿ' ಎಂದ. ಪಪ್ಪಾ, ಪ್ರಾಯಶಃ ಅವನಿಗೆ ಥಾಣೆ - ಬೇಲಾಪುರ ಬೆಲ್ಟ್‌ನ ನಮ್ಮ ರಬ್ಬರ್ ಯೂನಿಟ್ ಮತ್ತು 'ಹ್ಯಾಂಡ್ ಟೂಲ್ಸ್' ಯೂನಿಟ್‌ಗಳ ಪರಿಚಯವಿದೆ. ಆದರೆ ಶರ್ಮಾ ಆ್ಯಂಡ್ ಸನ್ಸ್ ಎಂಬುದು ಗೊಂದಲಕ್ಕೀಡು ಮಾಡಿರಬೇಕು."

ನರಿಮಾನ್ ಪೈಂಟನ ತನ್ನ ಆಫೀಸಿನಲ್ಲಿ ಇದಿರಿನ ಕುರ್ಚಿಯಲ್ಲಿ ಕುಳಿತ ರಾಜೀವನನ್ನು ನೋಡುವಾಗ, ತನ್ನನ್ನು ಅಳೆಯುವಂತೆ ಕಾಣುತ್ತಿದ್ದ ಎರಡು ಕಣ್ಣುಗಳಲ್ಲಿ ಬೆಂಕಿ ಉರಿಯುವುದೆಂದೇ ಭಾಸವಾಗಿತ್ತು. ಪಪ್ಪನದೇ ಒತ್ತಾಯ.... " ನಿನಗೆ ಗೊತ್ತಿಲ್ಲ ಸತೀಶ, ರಾಜೀವನ ಸ್ನೇಹ ನಮಗಿದ್ದರೆ ಇನ್ನೈದು ವರ್ಷ ನಮಗೆ ನಿಶ್ಚಿಂತೆ. ಯಾವ ಕೆಲಸಗಾರರೂ ತೊಂದರೆ ಕೊಡುವುದಿಲ್ಲ. ತೊಂದರೆ ಕೊಡುವಂತೆ ಚುಚ್ಚಿಕೊಡುವುದಿಲ್ಲ. ಬಾಪೂ ದೇಶಪಾಂಡೆ ಕೂಡ. ಅವನು ಮನಸ್ಸು ಮಾಡಿದರೆ ಮಂತ್ರಿಗಳನ್ನು ಉರುಳಿಸಬಲ್ಲ... ಮುಂಬಯಿಯನ್ನೇ ನಡುಗಿಸಬಲ್ಲ." ಎಂದಿದ್ದರು.

"ಪನ್‌ವೇಲ್‌ಗೆ ಕರೆದಾಗ ಬರುತ್ತಾನಂತೆ. ಮೂಕ ಹೆಳವ ಮಕ್ಕಳನ್ನು ನೋಡಲು. ಪಕ್ಕದಲ್ಲಿ ನಮ್ಮ ಎರಡು ಕೋಟಿ ರೂಪಾಯಿಯ ಅಮೇರಿಕನ್ 'ಕಲಾಬೋರೇಶನ್'ನ ಫೈನ್ ಕೆಮಿಕಲ್ಸ್ ಫ್ಯಾಕ್ಟರಿ ಬರುವುದು ತಿಳಿದರೆ ಅವನು ಮುಂಬಯಿ ಬಿಟ್ಟು ಓಡಿಹೋದಾನು. ಪಪ್ಪಾ, ನಿಮಗೊಂದು ಬೇಡವಾದ ಹುಚ್ಚು. ಒಂದು ಡಜನ್ ಅಪಾಂಗ ಮಕ್ಕಳಿಗೆ ಆಶ್ರಯ ಕೊಟ್ಟರೆ, ಆ ಸಮಸ್ಯೆ ಮುಗಿಯಿತೆ? ಅವರನ್ನು ನೋಡಿಕೊಳ್ಳಲು ಸ್ಟಾಫ್ ಬೇರೆ. ಅವರಿಗೆ ಸಂಬಳ ಸಾರಿಗೆ... ತುಟ್ಟಿ ಭತ್ಯೆ... ನಂತರ ಅವರೂ ಒಂದು ದಿನ, 'ಲಾಲ್ ಬಾವುಟಾ ಜಿಂದಾಬಾದ್' ಎಂದರೂ ಸರಿಯೆ."

ಶರ್ಮಾ ಮಗನ ಮಾತಿನ ವೈಖರಿಯನ್ನೇ ನೋಡುತ್ತಾ ಮೌನವಾಗಿ ಕುಳಿತಿದ್ದರು. ಸತೀಶ, ತಂದೆಯ ಎದುರು ಸಾಕಷ್ಟು ವಾದ-ಪ್ರತಿವಾದ ಮಾಡುತ್ತಿದ್ದನಾದರೂ ಅವರ ಇಚ್ಛೆಯ ವಿರುದ್ಧ ಎಂದೂ ಹಟವನ್ನೂ ಸಾಧಿಸಿರಲಿಲ್ಲ... ಎಂದೂ...

"ಸತೀಶ, ನಿನ್ನ ಪಪ್ಪ ಸರಿಯಾದ ಉದ್ದೇಶವಿಲ್ಲದೆ ಯಾವ ಕೆಲಸವನ್ನೂ ಮಾಡುವುದಿಲ್ಲ. ಅದು ನಿನಗೆ ಗೊತ್ತು... ಭಿವಂಡಿ

ವಾಲಾ ಚಾಳ್‌ನ ಎರಡು ಕೋಣೆಗಳಿಂದ ಕಾರ್ಮೈಕೆಲ್ ರಸ್ತೆಯ ತನಕ ಹೆಜ್ಜೆಯಿಟ್ಟು ಬಂದದ್ದೂ ಹಾಗೇನೇ...''

ಸತೀಶನಿಗೆ ಪಪ್ಪನ ಉತ್ತರ ಇದೇ ರೀತಿ ಇರಬಹುದೆಂದು ತಿಳಿದಿತ್ತು. ಪಪ್ಪ ಹಿಂದೆ ಎಷ್ಟೇ ಕಷ್ಟ ಅನುಭವಿಸಿದ್ದರೂ ಪಪ್ಪನೇ... ನಯನಾಗೆ ಕೂಡ. ಈಗ ಯಾಕೆ ಕಷ್ಟದ ನೆನಪು? ಶಿಖರವನ್ನೇರಿದ ಮೇಲೆ ನಿಸರ್ಗ ಯಾವಾಗಲೂ ರಮ್ಯವೆ. ಆಗ ದೃಷ್ಟಿ, ದಿಗಂತ ದೆಡೆಗೆ...ಸಾಗರದೆಡೆಗೆ.

''ನಿಮ್ಮಿಷ್ಟ ಪಪ್ಪಾ, ರಾಜೀವ ನಾವು ಕರೆದಾಗ ಬರುತ್ತಾನೆ. ಅಲ್ಲಿ ಉದ್ಘಾಟನಾ ನಾಟಕ ನಡೆಯಬೇಕಾದರೆ 'ಇಂಡಿಯನ್ ಎಕ್ಸ್‌ಪ್ರೆಸ್' ಕಂಟೆಗೂ ಕಮಲೇಶ್ ಪಾಂಡ್ಯಾಗೂ ತಿಳಿಸುತ್ತೇನೆ. ಟೇಪು ಕಟ್ ಮಾಡಲು ಬೆಳ್ಳಿಯ ಕತ್ತರಿ ಮಾಡಿಸಬೇಕೆ? ಕತ್ತರಿಯ ಬದಲು ಕುಡುಗೋಲು ಕೊಟ್ಟರೆ ರಾಜೀವನಿಗೆ ಸಂತೋಷವಾದೀತು. ಹ್ಯಾಮರ್ ಆ್ಯಂಡ್ ಸಿಕಲ್.''

ಆಗ ಶರ್ಮಾಗೆ ಒಮ್ಮಿಂದೊಮ್ಮೆಗೆ ಸಿಟ್ಟು ಬಂತು.

''ನಿನಗಿನ್ನೂ ಹುಡುಗಾಟಿಕೆಯೆ. ನಿನಗಿದೆಲ್ಲ ತಿಳಿಯೋದಿಲ್ಲ. ಯಾವುದಕ್ಕೂ ಮುಂಜಾಗ್ರತೆ ಒಳ್ಳೆಯದು. ರಾಜೀವ ಬರ್‍ತಾನೇಂತಂದ್ರೆ ಸಂತೋಷ. ಒಂದು ದಿನ ನಿಶ್ಚಯ ಮಾಡು. ಹತ್ತಾರು ಜನ ನಿನ್ನ ಸ್ನೇಹಿತರನ್ನೂ ಕರಿ. ಪಬ್ಲಿಸಿಟಿಯೂ ಆಗುತ್ತೆ. 'ಬದ್ರುದ್ದೀನ್ ಅಪಾಂಗ ಕೇಂದ್ರ' ಅಂತ ಬೋರ್ಡು....''

''ಏನು? ಬದ್ರುದ್ದೀನ್? ಪಪ್ಪಾ.... ರಾಮ, ಕೃಷ್ಣ, ಗೋವಿಂದಾಂತನ್ನೊ ನಿಮಗೆ, ಈ ಹೆಸ್ರು ಎಲ್ಲಿ ಸಿಕ್ತೂಂತೇನೆ?''

ಶರ್ಮಾರ ಮುಖದಲ್ಲಿ ಈಗ ತೆಳುವಾದ ನಗೆ ಕಾಣಿಸಿಕೊಂಡಿತು. ''ಅಷ್ಟು ಬೇಗ ಮರೆತು ಹೋಯ್ತೆ? ಸತೀಶ... ಒಂದು ಕಾಲಕ್ಕೆ ನಾನೂ ಒಂದು ಮದ್ದಿನಂಗಡೀಲಿ ದುಡಿತಾ ಇದ್ದೆ ಅನ್ನೋದು ಮರೆತೇ ಹೋಯ್ತೇನು? ಏನೋ ಕರ್ಮ ಬಲದಿಂದ, ಪುಣ್ಯ ವಿಶೇಷದಿಂದ ಆ ಅಂಗಡಿ ನನ್ನದೇ ಆಯ್ತು... ಆ ಮೇಲೆ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಇಲ್ಲೀ ತನಕ ಬಂದಿದ್ದೇನೆ. ಆ ಅಂಗಡಿ ಮಾಲಿಕ, ನನ್ನ ಯಜಮಾನನಾಗಿದ್ದ ಬದ್ರುದ್ದೀನ್ ನೆನಪು ಹೀಗಾದರೂ ಇರಲಿ ಅಂತ...''

''ಆ ಹೆಸರು ಬೇಡವೇ ಬೇಡ. ನಾನಂತೂ ಅಮ್ಮನ ಹೆಸರಿನಲ್ಲೇ ಬೋರ್ಡು ತಯಾರಿಸಲು ಹೇಳುತ್ತೇನೆ... 'ಕಲ್ಯಾಣಿ ಅಪಾಂಗ ಕಲ್ಯಾಣ ಕೇಂದ್ರ'.....''

''ಸತೀಶ್!'' ಎಂದರು ಶರ್ಮಾ.... ಅದು ಆಜ್ಞೆಯ ಗಡಸು ದನಿ. ''ಧೋಂಡೂ 'ಟೈಮ್ಸ್' ತಂದಿಟ್ಟಿದ್ದಾನೆ ನೋಡು...'' ಈ ವಿಚಾರ ಇನ್ನು ಬೇಡ ಎಂದರ್ಥ. ಸಾಮಾನ್ಯವಾಗಿ ಎಂದೂ ಉದ್ವೇಗಕ್ಕೊಳಗಾಗದ ಸತೀಶ ಅನಿರೀಕ್ಷಿತವಾಗಿ ತಾಯಿಯ ನೆನಪು ಮಾತಿನಲ್ಲಿ ಬಂದಾಗ ಒಂದು ಕ್ಷಣ ಭಾವನಾವಶನಾಗಿದ್ದ...

ಪತ್ರಿಕೆಯ ತಲೆ ಬರೆಹಗಳ ಮೇಲೆ ದೃಷ್ಟಿ ಹೊರಳಿಸುವ ಮೊದಲೇ ಪಕ್ಕದ ದಹಾನುಕರ ರಸ್ತೆಯ ಕಡೆ ದೃಷ್ಟಿ ಹೊರಳಿಸಿದಾಗ ಹೊರೆಗಟ್ಟಲೆ ಪುಸ್ತಕಗಳನ್ನು ಹಿಡಿದುಕೊಂಡು ಶಾಲೆಗೆ ಧಾವಿಸುತ್ತಿದ್ದ ಮಕ್ಕಳನ್ನು ನೋಡಿದಾಗ ಪುನಃ ತಾಯಿಯ ನೆನಪು...

ಅಮ್ಮನಿಗೆ ಆಕಸ್ಮಿಕವಾಗಿ ಬೆಂಕಿ ತಗುಲಿದ್ದೇ ಅಥವಾ ಆತ್ಮಹತ್ಯೆಯೇ? ಹೀಗೆಯೇ ಪುಸ್ತಕಗಳ ಹೊರೆಹೊತ್ತು ಒಂದು ಸಂಜೆ (ಕಿಂಗ್ ಜಾರ್ಜ್) ಹೈಸ್ಕೂಲಿನಿಂದ ಮನೆಗೆ ಬಂದಿದ್ದ ಸತೀಶನನ್ನು ಕೆ.ಇ.ಎಮ್. ಆಸ್ಪತ್ರೆಗೆ ಯಾರು ಕರೆದೊಯ್ದರು ಎನ್ನುವುದು ನೆನಪಿರಲಿಲ್ಲ. ಅಲ್ಲಿ ಕಂಡದ್ದು ನೋಡಲು ಸಾಧ್ಯವಾಗದಂಥ ವಿಕಾರವಾದ ಅಮ್ಮನ ದೇಹ... ಬೆಂಕಿಯಿಂದಾಗಿ ಸುಟ್ಟ ತಾಯಿ. ಎರಡು ಮಕ್ಕಳನ್ನು ಎರಡೂ ಕೈಯಲ್ಲಿ ತಬ್ಬಿಕೊಂಡು ಪಪ್ಪ, ಆ ವಿಕಾರವಾದ ದೇಹವನ್ನು ವಿಕಾರವಾದ ಮುಖವನ್ನು ನೆಟ್ಟ ನೋಟದಿಂದ ನೋಡಿದ್ದು

ನೆನಪು.... ಮತ್ತೆ ಎಲ್ಲ ಮರೆವಿನ ತೆರ... ಆದರೆ ಮನಸ್ಸಿನ ಆ ತೊಳಲಾಟ ಮಾಯವಾಗಿರಲೇ ಇಲ್ಲ... ಆಕಸ್ಮಿಕವೇ ಆತ್ಮಹತ್ಯೆಯೇ? ಯಾಕೆ? ಯಾಕಾಗಿ ಆತ್ಮಹತ್ಯೆ? ಪಪ್ಪನೆಂದರೆ ಜೀವ ಬಿಡುತ್ತಿದ್ದ ಅಮ್ಮ! ಎರಡು ಮುದ್ದಾದ ಮಕ್ಕಳು.... ದೆನ್ ವೈ?

ಲಕ್ಷ್ಮೀ ಬೆಡ್ ರೂಮಿನ ಬಾಗಿಲಿನಿಂದ ಬಾಲ್ಕನಿಗೆ ನಿಧಾನವಾಗಿ ಬರುತ್ತಿದ್ದಳು. ಕೈಯಲ್ಲಿ ಕಿತ್ತಳೆ ಹಣ್ಣಿನ ರಸದ ಗ್ಲಾಸ್....

ರಾತ್ರಿಯ ಗೂರಲು ಕೆಮ್ಮಿನ ಛಾಯೆಯೂ ಕಾಣದಂಥ ಪ್ರಶಾಂತವಾದ ಮುಖ. ಎಂಥ ಸಂದರ್ಭದಲ್ಲಿಯೂ ನಗುವಂತಿರುವ ಹೊಳೆಯುವ ಕಣ್ಣುಗಳು.... ಗಂಡನ ದೃಷ್ಟಿ ತನ್ನ ದೃಷ್ಟಿಯನ್ನು ಸಂಧಿಸಿದಾಗ ಲಕ್ಷ್ಮೀಯ ಮುಖ ತುಂಬಾ ನಗು ಹರಡಿತು ಆದರೆ ಮಾತಿಲ್ಲ. ಸತೀಶನಿಗೆ ಅಷ್ಟೇ ಸಾಕು. 'ತಗೊಳ್ಳಿ ಮಾವಾ' ಎಂದು ಜ್ಯೂಸನ್ನು ಮಾವನ ಕೈಗೊಪ್ಪಿಸಿ ಅಲ್ಲೇ ಬಳಿಯಿದ್ದ ಕುರ್ಚಿಯಲ್ಲಿ ಕುಳಿತಳು ಲಕ್ಷ್ಮೀ.

ಹಣ್ಣಿನ ರಸ ಕುಡಿಯುತ್ತ ಮುದ್ದಿನ ಸೊಸೆಯ ಮುಖವನ್ನೇ ನೋಡುತ್ತಿದ್ದ ಶರ್ಮಾಗೆ, ತಾನು ಮುದ್ದಿನಿಂದ ಬೆಳೆಸಿದ ಮಗಳು ನಯನಾಳಿಗಿಂತ, ಸೊಸೆಯ ಸಹವಾಸವೇ ಹೆಚ್ಚು ಪಥ್ಯವಾಗುತ್ತಿದೆಯೇಕೆ? ಎಂಬ ಯೋಚನೆ ಎಷ್ಟೋ ಬಾರಿ ಕಾಡಿದ್ದಿದೆ. ಮನೆಗೆ ಬಂದ ಲಕ್ಷ್ಮೀ ಬಳ್ಳಿಯಂತೆ ತನ್ನ ಪರಿಸರಕ್ಕೆ ಹೊಂದಿಕೊಂಡು ಬಿಟ್ಟಿದ್ದಾಳೆ. 'ಸಾಗರ ದರ್ಶನ'ದ ವೈಭವದ ಪ್ರತೀಕವೆನಿಸುವ ಮನೆಯ ಆವರಣದಲ್ಲಿ ಅತ್ಯಂತ ಸಹಜವೆನಿಸುವ ಹೊಂದಾಣಿಕೆಯನ್ನು, ಲಕ್ಷ್ಮೀ ಸಾಧಿಸಿದ್ದಾಳೆ. ಆ ಮನೆಯಲ್ಲಿ ಎಲ್ಲರ ಮೇಲೂ ವರ್ಚಸ್ಸನ್ನು ಬೀರಿದ್ದಾಳೆ.

ಸತೀಶ ಸ್ನಾನ ಮುಗಿಸಿ, ಆಫೀಸಿಗೆ ಹೊರಡುವ ಸಿದ್ಧತೆಯಲ್ಲಿ ಪೋಷಾಕು ಧರಿಸಿ, ರಾತ್ರಿ ಮಲಗುವ ಮುನ್ನ ನೋಡಿದ ಕಾಗದ ಪತ್ರಗಳನ್ನು ಬ್ರೀಫ್ ಕೇಸಿಗೆ ತುರುಕಿ ಡೈನಿಂಗ್ ಟೇಬಲ್ ಬಳಿ ಬಂದಾಗ ನಯನಾ ಆಗಲೆ ಬಂದು ಕುಳಿತಾಗಿತ್ತು. ಡೈನಿಂಗ್ ಟೇಬಲ್ ಬಳಿ ಪುಸ್ತಕವೊಂದನ್ನು ಬಿಡಿಸಿ ಓದುತ್ತಿದ್ದ ತಂಗಿಯನ್ನು ಸತೀಶ ನೋಡಿದ. ಕೆದರಿದ ತಲೆಗೂದಲು, ಆ ಮನೆಯ ಆವರಣಕ್ಕೇ ಹೊಂದಿಕೊಳ್ಳದ ಒರಟು ಸೀರೆ.... ಸತೀಶ ತಂಗಿಯನ್ನೇ ನೋಡುತ್ತಿದ್ದ. ತಾಯಿಯದೇ ಪ್ರತಿಬಿಂಬ...ಮುಖಚರ್ಯೆ...ಮೈಕಟ್ಟು. ಆದರೆ ವೇಷಭೂಷಣ, ನಡವಳಿಕೆ ನರಕ. ತಾಯಿಯ ಅಚ್ಚುಕಟ್ಟುತನವನ್ನು ಪ್ರತಿಭಟಿಸಲೆಂಬಂತೆ ಹುಟ್ಟಿ ಬಂದ ಹಿಪ್ಪೀ....

ಮೇಜಿನ ಬಳಿ ಬಂದು ಕುಳಿತ ಸತೀಶ ಮೇಜಿನ ಮೇಲಿದ್ದ ಘಂಟಾಮಣಿ(ಬೆಲ್) ಯನ್ನು ಸದ್ದು ಮಾಡಿದ. ತಾನು ಕಾಫಿ ತಿಂಡಿಗೆ ತಯಾರಾಗಿದ್ದೇನೆ ಎಂಬ ಸೂಚನೆ. ಆಗ ನಯನಾ ತಲೆಯೆತ್ತಿದಳು. ತಾನು ಓದುತ್ತಿದ್ದ ಪುಸ್ತಕವನ್ನು ದೊಪ್ಪನೆ ಮೇಜಿನ ಮೇಲಿರಿಸಿ ಅಣ್ಣ ಕುಳಿತಿದ್ದಲ್ಲಿಗೆ ಬಂದು ಆತನ ಬಳಿಯಿದ್ದ ಘಂಟಾಮಣಿಯನ್ನು ಕಿತ್ತು ಮೂಲೆಗೊಗೆದಳು...

ಸತೀಶ ನಿಜವಾಗಿ ಸಿಟ್ಟಾಗಬೇಕಾದಂಥ ಸನ್ನಿವೇಶ. ರೂಢಿ ಉದ್ವೇಗಕ್ಕೆ ತಡೆ ಹಾಕುತ್ತಿತ್ತು. ತನಗಿಂತ ಬರೇ ಮೂರು ವರ್ಷಕ್ಕೆ ಚಿಕ್ಕವಳು.... ತನ್ನ ಕೈ ಹಿಡಿದೇ 'ಕಿಂಗ್ ಜಾರ್ಜ್' ಶಾಲೆಯ ಮೆಟ್ಟಿಲು ಹತ್ತಿದವಳು... ತನ್ನ ಕೈಯ ಕ್ಯಾಡಬರಿ ತುಂಡನ್ನು ಬೇಡಿ ತಿಂದವಳು. ಆದರೆ ಇಂದಿನ ನಯನಾ ಬೇರೆಯೆ.

ಸತೀಶ ಕುಳಿತಲ್ಲಿಂದಲೇ ನಯನಾಳ ಕಡೆ ನೋಡಿ, ಘಂಟಾಮಣಿ ಬಿದ್ದಿದ್ದ ಕಡೆ ಬೆಟ್ಟಿಟ್ಟು ತೋರಿಸಿ "ತೆಗಿ ಅದನ್ನು" ಎಂದ. ನಯನಾ ಅವನನ್ನೇ ದುರುಗಟ್ಟಿ ನೋಡಿದಳು. ಆಗ ಸತೀಶ "ನಯನಾ... ಸಾವಿರ ಸಲ ಹೇಳಿದ್ದೇನೆ. ಮನೇಂತ ಅಂದ ಮೇಲೆ ಮನೆಯವರಿಗೆ ಬೇಕಾದ ರೀತಿ - ನೀತಿ ಕಟ್ಟು ಕಟ್ಟಳೆಗಳಿಗೆ ಮರ್ಯಾದೆ ಕೊಡಲ್ಲಾಂತ

ನೀನು ಹಟ ಹಿಡಿದರೆ ಏನಾಗುತ್ತೆ ಗೊತ್ತೆ?,.... ಎಂದ. ''ಏನಾಗುತ್ತೆ?'' ಸತೀಶ ನೇರ ಮುಂದುವರಿದು ಹೋಗಿ ತಂಗಿಯ ಕೆನ್ನೆಗೆ 'ಚಟ್' ಎಂದು ಹೊಡೆದಾಗ ಅವಳು 'ತುಥ್' ಎಂದು ಉಗಿದ ಉಗುಳು ಮೇಜಿನ ಮೇಲೆ ಬಿದ್ದಾಗ ಲಕ್ಷ್ಮಿ ಧಾವಿಸಿ ಬಂದಳು.

''ಹರಿ ಓಂ ಹರಿ ಓಂ'' ಎನ್ನುತ್ತಲೇ ಮೇಜಿನ ಬಳಿ ಬಂದ ನಾಗೇಶ ಶರ್ಮಾ ''ಏನಾಯಿತು?.. ಏನಾಯಿತು ನಯನಾ?'' ಎಂದರು.

ಕೆನ್ನೆಗೆ ಏಟು ಬಿದ್ದ ಜಾಗವನ್ನು ನಯನಾ ಸವರಿಕೊಂಡಿರಲೂ ಇಲ್ಲ. ದುರುಗುಟ್ಟುವ ಕಣ್ಣುಗಳಿಂದ ಅಣ್ಣನನ್ನೇ ನೋಡುತ್ತಾ ಆಕೆ ಹೇಳಿದುದಿಷ್ಟೆ.... ''ನೀವೆಲ್ಲ ಬದುಕಿರೋದೆ ಸುಳ್ಳಿನಲ್ಲಿ... ಆತ್ಮವಂಚನೆಯಲ್ಲಿ.... ಹಿಪೋಕ್ರೇಟ್. ತುಥ್.... ತುಥ್'' ಎಂದು ಪುನಃ ಉಗುಳಿದಾಗ, ಸಿಟ್ಟಿನಿಂದ ಮುಂದೆ ಓಡಿ ಬರುವ ಸತೀಶನನ್ನು ಲಕ್ಷ್ಮೀ ಅಲ್ಲೇ ತಡೆದಳು. ''ಸುಮ್ಮನೆ ಕೂತ್ಕೋತೀರಾ ಇಲ್ಲವಾ?.... ಬನ್ನಿ ಮಾವಾ.... ಚಹಾ ತೆಗೆದುಕೊಳ್ಳಿ.... ನಯನಾ, ರಾತ್ರಿ ಅಷ್ಟೆಲ್ಲ ನಿದ್ರೆ ಬಿಡಬಾರದಮ್ಮಾ.... ಬಾ, ಬಿಸಿ ಬಿಸಿ ಇಡ್ಲಿ ಚಹಾ ತೆಗೆದುಕೊ... ಏನದು ಓದ್ತಿರೋದು?.....'' ಎಂದು ಲಕ್ಷ್ಮಿ ನಯನಾಳ ಮುಂದೆ ಬಿದ್ದಿದ್ದ ಪುಸ್ತಕವನ್ನೆತ್ತಿ ಅದರ ಶೀರ್ಷಿಕೆ ನೋಡಿದಾಗ.... ಪುಸ್ತಕದ ಹೆಸರು ಸತೀಶನ ಕಣ್ಣಿಗೂ ಬಿದ್ದಾಗ.... ಇಬ್ಬರಿಗೂ ನಗು ತಡೆಯಲಾಗಲಿಲ್ಲ. 'ಯೋಗ ಮತ್ತು ಇಂದ್ರಿಯ ಸುಖ'. ನಯನಾ ನಿಂತೇ

ಇದ್ದಳು..... "ಅನುಭವಕ್ಕೆ ಅಪ್ರಾಮಾಣಿಕತೆಯ ಮುಸುಕು ಹಾಕಿದಾಗ ಮಾತ್ರ ನಗು ಬರುತ್ತೆ...ಓ! ಐ ಹೇಟ್ ಯೂ ಆಲ್..." ಎಂದವಳೇ ತನ್ನ ಕೋಣೆಗೆ ಹೋಗಿ ಬಿಟ್ಟಳು.

* * *

ನರಿಮನ್ ಪೈಂಟಿನಿಂದ ಬೆಲ್ಲಾರ್ಡ್ ಪಿಯರ್‌ದ ತನಕದ 'ಸೆಂಟ್ರಲ್ ಬಿಸಿನೆಸ್ ಡಿಸ್ಟ್ರಿಕ್ಟ್'ನಿಂದ ಭೋಯಿವಾಡದ 'ರಂಗೇರಿಚಾಳ್'ನ ತನ್ನ ಎರಡು ಕೋಣೆಯ ಮನೆಯನ್ನು ತಲುಪಲು ಯಾವ ಹಾದಿ ಹಿಡಿದು ಬಂದರೂ ಅನುಭವದ ಮಜಲು ಮಜಲುಗಳನ್ನೇ ಇಳಿದು ಬರುವಂತಾಗುವುದು ರಾಜೀವನಿಗೂ ರೂಢಿ. ತೀವ್ರ ಅತೃಪ್ತಿ, ಎದೆಯಲ್ಲಿ ಬೆಂಕಿ, ಒಮ್ಮೊಮ್ಮೆ ಹುಚ್ಚೇ ಹಿಡಿಯುವುದೇನೊ ಎಂದು ಭಾಸವಾಗುವಂತೆ ತಲೆಯಲ್ಲಿ ನೋವು.... ಅದೂ ಮಧ್ಯಮವರ್ಗದ ಪ್ರತಿಷ್ಠೆಯ ಕೇಂದ್ರಗಳಲ್ಲಿ ಸುತ್ತಾಡುವಾಗ, ಹವಾ ನಿಯಂತ್ರಿತ ಆಫೀಸುಗಳಲ್ಲಿ ನಯವಾದ, ಕಾರ್ಪೆಟಿನ ಮೇಲೆ ಸದ್ದೇ ಕೇಳಿಸದಂತೆ ಹೆಜ್ಜೆ ಹಾಕುವಾಗ, ವೈಭವದ ಪಂಚತಾರಾ ಹೊಟೇಲುಗಳ ಮುಂದೆ, ವಿಲಾಸದ ಸಂಕೇತಗಳಾಗಿರುವ ಸಿನೆಮಾ ಥಿಯೇಟರ್‌ಗಳ ಮುಂದೆ ವಿದೇಶೀಯರನ್ನೇ ಆಕರ್ಷಿಸಲು, ಕುಟಿರ ಕೈಗಾರಿಕೆಗಳಿಗೆ 'ಫ್ಯಾಶನ್' ಪ್ರದರ್ಶನದ ಒಪ್ಪಕೊಟ್ಟು ಮೆರೆಸುವ ವೈಭವದ 'ಗಾಜಿನ ಶೋಕೇಸ್' ಅಂಗಡಿಗಳ ಮುಂದೆ, ಅಲ್ಲೊಂದು ಇಲ್ಲೊಂದು ಕೆಂಪು ಬಾವುಟ ಕಾಣುವಾಗ, ಇಡಿಯ ದೇಹದ ರಕ್ತವೆಲ್ಲ ಒಣಗಿ ಹೋದಂತೆ, .....ನೋವು.... ಇಲ್ಲಿ ಗುಂಪುಗಳು, ವರ್ಗಗಳು, ಅನುಭವಗಳು, ಒಂದನ್ನೊಂದು ಸಂಧಿಸುವಾಗ, ಮುಖಾಮುಖಿಯಾಗುವಾಗ, ಯಾವುದು ಯಾವುದನ್ನು ಕಬಳಿಸುತ್ತಿದೆಯೆಂದೇ ಅರ್ಥವಾಗದಂಥ ದೌರ್ಬಲ್ಯ ತನಗೆ ಅಂಟಿಕೊಳ್ಳುತ್ತಿದೆಯೆ ಎಂದು ಭಾಸವಾಗಿದ್ದುದೂ ಇದೆ. ಆದರೆ ಥಾಣೆ - ಬೇಲಾಪುರ ವಿಭಾಗದ ರಸ್ತೆಗಳಲ್ಲಿ ತಿರುಗುವಾಗ, 'ಸಿಡ್ಕೋ' ಬಸ್ಸುಗಳಲ್ಲಿ ಪ್ರಯಾಣ ಮಾಡುವಾಗ, ಪಶ್ಚಿಮ ರೇಲ್ವೆಯ ವಲಯದ ಔದ್ಯಮಿಕ ವಸಾಹತುಗಳಲ್ಲಿನ ನೂರಾರು ಕಾರ್ಖಾನೆಗಳ ಬಾಗಿಲ ಬಳಿಯ ಕಾವಲುಗಾರರನ್ನು ಗುರುತಿಸಿ ನಗುವಾಗ, ಮನಸ್ಸು ಕಲ್ಲಾಗುತ್ತಿತ್ತು, ಪ್ರಚಂಡ ಶಕ್ತಿಯ ವಜ್ರವಾಗುತ್ತಿದೆಯೆಂದೇ ಭಾಸವಾದುದೂ ಇದೆ... ಆದರೆ ಅಲ್ಲಿಂದ ಶಹರದ ವ್ಯವಹಾರ ಕೇಂದ್ರಕ್ಕೆ ಆಗಮಿಸಿದಾಗ ಮಾತ್ರ, ಸಂಘಟನೆಯ ದೈತ್ಯ ಶಕ್ತಿ ಬೆಳೆದು ಶಹರದ ವ್ಯವಸ್ಥೆಯನ್ನೇ ಬುಡಮೇಲು ಮಾಡುವ ದಿನ ಸಮೀಪದಲ್ಲಿದೆಯೆ, ಅಥವಾ ಸಾಗರದಲ್ಲಿ ಕಾಣುವ ದಿಗಂತದಂತೆ ದೂರದಲ್ಲಿದೆಯೆ ಎಂಬ ಸಂದೇಹ ಯಾಕೆ ಮುತ್ತುತ್ತಿದೆಯೆಂದು ಕಳವಳವಾಗುತ್ತಿತ್ತು.

ಅರ್ಥವಾಗದ ಭಾವಕ್ಕೆ ದೌರ್ಬಲ್ಯವೆಂದು ಹೆಸರಿಸುವುದು ಸರಿಯೆ ಎಂಬ ಸಂದೇಹದ ಹುಟ್ಟಿನಲ್ಲೆ ತನ್ನ ಇಚ್ಛಾಶಕ್ತಿಯ ಸಾವನ್ನೇ ಕಂಡಿದ್ದೇನೆಯೆ ಎಂಬ ಕ್ರೋಧ ಮುತ್ತಿದ್ದೂ ಇದೆ. ಆದರೆ ಕೆಲವೊಮ್ಮೆ, ಒಮ್ಮೊಮ್ಮೆ ಮಾತ್ರ.

* * * *

ಶಹರದ ವ್ಯವಹಾರ ಕೇಂದ್ರದಿಂದ ಮನೆಗೆ ಮರಳುತ್ತಿದ್ದಾಗ ತನ್ನ ತಿಳುವಳಿಕೆಗಳು ಸಿದ್ಧಾಂತಗಳು, ಕರ್ತೃತ್ವ ಶಕ್ತಿಯ ಪ್ರಶ್ನೆ, ಇವೆಲ್ಲವನ್ನೂ ಮರೆತಿದ್ದೇನೆ ಎಂಬಂಥ ಭಾವ ಬಲಿತು ಡಾಕ್‌ಯಾರ್ಡ್ ನಿಲ್ದಾಣೆಯಿಂದ ಮುಂದೆ ಉತ್ತರಕ್ಕೆ ಡಿಮೆಲ್ಲೊ ರಸ್ತೆಯ ಕಾಲ್ದಾರಿಗಳಲ್ಲಿ ಹರಕು ಚಿಂದಿಯ ಜೋಪಡಿಗಳಲ್ಲಿ ದಿನ ದಿನವೂ ಅಸಂಖ್ಯವಾಗಿ ಬೆಳೆಯುತ್ತಿರುವ ಜೀವಂತ ಪ್ರೇತಗಳನ್ನು ಆ ಜೋಪಡಿಗಳ ಪಕ್ಕದಲ್ಲೇ ಮಕ್ಕಳು ಮಲಮೂತ್ರ ವಿಸರ್ಜನೆ ಮಾಡುವ ದೃಶ್ಯಗಳನ್ನು ಕಾಣುವಾಗ

ಮಾತ್ರ ಭಯವಾಗುತ್ತಿತ್ತು. ಆ ಭಯದ ಬೆನ್ನಲ್ಲೇ ಕ್ರೋಧ... ವ್ಯವಸ್ಥೆಯ ವಿರುದ್ಧ ಮಾಡಬೇಕಾದ ಬಂಡಾಯಕ್ಕೆ ಯಾವ ಗುರಿಯೂ ಇಲ್ಲ ಎಂಬ ಯೋಚನೆ ಕಾಡಿದಾಗ, ಬಳಿಯಲ್ಲಿ ಇದ್ದ ಯಾಮಿನಿ ರಾಜೀವನ ತೋಳುಗಳನ್ನು ಬಿಗಿಯಾಗಿ ಅಮುಕಿ, ''ಹೋಗೋಣ ರಾಜೂ.... 'ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿ ವಿಭ್ರಮಃ''

''ಟು ಹೆಲ್'' ಎಂದಿದ್ದ ರಾಜೀವ....

ಪಕ್ಕದಲ್ಲಿ ದಾರಿ ಕವಲೊಡೆದು 'ಓವರ್ ಬ್ರಿಜ್' ಮೇಲಿಂದ 'ಹೇ ಬಂದರ್' 'ಶಿವಡೀ'ಗಳ ಕಡೆ ಸಾಗುತ್ತದೆ. ದೈತ್ಯಾಕಾರದ ಎಣ್ಣೆಯ ಟ್ಯಾಂಕುಗಳು.... ಮುಂದೆ ಸಮುದ್ರದ ಅಂಚಿನಲ್ಲೇ 'ಬುಚರ್ ಲ್ಯಾಂಡ್'ಶೈಲ ಶುದ್ಧೀಕರಣ ಕಾರ್ಖಾನೆಗಳು... ಟ್ರಾಂಬೆ ಚೆಂಬೂರ್ ವಿಭಾಗದ ಇಪ್ಪತ್ತುನಾಲ್ಕು ತಾಸೂ ಹೊಗೆ ಉಗುಳುವ ಆರ್.ಎಫ್.ಸಿ., ಎಚ್.ಪಿ.ಸಿ. ಹೊಗೆ...ಬೆಂಕಿ.....ಶಹರದ.... ಹಾಗೆಯೆ ರಾಷ್ಟ್ರದ ವ್ಯವಸ್ಥೆಗೆ ಜೀವದಾನ ಮಾಡುವ ಶಕ್ತಿಯ ಉತ್ಪಾದನೆಯ ಸಲಕರಣೆಗಳು...

ಎಡಬದಿಯಲ್ಲಿ ಅಲ್ಲಲ್ಲಿ ಮರದ ತುಂಡುಗಳು ಹಲಗೆಗಳ ಮಾರಾಟದ ಮಳಿಗೆಗಳು... ಪಕ್ಕದಲ್ಲಿ ಕಾಲ್ದಾರಿಗಳಲ್ಲಿ ನೂರಾರು ಅಗ್ಗಿಷ್ಟಿಕೆಗಳು, ಜೋಪಡಿಯಲ್ಲಿ ಬದುಕು ಸಾಗಿಸುವವರಿಗೆ ರೊಟ್ಟಿ ಕಾಯಿಸಲು, ಅನ್ನ ಬೇಯಿಸಲು.... ಬೆಂಕಿ.... ಈ ಅಗಿಷ್ಟಿಕೆಗಳಿಂದ ಬೆಂಕಿ ತಗಲುವುದಿಲ್ಲ. ಎಲ್ಲಾದರೂ ಬೆಂಕಿ ಎದ್ದರೂ ಹರಡುವುದಿಲ್ಲ. ತಾನು ಮಾಡುತ್ತಿರುವುದೂ ಅಷ್ಟೇನೆ.

ಎರಡು ವರ್ಷದ ಎಲ್.ಟಿ.ಎಸ್. ಐದು ವರ್ಷಗಳ ಬೋನಸ್ ಒಪ್ಪಂದ, ಹೆಚ್ಚಿನ ಮಾಗಾಯಿ (ತುಟ್ಟಿಭತ್ತೆ) ಹೆಚ್ಚಿನ ಸಂಬಳ, ಹೆಚ್ಚಿನ ಬಾಡಿಗೆಯ ಸಹಾಯ, 'ಪಾಳಿ' ಅವಧಿ. .

ವಿಶ್ರಾಮದ ಕಾಲ.... ಕೆಲಸದ ಗಡಿ... ಲಕ್ಷ್ಮಣ ರೇಖೆ. ಇಷ್ಟು ಸಂಬಳಕ್ಕೆ ಇಷ್ಟೇ ಕೆಲಸ.... ಪಹಲೇ ಬೋನಸ್ ಪೀಚೆ ಕಾಮ್.... ಮುಷ್ಕರದ ಬೆದರಿಕೆ.... ನೋಟೀಸು.... ಲೇಬರ್ ಕಮೀಶನರ್... ಪಂಚಾತಿಕೆ.... ಸಂಪು.... ಧರಣೆ. ಪಹಲೇ ಬೋನಸ್ ಪೀಚೇ ಕಾಮ್

ಯಾಮಿನಿ ಯಥಾಪ್ರಕಾರ.....

''ದಾರಿದ್ರ್ಯಾತ್ ಹ್ರಿಯಮೇತಿ ಹ್ರೀಪರಿಗತಃ ಸತ್ವಾತ್ ಪರಿಭ್ರಶ್ಯತೇ..... ರಾಜೂ ವಿಧನತಾಂ ಸರ್ವಾಪದಾಂ ಆಸ್ಪದಂ.''

''ಸ್ಟ್ರಾಪಿಟ್'' ಎಂದ ರಾಜೀವ ನಗುತ್ತಲೇ.

ಸಂಜೆಯ ಕೆಂಪೇರುವಾಗ ಒಮ್ಮೊಮ್ಮೆ ರಕ್ತದ ನೆನಪಾಗುವುದೂ ಇದೆ. ಥಾಣೆ ಬೇಲಾಪುರ ಪಟ್ಟಿಯಲ್ಲಿ.... ತಲೋಜಾ, ವಾಶಿಗಳಲ್ಲಿ, ಅಲ್ಲಿ ಇಲ್ಲಿ ಔದ್ಯಮಿಕ ವಸಾಹತುಗಳಲ್ಲಿ....ಚೂರಿಯ ತಿವಿತ.... ಕೊಲೆ.... ಸಾವು....ಮುಷ್ಕರ.....ಲಾಕೌಟ್..... ತಿಂಗಳು....ಆರು ತಿಂಗಳು - ಮತ್ತೆ ಮರಳಿ ಬರುವುದು ವ್ಯವಸ್ಥೆಗೆ....

ಅಕ್ಕುಪಳ್ಳಿ, ಮುಳ್ಳಿವೀಡು, ಬೋರಿವಂಕ, ಖಮ್ಮಾಮ್, ವಾರಂಗಲ್, ಶ್ರೀಕಾಕುಲಂ...

ಹಸಿರು ಹೊಲ.... ತುಂಬುವ ಕಣಜ... ಜೀತ....ಶೋಷಣೆ...ಹಿಂಸೆ....ಕೊಲೆ....

ಈಗ ಯಾಮಿನಿಯಿರಲಿಲ್ಲ.

'ಲೋಹಭವನ'ದ ಕೆಲಸ ಮುಗಿಸಿ, 'ಹ್ಯಾಂಡ್ ಲೂಮ್' ಹೌಸ್‌ಗೆ ಹೋಗಿದ್ದರೆ ಚೆನ್ನಾಗಿತ್ತು. ಅಲ್ಲಿ ನಿತ್ಯ ನಗುವ ಯಾಮಿನಿ ಸಿಗುತ್ತಾಳೆ. ತೋಳಿಗೆ ಸಿಗಿಸಿಕೊಂಡ ಬಟ್ಟೆಯ ಚೀಲ.... ನೊಸಲಿನಲ್ಲಿ ಇಪ್ಪತ್ತೈದು ಪೈಸೆಗಳ ಗಾತ್ರದ ಕುಂಕುಮ. ಆದರೆ ರಾಜೀವ ಮೊದಲು ಆಕೆಯನ್ನು ಕಂಡಾಗ ಮಾತ್ರ (ಎಷ್ಟು ವರ್ಷಗಳ ಮೊದಲು.... ಎರಡು, ಮೂರು, ನಾಲ್ಕು!) ಉದ್ವೇಗದ ಒಂದು ಪ್ರತಿಕೃತಿ, ಭರವಸೆಯ ಭವಿಷ್ಯದ ಕೈಯೆತ್ತಿ ನಿಂತ ಸ್ವಾತಂತ್ರ್ಯ ಶಿಲ್ಪ!

'ಲಾಲ್ ಬಾವುಟಾ ಜಿಂದಾಬಾದ್'

ಹ್ಯಾಂಡ್‌ಲೂಮ್ ಹೌಸ್‌ನ ಇದಿರಿನಲ್ಲೇ ಒಂದು ಕಾರಿನ ಮೇಲೆ ನಿಂತು, ಎತ್ತಿದ ಕೈಯಲ್ಲಿ ಕೆಂಪು ಬಾವುಟವೊಂದನ್ನು ಹಾರಿಸಿ ತನ್ನ ಸಹೋದ್ಯೋಗಿಗಳನ್ನುದ್ದೇಶಿಸಿ ಪುಟ್ಟ ಭಾಷಣ ಮಾಡಿದ ಯಾಮಿನಿ.....

ಐದು ನಿಮಿಷಗಳ ಕಾಲ ರಾಜೀವ ಯಾಮಿನಿ ಮಾತಾಡುವುದನ್ನೇ ನೋಡುತ್ತ ನಿಂತಿದ್ದ... ಸಾವಿರಾರು ಜನ ತಿರುಗುವ ದಾದಾಭಾಯಿ ರಸ್ತೆಯಲ್ಲಿ ಆತ ನಿಂತಿದ್ದುದು ಮೊದಲು ಯಾರಿಗೂ ತಿಳಿಯದಿದ್ದರೂ ಆ ಮೇಲೆ ಆತ ರಾಜೀವನೆಂದು ಖಚಿತವಾದಾಗ ಮಾತ್ರ...

"ಓ.... ಕಾಮ್ರೇಡ್....ರಾಜೀವ್.... ರಾಜೀವ್‌ಭಾಯಿ...." ಎಲ್ಲ ರಾಜೀವನನ್ನು ಮುತ್ತಿದರು. "ನಾವು ಎಂಟು ದಿನ ಮುಷ್ಕರ ನಡೆಸಿದ್ದೇವೆ. ಇನ್ನೂ ಮಾತುಕತೆ ಏನೂ ಆಗಿಲ್ಲ. ಜೋಶಿಯ ಕೆಲಸ ಹೋದದ್ದೆ ಬಂತು. ನಮ್ಮ ಪರವಾಗಿ ಮಾತಾಡಬೇಕಿದ್ದ ರೆಡ್ಡಿಗೆ ವಿಪರೀತ ಕೆಲಸ. ಭಾಂಡೂಪ ತನಕ ಹೋಗಿ ದೇಶಪಾಂಡೆಯ ಹತ್ತಿರವೂ ಮಾತಾಡಿದ್ದೇವೆ. ಲೇಬರ್ ಕಮೀಶನರ್ ಹತ್ತಿರ ಹೋದಾಗ 'ಸಂಪು ಮೊದಲು ಹಿಂತೆಗೆದುಕೊಳ್ಳಿ,' ಎನ್ನುತ್ತಾರೆ..." ಇತ್ಯಾದಿ... ಇತ್ಯಾದಿ...

"ಯು ಆರ್ ಎ 'ಗಾಡ್ ಸೆನ್ಡ್' ಫಾರ್ ಅಸ್" ಎಂದಿದ್ದಳು ಯಾಮಿನಿ.

"ನೋಡಿ ನಾನಾಗಿ ನಿಮ್ಮ ಸಂಘಟನೆಯಲ್ಲಿ ತೊಡಗಿಸಿಕೊಳ್ಳುವ ಇಚ್ಛೆ ನನಗಿಲ್ಲ. ನೀವು ಈಗಾಗಲೆ ದೇಶಪಾಂಡೆ, ರೆಡ್ಡಿ ಮೊದಲಾದವರೊಡನೆ ಮಾತನಾಡಿಯಾಗಿದೆ, ಅವರನ್ನೇ ಕೇಳಿ. ಯೋಗ್ಯ ಮಾರ್ಗದರ್ಶನ ನೀಡಬಹುದು."

"ಇಲ್ಲ ನಮಗೆ ನೀವೇ ಬೇಕು.... ನೀವೇ.... ರಾಜೀವ್ .... ನೀವೇ.." ಕಳೆದ ಹತ್ತು ವರ್ಷಗಳ ಕಾರ್ಯಕ್ಷೇತ್ರದಲ್ಲಿ, ಕಾರ್ಯವ್ಯಾಪ್ತಿಯಲ್ಲಿ, ರಾಜೀವ ಭೈಯ್ಯಾ ಎಂದುದಿದೆ. ರಾಮ್ ರಾಮ್ ಕಾಮ್ರೇಡ್ ಎಂದುದಿದೆ.... ಆಮ್‌ಚೆ ಪುಢಾರಿ ರಾಜೀವ ಕಾಕಾ ಎಂದುದಿದೆ...

* * * * *

'ಲಾಲ್ ಬಾವುಟಾ ಜಿಂದಾಬಾದ್' ಕಾರಿನ ಮೇಲೆ ನಿಂತು ದನಿಯೇರಿಸಿ ಕೂಗುತ್ತಿದ್ದ ಯುವತಿಯ ನೊಸಲಿನಲ್ಲಿ ಗುರುತಿಸಿದ್ದ ಕೆಂಪು ಬೊಟ್ಟು, ಕೈಯಲ್ಲಿದ್ದ ಬಾವುಟ, ಕೈಯೆತ್ತಿ ನಿಂತ ಆಕರ್ಷಕ ಭಂಗಿಯಲ್ಲಿದ್ದ ಚುಂಬಕ ಶಕ್ತಿ, ಎಲ್ಲ ಪರಸ್ಪರ ವಿರುದ್ಧ ಸಂಕೇತಗಳಾಗಿದ್ದವು. ಮೊದಲು ನೋಡಿದ ಸಂದರ್ಭದಲ್ಲಿ ಆಕೆ ಆದರ ಹುಟ್ಟಿಸುವ



ಸಮಾನಧರ್ಮೀಯಳಂತೆ ತೋರಿರಲೇ ಇಲ್ಲ. ಆಕೆಯ ಕೈಯಲ್ಲಿದ್ದ ಕೆಂಪು ಬಾವುಟ ಒಂದು ಸಮಯಸಾಧಕ ನಿಶಾನಿ..... ಮುಖದಲ್ಲಿ ಕುಂಕುಮ, ಕುತ್ತಿಗೆಯಲ್ಲಿ ಕರಿಮಣಿಯ ಸಂಕೋಲೆ.... ಎಲ್ಲೋ ಸಾಮಾನ್ಯ ಬದುಕು ಸಾಗಿಸುವ ಮಧ್ಯಮ ವರ್ಗದ ಆದರ್ಶ ಗೃಹಿಣಿ. ಗಂಡನೂ ಇನ್ನಾವುದೊ ಇಂಥದೇ ಉದ್ಯೋಗದಲ್ಲಿ ತಿಂಗಳ ಸಂಬಳ ಎಣಿಸುತ್ತಿರಬಹುದು. ಮನೆಯಲ್ಲಿ ಎರಡೋ ಮೂರೋ ಮಕ್ಕಳು ಇರಬಹುದು. ಬ್ಯಾಂಕಿನಲ್ಲಿ ಉಳಿತಾಯದ ಲೆಕ್ಕ, ಮಕ್ಕಳನ್ನು ನೋಡಿಕೊಳ್ಳಲು ಕೆಲಸದಾಕೆ.... ಆಕೆ ಎರಡು ರೂಪಾಯಿ ಸಂಬಳ ಹೆಚ್ಚಿಸಲು ಸಾವಿರ ಬೈಗಳು.... ಕುರ್ಚಿ, ಸೋಫಾ, ಕಪಾಟು, ಬಾಗಿಲಿಗೆ ಬೀಗ.... 'ಪಹಲೇ ಬೋನಸ್ ಪೀಚೇ ಕಾಮ್'.

ಈ ಮಧ್ಯಮ ವರ್ಗದ, ಬಡ ಮಧ್ಯಮ ವರ್ಗದ ಸಂಘಟನೆಯಲ್ಲೆಲ್ಲ ರಾಜೀವನನ್ನು ಮುತ್ತುತ್ತಿದ್ದದ್ದು ನಿರುತ್ಸಾಹವೆ... ಆದರೆ ಈ ಸಂಘಟನೆಗಳೆಲ್ಲ ಉದ್ದೇಶರಹಿತ ಸ್ವಾರ್ಥದ ಕವಚಗಳಾದರೂ ಅವು ಅನಿವಾರ್ಯ.... ಪರಸ್ಪರ ಡಿಕ್ಕಿ ಹೊಡೆಯುವಂತಿದ್ದರೂ ಅವು ಅನಿವಾರ್ಯ.... ವ್ಯವಸ್ಥೆಯ ವಿರುದ್ಧದ ಮುಖಾಮುಖಿಯ ಇತಿಹಾಸದ ಗತಿಯಲ್ಲಿ ಬಂಡಾಯದ ಸಾಧನವಾಗಿ ಅವಕ್ಕೆ ಸ್ಥಾನ ಇದ್ದೇ ಇದೆ....

ಯಾಮಿನಿಯ ಹಣೆಯಲ್ಲಿದ್ದ ಕುಂಕುಮದ ಬೊಟ್ಟನ್ನು ನೋಡಿದಾಗ ಮೊದಲು ರಾಜೀವನಿಗೆ ನೆನಪಾದದ್ದು, ತಾನು ಕಲ್ಕತ್ತಾದಲ್ಲಿದ್ದ ಎರಡು ವರ್ಷಕಾಲ ಅನಿವಾರ್ಯವೆನಿಸುವ ಒಡನಾಟದಲ್ಲಿ ತೊಡಗಿಸಿಕೊಂಡಿದ್ದ ಮೈತ್ರೇಯಿ ಬೋಸ್.... ಆಕೆ ಕುಂಕುಮ ಇಟ್ಟುದನ್ನು ಆತ ಕಂಡೇ ಇರಲಿಲ್ಲ.

ಆ ಕುತೂಹಲದ ನೆನಪು ಬಂದೇ ತಾನು ಯಾಮಿನಿಯನ್ನು ಮೊದಲು ಕಂಡಾಗ ಕುಂಕುಮದ ಬೊಟ್ಟು ಆಕರ್ಷಣೆಯ ಸಾಧನವಾಯಿತೆ? ಯಾರಿಗೆ ಗೊತ್ತು? ಅಥವಾ ಬಂಗಾಲದಲ್ಲಿ ತನ್ನ ಒಡನಾಟದಿಂದಲೇ ತಿದ್ದುತ್ತಿದ್ದ ಮೈತ್ರೇಯಿ, ಥಾಣೆಯ ಆದಿವಾಸಿಗಳ ನಡುವೆ ತನ್ನನ್ನು ಕಂಡಾಗಲೆಲ್ಲ ಆದರದಿಂದ, 'ರಾಜೂ' ಎಂದು ಕರೆಯುತ್ತಿದ್ದ ಮಂದಾ ಪರೂಳ್‌ಕರ್, ಅವರೆಲ್ಲರಿಗಿಂತ ಭಿನ್ನವಾದೊಂದು ವ್ಯಕ್ತಿತ್ವ ಇಲ್ಲಿದೆಯೆ? ಎಂಬ ಪ್ರಶ್ನೆ. ಯಾಮಿನಿಯನ್ನು ಮೊದಲು ಕಂಡಾಗ ತನ್ನನ್ನು ಮುತ್ತಿದ್ದು, ದೌರ್ಬಲ್ಯದ ಸಂಕೇತವೆ? ಯಾರಿಗೆ ಗೊತ್ತು? ಈಗ ಮಾತ್ರ ಒಮ್ಮೆಗೆ ಎಲ್ಲಿಂದಲೋ ನಾನೇನು ಕಡಿಮೆ ಎಂಬ ಪೈಪೋಟಿಯ ಅಪಸ್ವರ ಎಲ್ಲ ಕಡೆಯಿಂದಲೂ ಯಾಕೆ ಕೇಳಿಸುತ್ತಿದೆಯೆಂದು ಅರ್ಥವಾಗುತ್ತಿಲ್ಲ.

"ಇಲ್ಲ, ನೀವೇ ಬೇಕು ರಾಜೀವ್, ನೀವೇ.... ನೀವೇ...."

"ಸರಿ, ಈಗ ನನ್ನೊಡನೆ ಯಾರು ಬರುತ್ತೀರಿ? ನನಗೆ ನಿಮ್ಮ ಸಂಘಟನೆಯ ಪೂರ್ಣ ವಿವರ ಬೇಕು."

"ನಾನೇ ಬರುತ್ತೇನೆ.... ಎಲ್ಲಿಗೆ?"

"ನನ್ನ ಮನೆಗೆ... ಭೋಯಿವಾಡ.... ಪರೇಳ್.... ನನ್ನ ಆಫೀಸ್ ಕೂಡ ಅದೇ..."

"ರೆಡಿ"

"ಸರಿ...ಬನ್ನಿ...ಹೋಗೋಣ." ಹಾಗೆ ಬಂದದ್ದು ಜೋಶಿ ಮತ್ತು ಯಾಮಿನಿ.

ಯಾಮಿನಿ ಸಹೋದ್ಯೋಗಿ ಜೋಶಿಯೊಡನೆ ಮೊದಲನೆ ಬಾರಿ ಭೋಯಿವಾಡದ ತನ್ನ ಮನೆಗೆ ಬಂದಾಗ, ಬೇಕೆಂದೇ ಅವರಿಗೆ ಆಯಾಸವಾಗುವಂತೆ ಸಾವಿರ ಪ್ರಶ್ನೆ ಕೇಳಿದ ನೆನಪು... ಅಷ್ಟೆಲ್ಲ ಪ್ರಶ್ನೆಗಳಿದ್ದಾಗಲೂ ಯಾಮಿನಿ ಸಹನೆಯ ಪ್ರತಿಮೂರ್ತಿಯಾಗಿದ್ದಳು. ಮನೆ ಸೇರಲು ತಡವಾದೀತೆಂಬ ಚಡಪಡಿಕೆಯನ್ನು ತೋರಿಸದೇನೆ. ಯಾಕೆ? ಜೋಶಿ ಹೊರಟು ಹೋದ ಮೇಲೆ "ಮನೆ ತಲುಪಿಸಲು ಜತೆಗೆ ಬರುತ್ತೇನೆ' ಎಂದರೂ....."

"ಬೇಡ... ನಾನು ಹೋಗುತ್ತೇನೆ. ಬಸ್ಸು ಹಿಡಿದು ಹೋಗಲು ಏನು ತೊಂದರೆ?"

"ಇಲ್ಲ ..... ಬನ್ನಿ."

ಮನೆ ಸೇರುವ ತನಕವೂ ರಾಜೀವ ಮೌನ ವಾಗಿಯೇ ಇದ್ದ. ಯಾಮಿನಿ ಯಾವ ಮಾತೂ ಆಡುವ ಸ್ಥಿತಿಯಲ್ಲಿ ಇರಲಿಲ್ಲ. ಹೆಸರು ಮಾತ್ರ ಕೇಳಿ ತಿಳಿದಿದ್ದ ಟ್ರೇಡ್ ಯೂನಿಯನ್ ಮುಂದಾಳುವಿನ ಅಂತರಂಗದಲ್ಲಿ ಏನಿದೆ ಯೆಂಬ ಕಳವಳ ಕಾಡುತ್ತಿತ್ತೇನೋ....

"ಎಲ್ಲಿದೆ ಮನೆ?"

"ಪೋರ್ಚುಗೀಸ್ ಚರ್ಚ್."

ಗಲ್ಲಿಗೆ ತಾಗಿಕೊಂಡ ಜೀರ್ಣವಾಗಿದ್ದ ಮೂರು ಮಾಳಿಗೆಗಳ ಕಟ್ಟಡ. ಮುರುಕು ಮೆಟ್ಟಲುಗಳನ್ನು ತುಳಿದು ಎರಡು ಮಾಳಿಗೆ ಏರುತ್ತಾ ಯಾಮಿನಿಯನ್ನೇ ಹಿಂಬಾಲಿಸಿದ್ದ ರಾಜೀವ. ಎರಡನೆಯ ಮಾಳಿಗೆ ತಲುಪಿ ಬಾಗಿಲ ಬಳಿ ನಿಂತಾಗ ಯಾಮಿನಿ ತನ್ನ ಹ್ಯಾಂಡ್ ಬ್ಯಾಗಿನಲ್ಲಿ ಬೀಗದ ಕೈಗಾಗಿ ತಡ ಕಾಡಿ ಬೀಗ ತೆಗೆದು ಮನೆಯೊಳಗೆ ಪ್ರವೇಶಿಸಿ ದೀಪ ಬೆಳಗಿದಾಗ ಹೊರಗೆ ನಿಂತ ರಾಜೀವ ನಿಗೆ ಕಂಡದ್ದು ಮೂಲೆಯಲ್ಲೊಂದು ಮಂಚ..... ಅದರಲ್ಲಿ ಮಲಗಿದ್ದ ವ್ಯಕ್ತಿ....

"ಭೋಸುಡೀ.... ಎಲ್ಲಿಗೆ ಹೋಗಿದ್ದ ಇಷ್ಟು ಹೊತ್ತು? ನಾನು ಸತ್ತಿಲ್ಲ ಇನ್ನೂ, ಏ ಸತ್ತವಳೆ? ಸಖಾರಾಮ ಹೊರಟು ಹೊದ ಮೇಲೆ ನಾನೆಷ್ಟು ದಾರಿ ಕಾಯಬೇಕು? ಯಾವ ಮಿಂಡನ ಜೊತೆಗೆ ಹೋಗಿದ್ದೆ? ನನಗೆ ಕಾಲಿಲ್ಲದಿದ್ದರೇನಾಯಿತು? ಕಣ್ಣಿದೆ.. ಬುದ್ಧಿಯಿದೆ."

ಬಾಗಿಲು ತೆರೆದ ಯಾಮಿನಿ ಮಂಚದ ಬಳಿ ಹೋಗುವುದರೊಳಗೆ ಇಷ್ಟೆಲ್ಲ ಮಾತು! ರಾಜೀವ ಬಾಗಿಲಲ್ಲೆ ನಿಂತಿದ್ದ. ಮಲಗಿದ್ದ ವ್ಯಕ್ತಿಯ ಪಕ್ಕದಲ್ಲೆ ಗೋಡೆಗೊರಗಿ 'ಕ್ರಚ್' ನಿಂತಿತ್ತು. "ಛೆ! ಛೆ! ಸ್ವಲ್ಪ ಹೊತ್ತಾಗಿ ಹೋಯಿತು... ಮುಷ್ಕರದ ಗಲಾಟೆ. ಹೇಳಿರ ಲಿಲ್ಲವೇ? ನೋಡಿ, ಯಾರು ಬಂದಿದ್ದಾರೆ?"

ಮಲಗಿದ್ದ ವ್ಯಕ್ತಿಯ ಹೊದಿಕೆ ಸರಿಸಿ, ಕುಳಿತು ಕೊಳ್ಳಲು ಸಹಾಯ ಮಾಡಿ, ವ್ಯಕ್ತಿ ಒಮ್ಮೆಗೇ ರಾಜೀವನನ್ನು ಗಮನಿಸಿ ಎದ್ದು ನಿಲ್ಲಲು ಯತ್ನಿಸಿದಾಗ, ಯಾಮಿನಿ 'ಕ್ರಚ್' ಕೊಟ್ಟು ನಡೆಸಿ ಬಳಿಯಲ್ಲಿಯೇ ಇದ್ದ ಆರಾಮ ಕುರ್ಚಿಯ ಮೇಲೆ ಕುಳ್ಳಿರಿಸಿ, ಆ ವ್ಯಕ್ತಿ ಒಂದು ಮಾತೂ ಆಡಲು ಬಿಡದೆ, ತನ್ನ ಕೈಚೀಲದಲ್ಲಿ ಪುನಃ ತಡಕಾಡಿ, ಒಂದು 'ಕ್ಯಾಡಬರಿ' ತುಂಡನ್ನು ಬಾಯಿಗೆ ತುರುಕಿದಾಗ, ಮುಖ ದಲ್ಲಿ ನಗುವರಳಿತ್ತು. "ಬನ್ನಿ.... ಈಗ ಯಾಮಿನಿಯ ಮಾತು ರಾಜೀವನನ್ನುದ್ದೇ ಶಿಸಿ... ಇವರೇ ನಮ್ಮವರು.... ಶ್ರೀಕಾಂತ ರಾಜೆ.... ಪೋಲಿಯೋದಿಂದಾಗಿ ಈಗ ಮನೆ ಯಲ್ಲೇ ಇದ್ದಾರೆ ನೋಡಿ ಇವರು ರಾಜೀವ. ಗೊತ್ತಿಲ್ಲವೆ? ಪ್ರಸಿದ್ಧ ಟ್ರೇಡ್ ಯೂನಿ ಯನ್ ಲೀಡರ್ ರಾಜೀವ..... ಇವತ್ತು ನಮ್ಮ ಮುಷ್ಕರದಲ್ಲಿ ಕೈ ಹಾಕಿದ್ದಾರೆ. ಇನ್ನು ನಮಗೆ ಹೆದರಿಕೆಯಿಲ್ಲ. ಅವರಿಗೆಲ್ಲ ವಿವರ ಕೊಟ್ಟು ಬರುವಾಗ ತಡವಾಯಿತು. ಸಖಾ ರಾಮ ಚಹಾ ಮಾಡಿಕೊಟ್ಟಿರಬೇಕಲ್ಲ...."

ಶ್ರೀಕಾಂತರಾಜೆ ಉತ್ತರಿಸಲಿಲ್ಲ. ಚಾಕ ಲೇಟ್ ಮೆಲ್ಲುವುದರಲ್ಲೆ ಆತನ ಜೀವನಾಸಕ್ತಿ ಯೆಲ್ಲ ಪ್ರತಿಬಿಂಬಿತವಾದಂತಿತ್ತು. ಯಾಮಿನಿ ಯನ್ನುದ್ದೇಶಿಸಿ ರಾಜೀವ ಕೇಳಿದ್ದ, "ಎಷ್ಟು ಸಮಯದಿಂದ ಹೀಗೆ?" ಆಗ ಶ್ರೀಕಾಂತ ರಾಜೆ ಮಾತನಾಡಿದ್ದ.

"ಒಂದು ವರ್ಷದಿಂದ ಮನೆಯಲ್ಲೇ ನೋಡಿ... ಹಿಂದೆ ನಾನು ಎಂಥ ಸ್ಪೋರ್ಟ್ಸ್ ಮ್ಯಾನ್ ಆಗಿದ್ದೆ ಗೊತ್ತೆ?.... ಟೈಮ್ಸ್ ಶೀಲ್ಡ್‌ನಲ್ಲಿ ಆಡಿದ್ದೇನೆ. ಈಗ ಮಾತ್ರ ಮನೆ ಯಲ್ಲೆ. ಯಾಮಿನಿ ಎಲ್ಲ ನೋಡಿಕೊಳ್ಳು ತ್ತಾಳೆ ಕೆಲಸ ಕಳೆದುಕೊಂಡೆ. ಏನಾದರೂ ದಂಧೆ ಆರಂಭಿಸಬೇಕು. ಯಾವುದಕ್ಕೂ ಸಾವಿ ರಗಟ್ಟಲೆ ಹಣ ಬೇಕು. ಈ ಯಾಮಿನಿಯ ಆಫೀಸಿನ ಸಂಪು ಯಾವಾಗ ಮುಗಿಯುತ್ತದೆ ಹೇಳಿ ನೋಡೋಣ? ಈ ಮ್ಯಾನೇಜ್‌ಮೆಂಟ

ನವರೂ ನಿಮ್ಮಂಥವರು ನಡೆಸುವ ಸಂಪು ಎಂದ ಕೂಡಲೆ ಹಣ್ಣಾಗುವುದಿಲ್ಲವೆ?''

ರಾಜೀವ ಉತ್ತರಿಸಲಿಲ್ಲ. ಯಾಮಿನಿ ಚಹಾ ತಂದಿದ್ದಳು. ಆತ ಹೊರಟು ನಿಂತಾಗಲೂ ಆಕೆ ಮಾತನಾಡಿರಲಿಲ್ಲ. ಕಪ್ಪಿನಲ್ಲಿದ್ದ ಚಹಾ ಬಾಯಿಗೆ ಸೇರಿರಲಿಲ್ಲ. ತೃಪ್ತಿಯಿಂದ ಚಹ ಕುಡಿಯುತ್ತಿದ್ದ. ಶ್ರೀಕಾಂತನ ಕಪ್‌ಗೆ ಒಂದಿಷ್ಟು ಸಾಯನೈಡ್ ಬೆರಸಬೇಕು ಎಂದೂ ತೋರಿತ್ತು ಒಂದು ಕ್ಷಣ..... 32 ಬೋರ್‌ನ ಗುಂಡು.... ನೇರ ಶ್ರೀಕಾಂತನ ಮೆದುಳಿಗೆ ಕಚ್ಚಾ ಗ್ರೆನೇಡ್....

ಯಾಮಿನಿಯ ಮುಖ ಪ್ರಶಾಂತ. ''ಬರುತ್ತೇನೆ. ರಾಜೆ.... ನಿಮ್ಮ ಶ್ರೀಮತಿಯ ಬಗ್ಗೆ ಏನೇನೊ ಹೇಳಿದಿರಿ. ಇಂಥ ಮಾತು ನಿಮ್ಮಂಥವರು ಆಡಬಾರದು. ಅವರು ನಮ್ಮಲ್ಲಿಗೆ ಬಂದದ್ದು ತಮ್ಮ ಸಂಘಟನೆಯ ಸುಖದುಃಖ ತೋಡಿಕೊಳ್ಳಲು. ತಡವಾಯಿತೆಂದು ಮನೆಯ ತನಕ ತಲುಪಿಸಲು ನಾನೆ ಬಂದೆ. ಅವರು ತಮ್ಮ ರಕ್ಷಣೆಯನ್ನು ತಾವೇ ಮಾಡಿಕೊಳ್ಳುವಷ್ಟು ಸಮರ್ಥರೆಂದು ತಿಳಿದಿದ್ದರೂ.... ಬರುತ್ತೇನೆ.... ನಮಸ್ಕಾರ.''

''ಛೇ ಛೇ.... ಮಿಸ್ಟರ್ ರಾಜೀವ್.... ನೀವು ತಪ್ಪು ತಿಳಿದುಕೊಳ್ಳಬೇಡಿ. ನನ್ನ ಮಾತಿನ ರೀತಿಯೇ ಅದು. ಯಾಮಿನಿ ನನ್ನ ಜೀವ, ಕಣ್ಣು.'' ರಾಜೀವ ನಕ್ಕಿದ್ದ, ನಕ್ಕು ಯಾಮಿನಿಯೆಡೆಗೆ ನೋಡಿದ್ದ. ಅದೇ ಪ್ರಶಾಂತವಾದ ಮುಖ.... ತೆಳುವಾದ ಮಂದಹಾಸ.

ಆ ಕ್ಷಣದಿಂದ ಯಾಮಿನಿ ತನಗೆ ದೌರ್ಬಲ್ಯವಾಗಿ ಅಂಟಿಕೊಂಡಿದ್ದಳೆ? ರಾಜೀವನ ನಾಯಕತ್ವದ ಲಾಭ ತಮ್ಮ ಕೆಲಸಗಾರರಿಗೆ ದೊರಕಿದೆ ಎಂದಾಗಲೇ 'ಹ್ಯಾಂಡ್‌ಲೂಮ್' ಮಾರಾಟದ ಸಂಸ್ಥೆಯ ಅಧಿಕಾರಿಗಳಿಗೆ ಆಶ್ಚರ್ಯವಾಗಿತ್ತು. ಈ ತಂಟೆ ಪುಟ್ಟ ತಂಟೆಯಾಗಿಯೇ ಉಳಿಯುವುದಿಲ್ಲ ಎಂದು ಅಧಿಕಾರಿಗಳಿಗೆ ಮನವರಿಕೆಯಾದಾಗ, ರಾಜೀವನಿಗೆ ಕರೆ ಬಂತು, ಮಾತುಕತೆಗಾಗಿ. ಸಂಪು ಮುಗಿದು,

ತಂಟೆ ಇತ್ಯರ್ಥವಾಗಿ, ಜೋಶಿಗೆ ಕೆಲಸ ಮರಳಿ ದೊರಕಿಸಿ ಕೆಲಸಗಾರರ ಹೆಚ್ಚಿನ ಬೇಡಿಕೆಗಳಿಗೆ ಆಡಳಿತ ಸೈಯೆಂದು ಹದಿನೆಂಟು ತಿಂಗಳ ಜಗಳ ಬಗೆ ಹರಿದಿತ್ತು....

ಒಮ್ಮೆ ತಲೋಜಾದ, 'ಪ್ರೀತಿ ಇಂಡಸ್ಟ್ರೀಸ್'ನ ಕಾರ್ಮಿಕ ಸಂಘಟನೆಯಿಂದ ಅವಸರದ ಕರೆ ಬಂದಿತ್ತು: 'ಎರಡು ದಿನಗಳಿಂದ ಮಿಂಚಿನ ಮುಷ್ಕರದಲ್ಲಿದ್ದೇವೆ. ಕೂಡಲೆ ಬನ್ನಿ' ಎಂದು... ಅಧಿಕಾರಿಗಳನ್ನು ಭೇಟಿಯಾಗುವ ಮೊದಲು, ಕಾರ್ಮಿಕ ಮುಖಂಡರನ್ನು ಭೇಟಿಯಾದಾಗ ಎಲ್ಲ ಒಕ್ಕೊರಲಿನಿಂದ ಹೇಳಿದ್ದು ಅದನ್ನೇ.....ವಾಸಂತಿ ಎಂಬ ಕೆಲಸದಾಕೆಯನ್ನು ಪ್ರವೇಶದ ಕಾರ್ಡ್ ಪಂಚ್ ಮಾಡುವ ನೆಪದಲ್ಲಿ ಕೈ ಹಿಡಿದು ತನ್ನ ಕೋಣೆಯೊಳಗೆ ಎಳೆದುಕೊಂಡು ಹೋಗಿ ಫೂರ್ಕಾ ಕಾನೂಸಿಂಗ್ ಹಟ ಸಂಭೋಗ ನಡೆಸಿದ ಎಂದು.

ಅಧಿಕಾರಿಗಳ ಇದಿರು ಮಾತಾಡಲು ಕುಳಿತಾಗ ಒಮ್ಮಿಂದೊಮ್ಮೆಗೆ.... ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಲಾ ಕಲಿಯುತ್ತಿದ್ದ ದಿನಗಳ ನೆನಪಾಗಿತ್ತು. "ಸೀವೇ ಹೇಳಿ ರಾಜೀವ್, ಒಂದು ಪೋಲೀಸ್ ಕಂಪ್ಲೇಂಟ್ ಇಲ್ಲ. ಮೆಡಿಕಲ್ ರಿಪೋರ್ಟ್ ಇಲ್ಲ. ಮೂರು ತಿಂಗಳ ಹಿಂದೆ ಫೂರ್ಕಾ ಮಾಡಿದ್ದ ಎನ್ನಲಾದ ಅಪರಾಧ ನಿಜವೇ ಸುಳ್ಳೇ ಎಂದು ನಿರ್ಧರಿಸುವ ಬಗೆ ಹೇಗೆ? ಬರೇ ಆರೋಪದ ಮೇಲೆ ಇನ್ನೊಬ್ಬ ಬಡಪಾಯಿಯನ್ನು ಕೆಲಸದಿಂದ ತೆಗೆದು ಹಾಕಲು ನಾವು ಸಿದ್ಧರಿಲ್ಲ."

"ರಾಜೂ, ನೀನು ಇತಿಹಾಸದ ಗತಿಯನ್ನು ವಿವೇಚಿಸುವಾಗ ಶೋಷಣೆಯೇ ಪ್ರಧಾನವಾಗಿರುವ ಈ ಸಮಾಜದ ಸ್ವರೂಪವನ್ನು ಅದರ ಒಟ್ಟಂದದಲ್ಲಿ ಗುರುತಿಸು. ಬಿಡಿಬಿಡಿಯಾಗಿ ಅಲ್ಲ. ಯಾವುದು ಸತ್ಯ ಯಾವುದು ಅಸತ್ಯ ಎಂದು ನಿರ್ಧರಿಸುವುದು ನಿನ್ನ ಗುರಿ.... ಪರಿಸರವಲ್ಲ."

ಯಾರು ಯಾಮಿನಿಯೆ ಮಾತಾಡಿದ್ದು? ಅಲ್ಲ ಜಗದೀಶ್ ಪಟ್ನಾಯಿಕ್.

ಎಷ್ಟೋ ವರ್ಷಗಳಿಗೆ ಮೊದಲು... ಆಮೇಲೆ ತಮ್ಮಿಬ್ಬರ ಗುರಿ ಗಮ್ಯಗಳು ಒಂದೇ ಆಗಿದ್ದರೂ.... ಭೆಟ್ಟಿ ವಿರಳವಾಗಿ.... ಮತ್ತೆ ಪತ್ರಿಕೆಯಲ್ಲಿ ಓದಿದ ಸುದ್ದಿ.... 'ಕುಪ್ರಸಿದ್ಧ ನಕ್ಸಲಿಯ ಕಾರ್ಯಕರ್ತ ಜಗದೀಶ ಪಟ್ನಾಯಿಕ್ ಪೋಲಿಸರೊಡನೆ ನಡೆಸಿದ ಚಕಮಕಿಯಲ್ಲಿ ಮೃತನಾದ.' ಎಂದು "ಫೂರ್ಕಾ ಕಾನೂಸಿಂಗನನ್ನು ಕೆಲಸದಿಂದ ತೆಗೆಯದಿದ್ದರೆ, ಮುಷ್ಕರ ಮುಂದುವರಿಯುತ್ತದೆ. ಪರಿಣಾಮ ನಿಮಗೆ ತಿಳಿದೇ ಇದೆ."

ಮರುದಿನ ಮುಷ್ಕರ ಮುಗಿದಿತ್ತು. ಕಾರ್ಮಿಕ ಮುಂದಾಳು ಪಾಂಡೂ ಗಾಯಕವಾಡ್ "ರಾಜೀವಭಾಯಿ, ನಿಮ್ಮಿಂದಾಗಿ ನಾವು ಗೆದ್ದಿದ್ದೇವೆ.... ಲಾಲ್ ಸಲಾಮ್, ಮಜದೂರ್ ಏಕತಾ ವಿಜಯ ಅಸೋ" ಎಂದಿದ್ದ. ಮುಂದೊಂದು ದಿನ 'ಪ್ರಿತಿ ಯೂನಿಯನ್' ಸಭೆಗೆಂದು ತಲೋಜಾಕ್ಕೆ ಹೋಗಿದ್ದಾಗ, ಪಾಂಡೂ ಗಾಯಕವಾಡ ಬಂದಿರಲಿಲ್ಲ. ನಂಬಿಗಸ್ಥನಾಗಿದ್ದ 'ವರ್ಕ್ ಶಾಪ್' ಫೋರಮನ್ ಇಸ್ಮಾಯಿಲ್‌ನನ್ನು ಕೆದಕಿ ಕೇಳಿದಾಗ ತಿಳಿದುದಿಷ್ಟು: ಮೊದಲನೆಯ ಸಲ ಸಹ ವಾಸಂತಿಯ ಮೇಲಿನ ಅತ್ಯಾಚಾರದ ಆರೋಪವನ್ನು ಕಾನೂಸಿಂಗ್‌ನ ಮೇಲೆ ಹೊರಿಸಲು ಪಾಂಡುವಿಗೆ ಸಾಧ್ಯವಾಗಿತ್ತು. ಈ ಸಲ 'ಮೆಶಿನ್' ರೂಮ್ ಸೂಪರ್‌ವೈಸರ್ ಅದನ್ನು ನೋಡಿ ಫೋಟೋ ತೆಗೆದದ್ದರಿಂದ ಆತನ ಕೆಲಸ ಹೋಯಿತು. "ಹೀಗೋ" ಎಂದಿದ್ದ ರಾಜೀವ. ತಲೆಯಲ್ಲಿ ಗೊಂದಲ.

"ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಃ" ಯಾಕೆ ಹೀಗಾಗುತ್ತಿದೆ? ಕ್ರಾಂತಿಯ ಹರಿಕಾರರಾದ ಶ್ರಮಜೀವಿಗಳಲ್ಲೇ ಈ ರೀತಿಯ ಅನ್ಯಾಯ, ವೈಯಕ್ತಿಕ ಪ್ರತಿಷ್ಠೆಯ ಅಹಂಕಾರ.....

* * * * * *

ಈಗಾಗಲೇ ಮುಂಬಯಿ, ಥಾಣೆ, ವಾಗಳೆ, ಔದ್ಯಮಿಕ ವಸಾಹತು ಕ್ಷೇತ್ರಗಳಲ್ಲಿ ವಾಶಿ, ತಲೋಜಾ, ತುಬೇ, ಪನ್‌ವೇಲ್‌ಗಳಲ್ಲಿನ ಅಂಧೇರಿಯಿಂದ ವಿರಾರ್ ತನಕದ ಉದ್ಯಮದ ಕೇಂದ್ರಗಳಲ್ಲಿ, ಶಹರದ 'ಸೆಂಟ್ರಲ್ ಬಿಸಿನೆಸ್ ಡಿಸ್ಟ್ರಿಕ್ಟ್'ನಲ್ಲೇ ಅಡಕವಾಗಿರುವ ಕಾರಕೂನ ಸಂಘಟನೆಗಳಲ್ಲಿ , ಮುನಿಸಿಪಲ್, ಬಂದರಕ್ಕೆ ಸಂಬಂಧಿಸಿದ, ಧಕ್ಕೆಯ ಕೆಲಸಗಾರರ, ಅಂಗಡಿ ಗುಮಾಸ್ತರ, ವಿಶ್ವವಿದ್ಯಾನಿಲಯದ ಕರ್ಮಚಾರಿಗಳಲ್ಲಿ ಎಲ್ಲವುಗಳಲ್ಲೂ ಸಂಘಟನೆಯ ಅಭಿವೃದ್ಧಿಗಿಂತಲೂ, ವೈಯಕ್ತಿಕ ಪ್ರತಿಷ್ಠೆಯನ್ನು ಮೆರೆಸುವ ಆತುರವೇಕೆ ಕಂಡು ಬರುತ್ತಿದೆ....! ಎಲ್ಲ ಸಂಗ್ರಾಮದ ಆಯುಧಗಳೇ ಆಗಿರುವಾಗ, ಕೆಲವಕ್ಕೆ ತುಕ್ಕು ಹಿಡಿಸುವ ಪ್ರಯತ್ನ ಸೈನಿಕರಿಂದಲೇ ಆಗಬೇಕೇ....!

ಭೋಯಿವಾಡಕ್ಕೆ ಅಂದು ಹಿಂದಿರುಗುವಾಗ, ಜಗದೀಶ ಪಟ್ನಾಯಿಕ್ ಹಿಂದೊಮ್ಮೆ ಹೇಳಿದ್ದ ಮಾತು ನೆನಪಾಗುತ್ತಿತ್ತು. ''ರಾಜೂ, ಬದುಕುವುದಕ್ಕಿಂತಲೂ ಬದುಕನ್ನು ಗ್ರಹಿಸುವ ರೀತಿ ಮುಖ್ಯವೆಂದು ಕಂಡಾಗ ಮಾತ್ರ, ಇತಿಹಾಸಕ್ಕೆ ಹೊಸ ತಿರುವು ಕೊಡಲು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಇತಿಹಾಸವೇ ಮನುಷ್ಯನನ್ನು ಕಬಳಿಸುತ್ತದೆ.''

ಬಡಕಲು ಜೀವ, ದಪ್ಪಕನ್ನಡಕ, ತೀಕ್ಷ್ಣವಾದ ಕಣ್ಣಿನ ಪ್ರಭೆಯನ್ನು ಮರೆಸಲು ದಪ್ಪ ಕನ್ನಡಕ. ಅಂಗಿಯ ಭಾರ ಹೊರಲು ಕಷ್ಟವೆಂದು ಕಾಣುವ ಮೈಗೆ ಕೈಯಲ್ಲಿ ಕೋವಿ.... ''ಇತಿಹಾಸವೇ ನಮ್ಮನ್ನು ಕರೆಯುತ್ತಿದೆ, ರಾಜೂ.... ನಾವು ಸುಮ್ಮಗಿರಲು ಸಾಧ್ಯವೇ ಇಲ್ಲ....''

ಪ್ರೀತಿಯ ಜೆ.ಪಿ....ಜಗದೀಶ್....

ಪಾಂಡೂ ಗಾಯಕವಾಡ್ ಕೆಲಸ ಬಿಟ್ಟುದಕ್ಕೆ ಬೇಸರವಾಗುತ್ತಿರಲಿಲ್ಲ. ಪ್ರತಿಭಟನೆ ತೋರಿದ ಹೆಣ್ಣಿನ ಮೇಲೆ ಬಲಾತ್ಕಾರ ಮಾಡಿದ್ದಕ್ಕೆ ತಪ್ಪು ದಂಡ. ಆದರೆ ಅದೇ ಹೆಣ್ಣನ್ನು ಹಿಂದೆ ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಂಡು, ಈಗ ಬಾಪು ದೇಶಪಾಂಡೆಯ ಸಂಗಾತಿಯಾಗಿ ಕ್ರಾಂತಿಯ ಹರಿಕಾರನಂತೆ ಮುಂದುವರಿಯುವಾಗ ಮನದ ತುಂಬಾ ಸಂದೇಹದ ಅಲೆಗಳು.

''ಯಾಕೆ ಈ ಸಣ್ಣ ಪುಟ್ಟ ವಿಚಾರಗಳಲ್ಲೆ ಶೋಷಿತ ಸಮಾಜದ ಸಮಗ್ರ ಚಿತ್ರವನ್ನು ಮರೆಯುತ್ತೀಯ ರಾಜೂ. ಗಾಯಕವಾಡ್, ದೇಶಪಾಂಡೆ, ಕಾನೂಸಿಂಗ್, ಎಲ್ಲ ಅವಾಸ್ತವ ಮಹತ್ವ ಪಡೆಯುವ ಅಂಶಗಳಾಗಬಾರದು.... ಅವರಾರಿಗೂ ಮಹತ್ವವಿಲ್ಲ.... ಮಹತ್ವವಿರುವುದು ಮುಂದಿನ ಇತಿಹಾಸಕ್ಕೆ ಮಾತ್ರ.....''

ಕಾಳಾ ಚೌಕಿಯಿಂದ ಎರಡು ಮೈಲು ನಡೆದು ಭೋಯಿವಾಡದ ಮನೆ ಸೇರಿದಾಗ, ನೆರೆ ಮನೆಯ ಬಂಧುವಾಗಿ ಇರುವ ಗೋದೂ ಮಾವಶಿಯ ಚಹಾ ಕುಡಿಯುವ ಆಶೆ. ರಂಗೇರಿ ಚಾಳ್‌ನ ಮಾಳಿಗೆಯ ಮೆಟ್ಟಲೇರಿ ಮನೆಯ ಬಾಗಿಲ ಬಳಿ ಬಂದಾಗ, ಇಬ್ಬರು ತನ್ನ ದಾರಿ ಕಾಯುತ್ತಿರುವುದು ರಾಜೀವನ ಗಮನಕ್ಕೆ ಬಂತು. ಇಬ್ಬರೂ ನಮಸ್ಕರಿಸಿದರು: ''ರಾಮ್, ರಾಮ್, ರಾಜೀವ್ ಭಾಯಿ''

''ಏನು ಬೇಕಿತ್ತು?''

''ನಾವು ಬೇಲಾಪುರದಲ್ಲಿ 'ಕಲ್ಯಾಣ ಕೆಮಿಕಲ್ಸ್'ನಲ್ಲಿ ಕೆಲಸ ಮಾಡುತ್ತಿದ್ದೇವೆ. ನಾನು ಶಿಂದೆ, ಇವರು ಫರ್ನಾಂಡಿಸ್. ಮೊನ್ನೆ ಇಸ್ಮಾಯಿಲ್ ನಮ್ಮಲ್ಲಿಗೆ ಬಂದು ನಿಮಗೆ 'ಕಲ್ಯಾಣ ಕೆಮಿಕಲ್ಸ್' ಬಗ್ಗೆ ಮಾಹಿತಿ ಕೊಟ್ಟು ಬನ್ನಿ ಎಂದಿದ್ದರು. ಹೀಗಾಗಿ ಬಂದಿದ್ದೇವೆ ಸಾಬ್.''

ರಾಜೀವನ ಮುಖವರಳಿತು.... ನರಿಮನ್ ಪೈಂಟಿನ ಹದಿನೆಂಟನೆಯ ಮಾಳಿಗೆಯಲ್ಲಿ ರತ್ನಗಂಬಳಿ ಹಾಸಿದ, ಹವಾನಿಯಂತ್ರಿತ ಆಫೀಸಿನಲ್ಲಿ ''ನಿಮ್ಮ ಸ್ನೇಹ ನನಗೆ

ಮುಖ್ಯ'' ಎಂದಿದ್ದ ಸತೀಶ ಶರ್ಮಾ.... ಅವನ ಸಾಮ್ರಾಜ್ಯದ ಇಬ್ಬರು ಬಡಪಾಯಿ ಪ್ರಜೆಗಳು ಈಗ ನನ್ನ ಮುಂದೆ ಇದ್ದಾರೆ. ''ಹೌದು ಬನ್ನಿ 'ಕಲ್ಯಾಣಿ ಕೆಮಿಕಲ್ಸ್' ಬಗ್ಗೆ ಏನೂ ಗೊತ್ತಿಲ್ಲ. ತಿಳಿಯುವ ಆಸೆ ಬನ್ನಿ'' ಎಂದ.

ರಾತ್ರಿ ನಿದ್ರೆ ಬರದೆ ಅತ್ತಿಂದಿತ್ತ ಹೊರಳು ವಾಗ ಕಾಂಪೋಸ್ ನುಂಗಿದರೆ ನಿದ್ರೆ ಬಂದೀತೆ ಎಂಬ ಸಂದೇಹ ತಂದುಕೊಳ್ಳುವಾಗ ಎದೆಯ ಬಡಿತ ಜೋರಾಗುತ್ತಿತ್ತು. ಶ್ರೀಕಾಂತ ಆರಾಮ ಗೊರಕೆ ಹೊಡೆಯುತ್ತಿದ್ದ. ಪೋಲಿ ಯೋದ ಛಾಯೆಯನ್ನೂ ಆ ಗೊರಕೆಯಲ್ಲಿ ಗುರುತಿಸುವಂತಿರಲಿಲ್ಲ. ಆಗ ಕಸವಿಸಿಯಾಗು ತ್ತಿತ್ತು. ಒಮ್ಮೆಗೇ ಸಿಟ್ಟು ಬರುತ್ತಿತ್ತು. ಬಾಲ್ಕ ನಿಗೆ ಹೋಗಿ ಓದೋಣವೇ ಎಂದು ತೋರಿ ದರೂ ಓದುವುದು ಏನನ್ನು? ಅಪ್ಪಾಜಿಯ ನೆನಪು ತರುವ 'ಅಭಿಜ್ಞಾನ ಶಾಕುಂತಲ' 'ಸ್ವಪ್ನವಾಸವದತ್ತ', 'ಉತ್ತರರಾಮಚರಿತ

'ರಾತ್ರಿರೇವ ವ್ಯರಂಸೀತ್.'

ಆಗ ಮನಸ್ಸು ಕಹಿಯಾಗುತ್ತದೆ. ಹಾಳೆ ಮಗುಚುವಾಗ ಯಾಕೆ ಮತ್ತೆ ಪಳೆಯುಳಿಕೆಗ ಳಿಗೆ ನೇತುಕೊಳ್ಳುತ್ತಿದ್ದೇನೆ ಎಂಬ ಕಳವಳ ಕಾಡುತ್ತದೆ. ಆದರೆ ಶ್ರೀಕಾಂತನ ಗೊರಕೆ ಕೇಳುತ್ತಿರುವಾಗ, ಕಾವಲಿನ ಘೂರ್ಕಾ ಆಗೊಮ್ಮೆ ಈಗೊಮ್ಮೆ ದಂಟೆಯ ಸದ್ದು ಮಾಡುವಾಗ ಬ್ರಾಹ್ಮಣ ಸಭಾದ ನಾಟಕಗಳು ನೆನಪಾಗುತ್ತವೆ. 'ಮೃಚ್ಛಕಟಿಕ' 'ಮುದ್ರಾರಾ ಕ್ಷಸ' 'ಶಾಕುಂತಲ'.

ಈಗ ಯಾರು ಕರೆ ಕಳುಹಿಸಿದರೂ ''ಇಲ್ಲ, ಸಾಧ್ಯವಿಲ್ಲ. ಅಭಿನಯಿಸುವುದಿಲ್ಲ''.

ಎಂದೇ ಉತ್ತರ. ಯಾಕೆ? 'ಯಾಕೊ ಬೇಡ' ಎಂದೇ'' ಉತ್ತರ. ಒತ್ತಾಯ ತರುವ ಅಪ್ಪಾಜಿಯಿಲ್ಲ. ಒಮ್ಮೆ ಅಣ್ಣ ಹೇಳಿದ್ದ, ''ಮನಸ್ಸಿನ ಬೇಸರ ಕಳೆಯಲು ಅದನ್ನಾ ದರೂ ನೆಚ್ಚಿಕೊಳ್ಳಬಾರದೇ ಯಾಮಿ....''

ಶ್ರೀಕಾಂತನ ಅನಿರೀಕ್ಷಿತ ಪೋಲಿಯೋ ಒಮ್ಮೆಲೇ ತನ್ನ ವ್ಯವಸ್ಥಿತ ಜೀವನಕ್ರಮವನ್ನು ಬದಲಿಸಿತ್ತು. ಯೋಚನೆಯೇ ಮಿಂಚದ, ತೀರ ಸಹಜವೆಂದು ಭಾಸವಾಗಿದ್ದ ಜೀವನ ಗತಿಗೆ ಬ್ರೇಕ್ ತಗುಲಿಸಿದಂತೆ ಶ್ರೀಕಾಂತನ ಆರಂಭದ ನರಳಾಟ, ಆಸ್ಪತ್ರೆಯ ಕಾಯು ಏಕೆ, ಮನೆಗೆ ಮರಳಿ ಶುಶ್ರೂಷೆ, ಚಿಕಿತ್ಸೆ, ಮೆಲ್ಲಮೆಲ್ಲನೆ ತನ್ನ ಜೀವನಕ್ಕೆ, ಉದ್ಯೋ ಗಕ್ಕೆ, ಅವಾಸ್ತವ ಮಹತ್ವ ತಂದು ಕೊಟ್ಟಾಗ..... ತಾನು ಮೆಚ್ಚಿದ್ದ ಜ್ಯೋತ್ಸ್ನಾ ಭೋಳೆಯ 'ಕ್ಷಣ ಆಲಾ, ಭಾಗ್ಯಾಚಾ.... ಆಲಾ ಸೌಖ್ಯಾಚಾ....', ಕುಲವಧು ನಾಟಕದ ಪ್ರಸಿದ್ಧ ಗೀತೆ ನೆನಪಾಗುತ್ತದೆ

ತನ್ನ ಮನೆಯ ಮೂರು ಕೋಣೆಗಳ ಆವ ರಣದಲ್ಲಿ ಶ್ರೀಕಾಂತನೊಬ್ಬನೇ ಸತ್ಯ... ಆತ ದುಡಿಯುತ್ತಿದ್ದಾಗ, ದುಡಿದು ಮರಳುತ್ತಿ ದ್ದಾಗ, ಮದುವೆಯಾಗಿ ಕೆಲವು ದಿನ ದಾದ ರಿನ ಬೀದಿ ಬೀದಿಗಳನ್ನು ಸುತ್ತುತ್ತಿದ್ದಾಗ, ಶಿವಾಜಿ ಮಂದಿರದಲ್ಲಿ, ಮರಾಠಿ ನಾಟಕಗಳ ಟಿಕೇಟು ಪಡೆಯಲು ಕಾಯುತ್ತಿದ್ದಾಗ, ಇದ್ದ ಜೀವಂತತೆಯನ್ನು ಈಗ ನೆನಸಿಕೊಳ್ಳುವಾಗ, ಶ್ರೀಕಾಂತನೊಬ್ಬನೇ ಸತ್ಯವೆಂದು ಕಾಣುತ್ತದೆ.

ಮುಂದೆ ಒಮ್ಮಿಂದೊಮ್ಮೆಗೇ ಶ್ರೀಕಾಂತ ರೋಗಿಯಾಗಿ ಅವನ ಕೆಲಸ ಹೋಗಿ, ಅವನ ಕಾಲುಗಳೇ ಪ್ರಶ್ನೆಯಾದಾಗ, ಆತ ನೆಚ್ಚಿಕೊಳ್ಳ ಬೇಕಾಗಿ ಬಂದ 'ಕ್ರಚ್' ಮಾತ್ರ ಸತ್ಯವೆನಿ ಸಿತ್ತು. ಅದೇ ಸಂದರ್ಭದಲ್ಲಿ ಅಪ್ಪಾಜಿ ತೀರಿ ಕೊಂಡಿದ್ದರು. 'ಕೂಡಲೇ ಬರಬೇಕಂತೆ' ಎಂದು ಕರೆಬಂದಾಗ ''ನೀವು ಬರುತ್ತೀರಾ? ಸಖಾರಾಮ ಕುರ್ಚಿಯಲ್ಲಿ ಕೆಳಗೆ ಹೊತ್ತು ತರುತ್ತಾನೆ. ಆ ಮೇಲೆ ಟ್ಯಾಕ್ಸಿಯಲ್ಲಿ ಹೋಗೋಣ.''

''ನಾನೂ ಅರ್ಧ ಸತ್ತಿದ್ದೇನಲ್ಲ'' ಎಂದು ಬಂದಿತ್ತು ಶ್ರೀಕಾಂತನಿಂದ ಉತ್ತರ.

ಅಪ್ಪಾಜಿ ತನಗಾಗಿಯೇ ಕಾದಂತಿತ್ತು. ಅವರು ಕೊನೆಗೆ ತನ್ನ ತೊದಲು ನಾಲಿಗೆ

# ರೈತ ಬಂಧುಗಳೇ! ಎತ್ತುಗಳ ಬಲವೇ ನಿಮ್ಮ ಜೀವನಕ್ಕೆ ಬೆಂಬಲವಲ್ಲವೇ ?

ರೈತರ ಜೀವನದಲ್ಲಿ ಎತ್ತುಗಳು ಎಷ್ಟು ಮುಖ್ಯವಾಗಿರುತ್ತವೆ ಎಂಬುದು ಪ್ರತಿಯೊಬ್ಬ ರೈತನಿಗೂ ಚೆನ್ನಾಗಿ ಗೊತ್ತಿದೆ. ಅಲ್ಲಿಲ್ಲಿ ಹೋಗುವುದು, ಉಳುಮೆ ಮಾಡುವುದು, ನೀರಾವರಿಗಾಗಿ ನೀರು ಎತ್ತುವುದು, ಕಾಳೊಕ್ಕುವುದು ಮೊದಲಾದ ರೈತರ ಹೆಚ್ಚುಕಡಿಮೆ ಎಲ್ಲಾ ಕೆಲಸಗಳು ಎತ್ತುಗಳಿಂದಲೇ ಮಾಡಲ್ಪಡುತ್ತವೆ.

ಒಂದು ವೇಳೆ ಎತ್ತುಗಳು ಕಾಯಿಲೆ ಬಿದ್ದರೆ, ಏನಾದರೊಂದು ಅಪಘಾತವಾಗಿ ಅವು ಕೆಲಸಕ್ಕೆ ಬಾರದಂತಾದರೆ, ಅಥವಾ ಸತ್ತು ಹೋದರೆ ರೈತನ ಇಡೀ ಜೀವನವೇ ತತ್ತರಿಸುವುದು.

ಇಂತಹ ಸಂಕಟಗಳಲ್ಲಿ ರೈತರಿಗೆ ಆಧಾರ ನೀಡುವುದಕ್ಕಾಗಿಯೇ ಇದೆ ನ್ಯೂ ಇಂಡಿಯಾದ ಪಶುಧನ ವಿಮೆ.

ಪಶುಧನ ವಿಮೆಯ ದರ : ಪಶುವಿನ ಬೆಲೆಯ ಪ್ರತಿ 100 ರೂಪಾಯಿಗಳ ಮೇಲೆ ಹೆಚ್ಚೆಂದರೆ ವರ್ಷಕ್ಕೆ 3 ರೂಪಾಯಿ. ಪಶುವಿನ ವಿಮೆ ಸಮಗ್ರ ಗ್ರಾಮ ವಿಕಾಸ ಯೋಜನೆಯ ಅಂತರ್ಗತ ಆಗುವುದಾದರೆ ವಿಮೆಯ ದರ ಇನ್ನೂ ಕಡಿಮೆ—ಎಂದರೆ ವರ್ಷಕ್ಕೆ 2.25 ರೂಪಾಯಿ, ಅಷ್ಟೆ !

ನ್ಯೂ ಇಂಡಿಯಾದ 1000 ಕ್ಕಿಂತಲೂ ಹೆಚ್ಚು ಆಫೀಸುಗಳು ದೇಶದಲ್ಲೆಲ್ಲ ಹರಡಿವೆ.

ಹೆಚ್ಚಿನ ವಿವರಗಳಿಗಾಗಿ ನಿಮ್ಮ ಸಮೀಪದ ಆಫೀಸಿಗೆ ಬನ್ನಿರಿ, ಇಲ್ಲವೆ ಏಜಂಟರನ್ನು ಕಾಣಿರಿ. ನಿಮ್ಮ ಸೇವೆಗಾಗಿ ದೂರದೂರದ ಹಳ್ಳಿಗಳಲ್ಲಿಯೂ ನ್ಯೂ ಇಂಡಿಯಾದ ಗ್ರಾಮೀಣ ಪ್ರತಿನಿಧಿಗಳಿದ್ದಾರೆ.

**ಪಶುಧನ ವಿಮೆಗಾಗಿ**

**ನ್ಯೂ ಇಂಡಿಯಾ ಎಶ್ಯುರೆನ್ಸ್**





ಜನರಲ್ ಇನ್ಶುರೆನ್ಸ್ ಕಾರ್ಪೊರೇಶನ್ ಆಫ್ ಇಂಡಿಯಾದ ಸಹಾಯಕ ಸಂಸ್ಥೆ

**ಸಂಕಟಕಾಲದಲ್ಲಿ ನಿಮಗೆ ಆಧಾರ**

R K SWAMY/NIA/4292 KN-B

ಯಿಂದ ಕೇಳಿದ್ದು " 'ಗೀತಾರಹಸ್ಯ' ಸ್ವಲ್ಪ ಭಾಗ ಓದು" ಎಂದು.... ಓದುತ್ತಿದ್ದಂತೆಯೇ ದೀಪ ನಂದಿತ್ತು.

ಆಮೇಲಿನ ಘಟನೆಗಳು ಅನಿರೀಕ್ಷಿತವಾಗಿ ನಡೆದುಹೋದವು.

'ಲಾಲ್ ಬಾವುಟಾ ಜಿಂದಾಬಾದ್' ಹ್ಯಾಂಡ್‌ಲೂಮ್ ಹೌಸನ ಎದುರು ಕಾರ್ಮಿಕರ ಮುಷ್ಕರ ನಡೆದಾಗ, 'ಓ ರಾಜೀವ ಭಾಯಿ ಆಗಯಾ! ಕಾಮ್ರೇಡ್ ರಾಜೀವ್ ಭಾಯಿ' ಸಂಘರ್ಷದ ಸಂಘಟನೆಯ ನಾಯಕ. ಶಹರದ ಕಾರ್ಮಿಕವರ್ಗದ ಸಿಂಹಶಕ್ತಿಯ ಪ್ರತೀಕ.... ಜನ ನಾಯಕ.... ತಮ್ಮ ಸಂಘಟನೆಗೂ ನಾಯಕನಾಗಿದ್ದ.

ಬುದ್ಧಿಮತ್ತೆಯ ಪ್ರತೀಕವೆನಿಸುವ ಕಣ್ಣುಗಳಲ್ಲಿ ಹೊಳಪು. ನಿಂತ ಆಕರ್ಷಕ ಭಂಗಿಯಲ್ಲಿ ನಾಯಕತ್ವದ ಚುಂಬಕ ಶಕ್ತಿ. ಪರಿಚಯ ಅಭಿಮಾನವಾಗಿ, ಅಭಿಮಾನ ಸ್ನೇಹವಾಗಿ, ಸ್ನೇಹ ಆತ್ಮೀಯತೆಯ ಮಟ್ಟ ಮುಟ್ಟಿದಾಗ, 'ರಾಜೂ'

"ಏಕೋ ನಿನ್ನ ಸಹಾಯ ಬೇಡುವ ಆಸೆಯಾಗುತ್ತಿದೆ ಯಾಮಿನೀ.... ನನ್ನ ಕೆಲಸದಲ್ಲಿ ತುಸು ನೆರವಾಗಲು ಸಾಧ್ಯವೇ? ಸಂಜೆಯ ಹೊತ್ತು, ನಿನಗೆ ಬಿಡುವಿದ್ದಾಗ.... ಸ್ವಲ್ಪ ಟೈಪಿಂಗ್ ಅಗತ್ಯವಿದ್ದಾಗ, ಆಮೇಲೆ ನೀರಸವೆನಿಸಬಹುದಾದ ಅಂಕಿ ಸಂಖ್ಯೆಗಳ ತಿಳುವಳಿಕೆ. ಓದು, ನಿನ್ನ ಬಟ್ಟೆ ಅಂಗಡಿಗೂ ದೊಡ್ಡದಾದ ವ್ಯವಸ್ಥೆಯ ಸ್ಪಷ್ಟ ಚಿತ್ರಣ ಸಿಗಬಹುದು ಅಷ್ಟೇ. ಈ ಕೆಲಸಕ್ಕೆ ಸಂಬಳವಿಲ್ಲ. ಗೋದೂಮಾವಶಿಯ ಚಹಾ ತಡವಾದರೆ ನಿನ್ನನ್ನು ಮನೆಗೆ ತಲುಪಿಸುವ ಹೊಣೆಗಾರಿಕೆ. ಯೋಚಿಸಿ ನೋಡು ಒತ್ತಾಯವಿಲ್ಲ."

"ನೋ ಕಮೇಂಟ್" ಯಾಮಿನಿ ಕಿಲಕಿಲನೆ ನಕ್ಕುಬಿಟ್ಟಿದ್ದಳು ಗೋಡೆಯ ಮೇಲಿನ ಜಗದೀಶ ಪಟ್ನಾಯಿಕ್‌ನ ಚಿತ್ರ ನೋಡುತ್ತ. ಹೀಗೆ ತೆರೆದುಕೊಂಡಿತ್ತು ಬೇರೆಯೆ ಪ್ರಪಂಚ.... ರಾಜೀವನ ಪ್ರಪಂಚ.....ಹಾಗಾಗಿ ತನ್ನ ಪ್ರಪಂಚ ಕೂಡ.

ಮೊದಮೊದಲು ಭಯವಾಗುತ್ತಿತ್ತು. ಈ ಭೋಯಿವಾಡ[illegible] [illegible]ರಡು ಕೋಣೆಗಳಲ್ಲಿ ಎಂಥ ಜನರೆಲ್ಲ ರಾಜೀವನನ್ನರಸಿ ಬರುತ್ತಾರೆ..... ಖಾಕಿಯ ಟ್ಯಾಕ್ಸಿ ಡ್ರೈವರ್, ಬಿಳಿ ಟೊಪ್ಪಿಗೆಯ ಮಾತಾಡಿ ಕೆಲಸಗಾರ, ಅರ್ಧ ಚಡ್ಡಿಯ ಹೋಟೆಲ್ ಕೆಲಸಗಾರ, ನೂರಾರು ವೃತ್ತಿಗಳಲ್ಲಿ ಬದುಕುವ ಶ್ರಮಿಕ ವರ್ಗ, ಪುಢಾರಿಗಳು, ಮರಿ ಪುಢಾರಿಗಳು ಯೂನಿಯನ್ ಕೆಲಸಗಾರರು, ಬೆಳೆಯುತ್ತಿರುವ ಸರಕಾರ ಉದ್ಯಮಗಳ ಸಂಘಟಿತ ಕೆಲಸಗಾರರ ಪ್ರತಿನಿಧಿಗಳು, ರಾಜೀವ್ ಭಾಯಿ, ಅಣ್ಣಾ ಸಾಹೇಬ್, ಸಾಥೀ, ರಾಜೀವ್ ಮಾತಿನ ಸಂತೆ ಭಾಷೆಗಳ ಗೊಂದಲ, ಮೊದಲು ಭಯ, ಈಗ ರೂಢಿ, "ಯಾಮೀ," ಪರಿಚಯದ ಸಲುಗೆ, ಸಖ್ಯ ತಂದ ಆತ್ಮೀಯತೆ, ಕುದುರಿಸಿದ ಹೆಸರಿನ ಹ್ರಸ್ವ ಸ್ವರೂಪ.

ಒಂದು ತಿಂಗಳ ಹಿಂದೆ ರಾಜೀವ ಪುಣೆ-ಚಿಂಚವಾಡ ವಿಭಾಗಕ್ಕೆ ಕೆಲಸದ ನಿಮಿತ್ತ ಹೋಗಬೇಕಾಗಿ ಬಂದಾಗ, ಯಾಮಿನಿಗೆ, "ಬರುವೆಯೇನು? ಒಂದು ದಿನವಿಡೀ ನನ್ನ ಜಗತ್ತಿನಲ್ಲಿ ತಿರುಗು ಬಾ...." ಎಂದಿದ್ದ. 'ಓಕೆ' ಎಂದಿದ್ದಳು ಯಾಮಿನಿ.

ಶ್ರೀಕಾಂತನಿಗೆ 'ಕ್ಯಾಡ್‌ಬರಿ'ಯ ತುಂಡನ್ನು ಕೊಟ್ಟು "ರಾತ್ರಿಯಾಗುವುದರೊಳಗೆ ಬರುತ್ತೇನೆ" ಎಂದು ಮನೆ ಬಿಟ್ಟು ರಾಜೀವನ ಜೊತೆಯಲ್ಲಿ ಜೀಪ್‌ನಲ್ಲಿ ಪ್ರಯಾಣಿಸಿ ಕಂಡ ರಾಜೀವನ ಜಗತ್ತು.

* * * * * * *

"ಏಟ್ಟು ಸಾಲಯಾನ್ ಸತ್ತು ಹೋದ."

"ಏಷಿನ್ ಸಿಮೆಂಟ ಕಂಪೇನಿಸ್!"

"ಹೌದು!.... ಬಹಳ ಉದಾರತನ ತೋರಿಸುವವರಂತೆ, [illegible]ದು, ಎರಡು, ಎರಡು, ಎಂದು, ಆರು ತಿಂಗಳು ರಜೆ

ಕೊಟ್ಟರೂ ಅವನು ಬದುಕಲಿಲ್ಲವೆನ್ನುವ ಆಡಳಿತ, ತಾನೇ ಅವನನ್ನು ಕೊಂದದ್ದು ಎಂದು ತಿಳಿಯುವುದೇ ಇಲ್ಲ.... ದಿನಕ್ಕೆ ಒಂದು ಕಪ್ ಹಾಲು ಕುಡಿಯುವ ಸ್ಥಿತಿಯಲ್ಲಿರದ ಈ ಸಾಲಿಯಾನ್, ಅಮೋನಿಯಾ ವಾಸನೆಯ ಗಾಳಿ ಕುಡಿದೇ ಎಂಟು ವರ್ಷ ಕಳೆದ. 'ಬ್ಲೂ ಪ್ರಿಂಟಿಂಗ್' ಮೆಶಿನ್ ಕೆಲಸ ಮಾಡುತ್ತಾ ಪೊಟೇಶಿಯಂ ಫೆರಿಸಾಯನೈಡ್ ಮತ್ತು ಅಮೋನಿಯಮ್ ಫೆರಿಕ್ ಸೈಟ್ರೇಟ್ ದೇಹಕ್ಕೆ ಎಷ್ಟು ಹಿತಕಾರಿ ಎಂಬುದನ್ನು ಮನಗಂಡೇ ಸಾಲಿಯಾನ್ ಆ ಮೆಶಿನ್‌ನಲ್ಲಿ ದುಡಿದೂ ದುಡಿದೂ ಸತ್ತ.... ಈಗ ಉದಾರ ಮನಸ್ಸಿನಿಂದ ನಾಲ್ಕು ಸಾವಿರ ಪರಿಹಾರ ಕೊಟ್ಟು ಇನ್ನೊಬ್ಬ ಸಾಲಿಯಾನ್‌ನನ್ನು ಬಲಿಗೆ ಸಿದ್ಧ ಮಾಡಲಿರುವ ಈ ಕಂಪೆನಿಗೆ ಬೆಂಕಿ ಕೊಡುವುದು ಹೇಗೆ ಹೇಳು ಯಾಮಿನೀ...."

ಯಾಮಿನಿ ರಾಜೀವನ ಮುಖವನ್ನೇ ನೋಡುತ್ತಿದ್ದಳು.

"ಈ ಉತ್ಪಾದನಾ ಯಂತ್ರಕ್ಕೇ ಕೋಟಿಗಟ್ಟಲೆ ಲಾಭ ಸುರಿಸುವ ಯಂತ್ರಕ್ಕೆ ಆರು ಸಾವಿರ ಕೈಗಳು... ಆದರೆ ಬುದ್ಧಿಯೊಂದೇ.... ಗುರಿಯೊಂದೇ..... ಎರಡು ಕೈಗಳು ಕಡಿದರೆ ಮತ್ತೆರಡು ಕೈಗಳು ಆ ಜಾಗವನ್ನು ತುಂಬಿಕೊಡಬಹುದು. ಆ ಕೈಗಳು ಕೈಗಳೇ, ಅವುಗಳ ಹಿಂದೆ ಪ್ರಶ್ನಿಸುವ ಬುದ್ಧಿಯನ್ನಿರಿಸಿಕೊಳ್ಳುವುದನ್ನು ಆಡಳಿತ ಸಹಿಸುವುದಿಲ್ಲ... ಉಪಯೋಗಿಸಲು ಸಾಧ್ಯವಾಗದಂಥ ಸ್ಥಿತಿಯನ್ನು ಆ ಅಮೋನಿಯಾ ಯಂತ್ರ ತಲುಪಿದಾಗ, ಅದನ್ನು ತೆಗೆದೊಗೆಯುವ ಹಾಗೆಯೆ ಈ ಕೈಗಳನ್ನೂ ಕತ್ತರಿಸಿ ಹಾಕಬಹುದು.... ಇನ್ನು ಈ ನಾಲ್ಕು ಸಾವಿರ ಪರಿಹಾರ ಧನವನ್ನು ಹತ್ತು ಸಾವಿರಕ್ಕೇರಿಸಲು, ಹತ್ತಾರು ಸಲ ಕಂಪೆನಿಗೆ ಎಡತಾಕಬೇಕು. ಬುದ್ಧಿ ಹೇಳಬೇಕು. ಮನವೊಲಿಸಬೇಕು. ಬೆದರಿಕೆ ಹಾಕಬೇಕು. ಹಾಗೆ ಹತ್ತೋ ಹನ್ನೆರಡೋ ಸಾವಿರ ಸಿಕ್ಕಿತೆಂದಾದರೆ ಎರಡೂ ಕೈಗಳನ್ನೂ ಕಡಿದುಕೊಂಡ ಒಂದು ಕುಟುಂಬಕ್ಕೆ ಅಷ್ಟಾದರೂ ದೊರಕಿತೆಂಬ ತೃಪ್ತಿ.... ಸಮಸ್ಯೆ Back to square one."

ಎಂದಿನದೇ ಮಾತಿನ ಮೋಡಿ, ಆ ದಿನ.... ಪುಣೆಯಿಂದ ಮರಳುತ್ತಿದ್ದಾಗ ಖಂಡಾಲ ಘಟ್ಟ ಇಳಿಯುತ್ತಿದ್ದಾಗ ಜೀಪ್‌ನಲ್ಲಿ ಹೇಳಿದ ಮಾತಿದು.

ಪುಣೆ ತಲುಪುವುದಕ್ಕೆ ಮೊದಲೇ ಚಿಂಚ್‌ವಾಡ್ - ಪಿಂಪ್ರಿ ವಿಭಾಗವನ್ನು ಹೊಕ್ಕಾಗಲೇ ರಾಜೀವನ ಕೆಲಸ ಆರಂಭವಾಗಿತ್ತು..... ಪುಣೆ ಮುಂಬಯಿ ರಾಷ್ಟ್ರೀಯ ಹೆದ್ದಾರಿಯ ಇಕ್ಕೆಲಗಳಲ್ಲಿ ಬೃಹತ್ ಉದ್ಯಮ ಸಂಸ್ಥೆಗಳ ಕಾರ್ಯಾಗಾರಗಳು.... ವಿದೇಶೀಯ ಹೆಸರುಗಳಿಂದ ಭಾರತದ ಉದ್ಯಮ ಕ್ಷೇತ್ರದಲ್ಲಿ ಮೆರೆಯುತ್ತಿರುವ ಹಲವಾರು ಸಂಸ್ಥೆಗಳ ಕಾರ್ಖಾನೆಗಳು, ಕೇಂದ್ರಾಲಯಗಳು,..... ಸೊಗಸಾದ ಹುಲ್ಲಿನ ಹಾಸಿಗೆ, ಹೂದೋಟ, ಕಾರಂಜಿಗಳಿಂದ ಅಲಂಕೃತವಾದ ಪ್ರದೇಶದ್ವಾರಗಳು ಕೊಂಡೊಯ್ಯುವುದು ಒಳಗಡೆ ಉತ್ಪಾದನೆಯ ಯಂತ್ರಗಳೆಡೆಗೆ.... ನೂರಾರು ಯಂತ್ರಗಳಲ್ಲಿ ದುಡಿಯುವ ಸಾವಿರಾರು ಕಾರ್ಮಿಕರೆಡೆ. ಬಾಗಿಲಲ್ಲಿ ರಕ್ಷಕ ವಿಭಾಗದ ಸಿಬ್ಬಂದಿಗಳ ಕೈಯಲ್ಲಿ, ತಾನು ಬಂದಿದ್ದೇನೆ ಎಂದು ಮುದ್ರೆಯೊತ್ತಿಸಿಕೊಂಡು ಒಳಸೇರುವ ಕಾರ್ಮಿಕ 'ಶಿಫ್ಟ್' ಮುಗಿದು ಮರಳುವ ತನಕ ಯಂತ್ರದ ಬಿಡಿ ಭಾಗ..... ಅಷ್ಟರ ತನಕ ಆತ ಕೇವಲ ಉತ್ಪಾದನೆಗೆ ಸಂಬಂಧಿಸಿದ ಸಲಕರಣೆ. ಆ ಸಲಕರಣೆಯ ಯೋಗ್ಯತೆಯನ್ನು ನಿರ್ಧರಿಸಿ ಆಡಳಿತ ಅದಕ್ಕೆ ಬೆಲೆ ಕಟ್ಟುತ್ತದೆ, ಯಂತ್ರದ ಬಿಡಿಭಾಗಗಳಿಗೆ ಬೆಲೆ ಕಟ್ಟುವಂತೆ. ಅದೇ ಆಡಳಿತೆಯ ನಿಯಂತ್ರಕ ಶಕ್ತಿಗಳು ಮಾತ್ರ ಮನುಷ್ಯರಾಗಿಯೆ ಉಳಿಯುತ್ತಾರೆ. ಅವರು ಪ್ರವೇಶಿಸುವಾಗಲೇ ಘೂರ್ಕಾ ಬಂದು ಬಾಗಿಲು ತೆರೆಯುತ್ತಾನೆ. ಸಲಾಮ್ ಹೊಡೆಯುತ್ತಾನೆ..... ಒಳಗಡೆ ಹವಾನಿಯಂತ್ರಿತ ಆಫೀಸಿನಲ್ಲಿ ಇವರಿಗೆ ಕೆಲಸ ಕಾದಿ

ರುತ್ತದೆ. ಯಂತ್ರಕ್ಕೆ ನಿರ್ದೇಶನ ಕೊಡುವ ಅಸ್ತಿತ್ವ ಇವರದಾಗಿರುವುದರಿಂದ, ಇವರು ಯಂತ್ರದ ಬಿಡಿ ಭಾಗಗಳಾಗಿ ಉಳಿಯುವುದಿಲ್ಲ. ಮೇಲ್ವಿಚಾರಕರಾಗಿ ಮೆರೆಯುತ್ತಾರೆ. ಇವರ ಪ್ರವೇಶ ನಿರ್ಗಮನ, ಎರಡೂ ಇವರ ಮಹತ್ವವನ್ನು ಸಾರುವ, ಸಂಸ್ಥೆಯ ಇತಿಹಾಸದ ಕಾಲಗತಿಯನ್ನು ಸೂಚಿಸುವ ಕಾಲಚಕ್ರದ ವಿಶಿಷ್ಟ ಅವಸ್ಥೆಗಳು....

ಆದರೆ 'ಶಿಫ್ಟ್' ಮುಗಿದ ಮೇಲೆ, ಈ ತನಕ ಯಂತ್ರದ ಸಲಕರಣೆಯಾಗಿ, ಉತ್ಪಾದನೆಗೆ ಕಾರಣವಾಗಿದ್ದ ಕಾರ್ಮಿಕ, ಹೊರ ಬಾಗಿಲ ಬಳಿ, ಸ್ವಾರ್ಥದ, ಮಾನವೀಯ ದೌರ್ಬಲ್ಯದ, ಸಂಶಯಕ್ಕೊಳಗಾದ ಮನುಷ್ಯನಾಗುತ್ತಾನೆ. ಆತ ರಕ್ಷಕ ವಿಭಾಗದ ಅಧಿಕಾರಿಗಳೆದುರು ಕೈಯೆತ್ತಿ ನಿಲ್ಲುತ್ತಾನೆ. ಆತನ ಅಂಗಿಯ ಕಿಸೆಗಳು, ತುತ್ತಿನ ಚೀಲ, ಎಲ್ಲ ಅವಸರದ ಯಂತ್ರವತ್ತಾದ ತಪಾಸಣೆಗೆ ಗುರಿಯಾಗಿ, ತಾನು ಕಳ್ಳನಲ್ಲ ಎಂದು ಸಾಬೀತುಪಡಿಸಿ ಹೊರಗೆ ಬಂದಾಗ ಆತ ಉಸಿರಾಡುತ್ತಾನೆ...

ಚಿಂಚ್‌ವಾಡದ ಒಂದು ಉದ್ಯಮಸಂಸ್ಥೆಯ ಬಾಗಿಲಲ್ಲಿ ರಾಜೀವನ ಜೀಪ್ ನಿಂತಾಗ ಬೆಳಗಿನ ಶಿಫ್ಟ್ ಮುಗಿಸಿ ಕೆಲಸಗಾರರೆಲ್ಲ ಹೊರಗಡೆ ಮರಳುತ್ತಿದ್ದರಷ್ಟೆ. ಹಿಂಡು ಹಿಂಡಾಗಿ ಬರುತ್ತಿದ್ದ ಅವರನ್ನು, ಜೀಪ್‌ನಿಂದ ಕೆಳಗಿಳಿದ ಯಾಮಿನಿ ನೋಡುತ್ತಿದ್ದಾಗ, ರಾಜೀವನ ಗುರುತು ಹಿಡಿದು ಕಾರ್ಮಿಕರೆಲ್ಲ ಒಮ್ಮೆಗೇ "ರಾಜೀವಭಾಯಿ ಆಗಯಾ" ಎಂದು ಕೂಗಿಕೊಂಡಾಗ ಯಾಮಿನಿಯ ಗಮನಕ್ಕೆ ಬಂದದ್ದು ಸಂಸ್ಥೆಯ ಪ್ರವೇಶದ್ವಾರದ ಕಂಬಗಳ ಮೇಲೆ ಜೋತಾಡಿಕೊಂಡಿದ್ದ ಕೆಂಪು ಬಾವುಟಗಳು.

ಪ್ರತಿಯೊಂದು ಕಡೆಯೂ ಎಲ್ಲರಲ್ಲೂ ಆತ್ಮವಿಶ್ವಾಸ ಮೂಡಿಸುವ, ಯಾರೂ ಕಡಿದುಕೊಳ್ಳಲಿಚ್ಛಿಸದ ಬಾಂಧವ್ಯವನ್ನು ಸೃಷ್ಟಿಸುವ ಯೋಗ್ಯತೆ ರಾಜೀವನಿಗಿತ್ತು. ಸಂಘಟಿತ ಕಾರ್ಮಿಕ ವರ್ಗವನ್ನು ಹೋರಾಟಕ್ಕೆ ಸಿದ್ಧಪಡಿಸುವ, ಇತಿಹಾಸಕ್ಕೆ ದಿಕ್ಕು ತೋರಿಸುವ ಮಾತುಗಾರಿಕೆ. ವಿಷಯ ಸರಳ.... ಸಂಬಳ.... ಹೆಚ್ಚುವರಿ ಭತ್ತೆ... ಮದ್ದಿನ ಹಣ.... ಮನೆ ಬಾಡಿಗೆ.... ಆದರೆ ಆ ಮಾತುಗಳಲ್ಲೆ, ಕಾರ್ಮಿಕ ಸಮಸ್ಯೆಯ ಆಳ ಆಳಕ್ಕಿಳಿಯುವಂತೆ... ಚಿಂಚವಾಡದ ಒಂದು ಉದ್ಯಮ ಸಂಸ್ಥೆಯ ಕಾರ್ಮಿಕ ಸಭೆಯಲ್ಲಿ ರಾಜೀವ್ ಭಾಷಣ ಮಾಡುತ್ತಿದ್ದಾಗ..... ಒಮ್ಮಿಂದೊಮ್ಮೆಗೆ ಒಂದು ಕಲ್ಲು ಬಂದು ರಾಜೀವನ ಹಣೆಗೆ ಬಡಿಯಿತು. ಯಾಮಿನಿ ಒಮ್ಮೆಲೆ ಎಚ್ಚರವಾದಂತಾಗಿ "ರಾಜೂ" ಎಂದಾಗ... ಗಲಭೆಯಾಗಿ ಜನ ಅತ್ತಿತ್ತ ಚದುರತೊಡಗಿದಾಗ ಆಕ್ಷಿನಿಂದ ಯಾರೋ ಪ್ರಥಮ ಚಿಕಿತ್ಸೆಯ ಪೆಟ್ಟಿಗೆಯನ್ನು ಹಿಡಿದುಕೊಂಡೇ ಓಡಿ ಬಂದರು.... ಗಾಯ ತೊಳೆದು ದ್ರವ ಸುರುವಿ ಪಟ್ಟಿ ಹಾಕಿ.... ರಾಜೀವ ಯಾಮಿನಿಯ ಸೀರೆಯ ಸೆರಗಿನಿಂದಲೇ ಪಟ್ಟಿ ಬಿಗಿದುಕೊಂಡ...

"ಯಾಮಿನಿ ಆಡಳಿತೆಯೆ ಕಲ್ಲು ಹೊಡೆಸಿ ಉಪಚಾರದ ಸಾಮಗ್ರಿ, ತಂದರೂ ಅಥವಾ? ಯಾರೂ ಹೇಳುತ್ತಿದ್ದರಲ್ಲ... ಬಾಪೂ ದೇಶಪಾಂಡೆ ಈ ಯೂನಿಯನ್ ತನ್ನದಾಗಬೇಕೆಂದು ಪ್ರಯತ್ನಿಸುತ್ತಿದ್ದಾನೆಂದು....."

"ಇದ್ದರೂ ಇರಬಹುದು...." ಯಾಮಿನಿಯ ಉದಾಸ ದನಿ.

"ಯಾಕೆ ಹೀಗೆ?.... ಕ್ರಾಂತಿಯ ಹರಿಕಾರನಾಗಬೇಕಿದ್ದ ಕಾರ್ಮಿಕ, ವ್ಯವಸ್ಥೆಯ ವಿರುದ್ಧ ಬಂಡಾಯವೆದ್ದು ಹೊಸಬಾಳಿಗೆ ನಾಂದಿ ಹಾಡಬೇಕಿದ್ದ ಕಾರ್ಮಿಕ ಸಂಘಗಳ ನಾಯಕರು ಯಾಕೆ ಹೀಗೆ ಸ್ವಪ್ರತಿಷ್ಠೆಗಾಗಿ ಸ್ಪರ್ಧಿಸುತ್ತಿದ್ದಾರೆ?

ಅಲ್ಲಿ ಗೇಟ್ ಮೀಟಿಂಗ್ ಮುಗಿಸಿದ ರಾಜೀವ, ಇನ್ನೆರಡು ಕಾರ್ಖಾನೆಗಳ ಮುಂದೆ ನೆರೆದಿದ್ದ ಶ್ರಮಿಕರನ್ನುದ್ದೇಶಿಸಿ ಮಾತನಾಡಿದ್ದ. ಅವನನ್ನು ಮುತ್ತಿಕೊಂಡೆ ಇರುತ್ತಿದ್ದ

ಕಾರ್ಮಿಕ ನಾಯಕರ ಜತೆ ಯಾಮಿನಿ ತಾನೂ ಓಡಾಡಿದ್ದಳು.... ಅಂಗರಕ್ಷಕಳಂತೆ. 'ಕೋಣ್ ಆಹೆ ತೀ ಬಾಯಿ' ಎಂಬ ಮಾತೂ ಒಂದೆರಡು ಕಡೆ ಕೇಳಿತ್ತು. ಖಂಡಾಲಾ ಘಟ್ಟದಲ್ಲಿ ಜೀಪ್ ನಿಧಾನವಾಗಿ ಇಳಿದು ಬರುತ್ತಿದ್ದಂತೆ, ಮುಂಬಯಿ ಮಹಾಶಹರದ, ಮತ್ತದರ ಪರಿಸರ ಪ್ರದೇಶದಲ್ಲಿ ಕೋಟಿಗಟ್ಟಲೆ ದೀಪಗಳು ಬೆಳಗಿ, ಮುಂದೆ ಮುಂಬಯಿ ಎಂದು ಸಾರುತ್ತಿದ್ದಾಗ..... ಮನೆಯಲ್ಲಿ ಮಲಗಿದ್ದ ಶ್ರೀಕಾಂತ ಮನಸ್ಸಿನ ಮುಂದೆ ಬಂದಿದ್ದ. ತಾನು ಬರುವುದನ್ನೇ ತಾನು ತರುವ ಚಾಕಲೇಟ್‌ನ್ನೇ ಕಾಯುತ್ತಿರುತ್ತಾನೆ.... ನಿತ್ಯ..

ದೂರದಲ್ಲಿ ಕಾಣುತ್ತಿದೆ.... ಪ್ರಚಂಡ ಶಕ್ತಿಯ ಸಂಕೇತ ಜ್ವಾಲೆ. ಮುಂಬಯಿ ಮಹಾಶಹರ ಮತ್ತದರ ಪರಿಸರಗಳಲ್ಲಿ ಬೆಳಗುವ ಕೋಟಿಗಟ್ಟಲೆ ದೀಪಗಳು, ಬದುಕುವ ಛಲದ ಮನುಷ್ಯತ್ವದ ವಿಕಾಸದ, ಮಾನವ ಕೋಟಿಯ ಪ್ರಚಂಡ ಆತ್ಮವಿಶ್ವಾಸದ, ಸಂಘಟಿತ ಶಕ್ತಿಯ ಸಂಕೇತಗಳೇ..... ಅಥವಾ ಕತ್ತಲ ಕಾಡಲ್ಲಿ ಮರದ ತುಂಬ ಮಿನಿ ನಕ್ಷತ್ರಗಳಂತೆ ಮಿನುಗಿ ಸಾಯುವ ಮಿಣುಕು ಹುಳಗಳೇ!

''ಯಾಮೀ...''

''ಹ್ಞ! ಹ್ಞ!''

''ನೀನು ಕಲ್ಕತ್ತಾದ ದುರ್ಗಾ ಪೂಜೆ ನೋಡಿರುವೆಯಾ?''

''ಇಲ್ಲ''

''ನಾನು ನೋಡಿದ್ದೇನೆ.... ನನಗೆ ತುಂಬಾ ಇಷ್ಟವಾದ ಹಬ್ಬ! ಯಾಕೆ ಗೊತ್ತೆ? ಶಕ್ತಿಗೆ ಆ 'ಮಿತ್'ನ ಸ್ವರೂಪ ಕೊಟ್ಟು ತನ್ನ ಶಕ್ತಿಯನ್ನೆ ಶಕ್ತಿಪೂಜೆಯಲ್ಲಿ ಕಾಣುತ್ತಾನೆ ಬಂಗಾಳೀ..... ಆ ಕಾರಣ ಸಂಭ್ರಮ, ಹಬ್ಬ, ಆದರೆ..... ಆರಾಧನೆಯನ್ನೇ ಶಕ್ತಿಯೆಂದು ಬಗೆಯುವಾಗ ಶಕ್ತಿಯ ಹ್ರಾಸವಾಗುವುದೆಂದು ಆತ ತಿಳಿಯುವುದೇ ಇಲ್ಲ.... ಆತನಲ್ಲಿ ಆತ್ಮವಿಶ್ವಾಸ ಮೂಡುವುದೇ ಇಲ್ಲ.... ಅದೇ ಟ್ರಾಜಿಡಿ.... ಮುಂದೆ ನೋಡು ಮಹಾಮುಂಬಯಿ.... ಲಕ್ಷಗಟ್ಟಲೆ ಜನರ ಬದುಕಿನ ಕಾರ್ಯಕ್ಷೇತ್ರ.... ಇತಿಹಾಸಕ್ಕೆ ರೂಪು ಕೊಡುವ, ಹೋರಾಟಕ್ಕೆ ಚಾಲನೆ ಕೊಡುವ, ಮನುಷ್ಯ ಮನುಷ್ಯನಾಗಿ ಬದುಕಲು ಬರಬೇಕಾದ ವ್ಯವಸ್ಥೆಗೆ ಎಡೆ ಮಾಡಿಕೊಡಲು, ಈಗಿರುವ ವ್ಯವಸ್ಥೆಯನ್ನೇ ಧ್ವಂಸ ಮಾಡಲು, ಬೆಂಕಿಯಿಡಲು ಅಗತ್ಯವಾಗಿ ಆಗಬೇಕಾದ ರುದ್ರಭೂಮಿ....''

ಜೀಪ್ ನಿಧಾನವಾಗಿ ಘಟ್ಟದ ಇಳಿಯುತ್ತಿತ್ತು.... ಘಟ್ಟ ಸೆರಗಿಗೆ ಅಂಟಿಕೊಂಡ ಅಗಲ ಕಿರಿದಾದ ತಿರುವುಗಳು.... ಬದಿಯಲ್ಲಿ ಪ್ರಪಾತ.... ರಾಜೀವ ತನ್ನಷ್ಟಕ್ಕೆ ತಾನು ಎಂಬಂತೆ ಮಾತನಾಡುವಾಗ, ಉಳಿದವರೆಲ್ಲ ಅರ್ಥವಾಗದವರಂತೆ ಮೌನಿಗಳಾಗುತ್ತಾರೆ.

''ಏಟ್ಟು ಸಾಲಿಯಾನ್ ಸತ್ತುಹೋದ...''

''ರಾಜೂ, ಶಕ್ತಿ ಪ್ರವಹಿಸುವುದು ಬಂದೂಕಿನ ನಳಿಗೆಯ ಮೂಲಕ....''

''ಹೌದು ಯಾಮೀ, ಸತ್ಯವನ್ನೇ ಹೇಳಿದೆ.... ಆದರೆ ಬಂದೂಕಿಗೂ ಗುರಿ ನೇರವಿರಬೇಕು ನೋಡು.... ಇಲ್ಲವಾದಲ್ಲಿ ಶಕ್ತಿಯ ಹ್ರಾಸ..... ಎಲ್ಲ ಬಂದೂಕುಗಳ ನಳಿಕೆಗಳೂ ನಿಶ್ಚಯದ ಬಿಗಿಯಾದ ಹಿಡಿತದಲ್ಲಿ ಗುರಿಯನ್ನು ಕಂಡಾಗ ಮಾತ್ರ, ಈ ಅರ್ಥಹೀನ ವ್ಯವಸ್ಥೆಯ ವಿರುದ್ಧ....''

ಜೀಪ್‌ನಲ್ಲಿದ್ದದ್ದು ಆರು ಜನ.... ಒಬ್ಬೊಬ್ಬರಿಗೆ ಒಂದೊಂದು ಆಲೋಚನೆ. ಎಲ್ಲ ಒಂದೇ ಉದ್ದೇಶದಿಂದ ಬಂಧಿತರಾದ ವ್ಯಕ್ತಿಗಳು.... ಆದರೆ... ಇಂಥವರೆಲ್ಲ ಜತೆ ಸೇರಿ ಬಂದೂಕಿನ ಗುರಿ ಯಾವುದೆಂದು ಗುರುತಿಸುವುದು ಸಾಧ್ಯವೇ?

ರಾಜೀವ ಮೌನಿಯಾಗಿದ್ದ.... ಮನಸ್ಸು ತನ್ನ ಆರಾಧ್ಯ ದೈವವಾದ, ತಾನು ಜೀವ ಕೊಡಲೂ ಸಿದ್ಧನಿದ್ದ ಮಿತ್ರ, ಜೆ.ಪಿ.ಯನ್ನು ನೆನೆಸಿಕೊಳ್ಳುತ್ತಿತ್ತು....

* * * * * * * * *

ಕಲ್ಕತ್ತಾ ಬಳಿಯ 24 ಪರಗಣಾಸ್.....
ಒಮ್ಮೆಗೇ ಮೈತ್ರೇಯಿ ಬೋಸ್ ಮಿಂಚು
ತ್ತಾಳೆ... ಯಾವ ಕಾಲಕ್ಕೂ ಎಂಥ ಕೆಲಸಕ್ಕೂ
ಸಿದ್ಧಳೆನ್ನುವಂತೆ, ಕಾಡಿನ ಬದಿಯ ಹಳೆಯ
ಕಟ್ಟಡವೊಂದರ ಒಳಗೆ, ಯಾರೂ ವಾಸ್ತವ್ಯ
ವನ್ನು ಗುರುತಿಸಲು ಸಾಧ್ಯವಾಗದಂಥ
ಹಳೆಯ ಕಟ್ಟಡದ ಒಳಗೆ, ಸುಸಜ್ಜಿತವೆನಿಸಬ
ಹುದಾದ ಆಸ್ಪತ್ರೆಯಲ್ಲಿ ಮೈತ್ರೇಯಿ ಕ್ಷಣಾ
ರ್ಧದಲ್ಲಿ ನರ್ಸ್ ಆಗಿ ಪರಿವರ್ತನೆ ಹೊಂದು
ತ್ತಾಳೆ. ಆ ಮನೆಯೊಳಗೆ ಕರಿಯ ಪರದೆ
ಗಳಿಂದ ಮುಚ್ಚಿದ ಕಿಟಕಿಯೊಳಗೆ ಬೆಳಕಿದೆ.
ಅಲ್ಲಿಯ 'ಆಪರೇಶನ್' ಮಂಚದ ಮೇಲೆ
ಗಾಯಗೊಂಡ ಸಮಾನಧರ್ಮಿಯೊಬ್ಬ ಮಲ
ಗಿದ್ದಾನೆ.... ರಾತ್ರಿ ಕಲ್ಕತ್ತಾದ ಲೇಕ್ ಗಾರ್ಡ
ನ್ಸ್‌ನ ಮನೆಯಿಂದೆಬ್ಬಿಸಿ ಕಣ್ಣಿಗೆ ಬಟ್ಟೆ ಕಟ್ಟಿ,
ಟ್ಯಾಕ್ಸಿಯಲ್ಲಿ ಕರೆದು ತಂದ ಸರ್ಜನ್ ಬಿಪಿನ್
ಚಕ್ರವರ್ತಿ, ಕಣ್ಣಿನ ಬಟ್ಟೆ ತೆಗೆದೊಡನೆಯೇ
''ನನ್ನ ಇಂಸ್ಟ್ರುಮೆಂಟ್ಸ್ ಎಲ್ಲಿವೆ?'' ಎಂದು
ಕೇಳುತ್ತಾನೆ. ಪಕ್ಕದ ಮೇಜಿನ ಕಡೆ ಕಣ್ಣು
ಹೊರಳಿದೊಡನೆಯೇ ಬಿಳಿಯ ಸಮ
ವಸ್ತ್ರದಲ್ಲಿ ನಿಂತಿದ್ದ ಮೈತ್ರೇಯಿಯನ್ನು
ನೋಡಿ, ''Sorry, ನನ್ನ ನಿರೀಕ್ಷೆಗೂ
ಮೀರಿದ ಸಲಕರಣೆಗಳು ಇಲ್ಲಿವೆ,'' ಎಂದು
ತಾನೇ 'ಅನೆಸ್ತೇಸಿಯಾ' ಕೊಟ್ಟು ಶಸ್ತ್ರ ಕ್ರಿಯೆ
ಆರಂಭಿಸುತ್ತಾನೆ... ಮಲಗಿದ್ದ ವ್ಯಕ್ತಿಯ
ತೊಡೆಯೊಳಗೆ ಸೇರಿದ್ದ ಗುಂಡನ್ನು ಹೊರತೆ
ಗೆದು ಅರ್ಧಗಂಟೆಯೊಳಗೆ ಶಸ್ತ್ರಕ್ರಿಯೆ
ಮುಗಿಸಿ, ಹೊಲಿದು ಕೈ ತೊಳೆದು, ಹೊರ
ಡಲು ಸಿದ್ಧನಾಗುತ್ತಾನೆ. ''ಏನೂ ಯೋಚ
ನೆಗೆ ಕಾರಣವಿಲ್ಲ.... ಕೆಲವೇ ದಿನಗಳಲ್ಲಿ
ಈತ ಮೊದಲಿನಂತಾಗುತ್ತಾನೆ..... ಯು
ನೋ.... ಮೈ ಸಿಂಪಥೀಸ್ ಆರ್ ಆಲ್‌ವೇಸ್
ವಿತ್ ಯು'' ಹಾಗೆ ಹೇಳಿ ''ಐ ಎಮ್ ರೆಡಿ''
ಎಂದು ಸಂತೋಷದಿಂದಲೇ ಕಣ್ಣಿಗೆ ಬಟ್ಟೆ
ಕಟ್ಟಿಸಿಕೊಂಡು ಟ್ಯಾಕ್ಸಿಯೇರಿ ತನ್ನ ಮನೆಗೆ
ಮರಳುತ್ತಾನೆ. ''ಮೈ ಸಿಂಪಥೀಸ್ ಆರ್
ಆಲ್‌ವೇಸ್ ವಿತ್ ಯು'' ನಕ್ಸಲೈಟ್ ಎನ್ನ
ಲಿಲ್ಲ ಬೋಳಿ ಮಗ. 'ಟು ಹೆಲ್' ಎನ್ನುವ
ಮನಸ್ಸಾಗುತ್ತದೆ. ಆದರೆ ಅವನ, ಅವನಂಥ
ವರ ಅಗತ್ಯವಿದೆ. ... ಎಷ್ಟು ರಾತ್ರಿಗೆ ಕರೆದು
ಎಬ್ಬಿಸಿದರೂ ಕಣ್ಣಿಗೆ ಬಟ್ಟೆ ಕಟ್ಟಿಸಿಕೊಂಡು



ಬರುತ್ತಾರೆ. ಸಂತೋಷದಿಂದ ಮಾಡಬೇಕಾದ ಕೆಲಸ ಮಾಡುತ್ತಾರೆ.... ಮೆಡಿಕಲ್ ಓದಿನ ಅವಧಿಯಲ್ಲಿ, ಮಾರ್ಕ್ಸ್ ಬಿಡುವಿನ ಓದಿನ, ಚರ್ಚೆಯ ವಿಷಯವಾಗಿರಲೂಬಹುದು... ಕೈಲಾದ ಏನಾದರೂ ಮಾಡಬೇಕು ಎಂಬ ಹಂಬಲವಿದ್ದರೂ ಇರಬಹುದು.

ಜೆ.ಪಿ.ಯನ್ನು ಮಾತ್ರ ಪೋಲೀಸರ ಗುಂಡಿನಿಂದ ಉಳಿಸಿಕೊಳ್ಳಲಾಗಲಿಲ್ಲ....! ಅಷ್ಟೇ ಅಲ್ಲ.... ಯಾರು ಎಷ್ಟೇ ನೆರವಿತ್ತರೂ, ಗುಂಡಿಡುವ ಪೋಲೀಸರನ್ನು ಪೋಷಿಸುವ ವ್ಯವಸ್ಥೆಗೆ ಗುಂಡಿಟ್ಟು ಸಾಯಿಸಲಾಗಲಿಲ್ಲ.... ಆಂಧ್ರ.... ಬಂಗಾಳ....ಕೇರಳ.... ಎಲ್ಲೂ.

ಈಗ ಮೈತ್ರೇಯಿ ಎಲ್ಲಿರಬಹುದು....!

ಜೇಪಿನಲ್ಲಿ ಸಂಗಡಿಗನ ಜತೆಗೆ ಈಗ ಇರುವುದು ಯಾಮಿನಿ..... ಜೇಪ್‌ನ ಗುರಿ ಮುಂಬಯಿ ಪೋಷಿಸುವ ವ್ಯವಸ್ಥೆಯೆಡೆ.....

ಇದು ಒಂದು ತಿಂಗಳ ಹಿಂದೆ.

ಭೋಯಿವಾಡಾದ ಕೋಣೆಯಲ್ಲಿ ಯಾಮಿನಿಯ ಹೊರತು ಯಾರೂ ಇಲ್ಲ. ರಾಜೀವ ಒಂದೊಂದೇ ಪತ್ರವನ್ನು ಓದುತ್ತಿದ್ದ. ಯಾಮಿನಿ ಮೊದಲು ಒಡೆದು ಏನೆಂದು ನೋಡಿ ರಾಜೀವನಿಗೊಪ್ಪಿಸುತ್ತಿದ್ದಳು.... ಇದಿರಿಗಿದ್ದದ್ದು ಗೋದೂ ಮಾವಶಿಯ ಚಹಾ.... ಮೌನ ಮುರಿದು ಯಾಮಿನಿ ಕೇಳಿದಳು. ತಾನು ಒಡೆದ ಕಾಗದವನ್ನೆ ನೋಡುತ್ತಾ, "ಯಾರಿದು ಸತೀಶ ಶರ್ಮಾ? ಈ ತನಕ ಕೇಳಿಯೇ ಇಲ್ಲ..... ಅವನ ಅಪಾಂಗ ಗೃಹದ ಉದ್ಘಾಟನೆಗೆ ನೀನು ಮುಖ್ಯ ಅತಿಥಿ.... ನಗಬೇಕೇ ರಾಜೂ."

"ನಗಬೇಕೇ ಯಾಮಿನೀ, ಅಪಾಂಗರ ಕುರಿತ ಅನುಕಂಪ ನಮ್ಮ ಸಂವೇದನೆಯ ಕ್ಷೇತ್ರದ ಹೊರಗೇನು?"

"ಹಾಗಲ್ಲ.... ಆದರೆ ಈ ಶರ್ಮಾ.... ಕಾರ್ಮೈಕಲ್ ರೋಡ್‌ನ ವಿಳಾಸವಿದೆ. ತುಂಬ ಹಣವಂತ ಮಿಲಿಯನ್ನೈರ ಇರಬೇಕು..... ನೀನು ಅವನಿಗೆ ಮುಖ್ಯ ಅತಿಥಿ.... ಬಾಪಟ್, ಮಾನೆ, ಸುರ್ವೆ ದೇಶಪಾಂಡೆ, ಊರೆಲ್ಲ ಕೂಗುವುದಿಲ್ಲವೆ? ರಾಜೀವನ ನಕಲಿ ಪುಢಾರಿ ಅಂತ...."

"ಯಾರು ಏನೇ ಹೇಳಲಿ ಯಾಮೀ, ಎರಡು ಸಾಲಿನ ಕಾಗದ ಬರೆಯುವೆಯೇನು? ಆದಿನ ಎಷ್ಟು ಗಂಟೆಗೆ ಸಿದ್ಧವಾಗಿರಬೇಕೆಂದು ತಿಳಿಸಿ, ಕರೆದೊಯ್ಯಲು ವಾಹನ ವ್ಯವಸ್ಥೆ ಮಾಡಿ..." ಎಂದ ರಾಜೀವ.

'ಸಾಗರದರ್ಶನ'ದ ತನ್ನ ಮನೆಯ ಡ್ರಾಯಿಂಗ್ ರೂಂನಲ್ಲಿ ಕಾಣುತ್ತಿದ್ದುದೆಲ್ಲ ಲಕ್ಷ್ಮಿಯ ಸಂಸ್ಕಾರ. ಅಲ್ಲಿಯ ಒಪ್ಪ ಓರಣ, ಆಸನಗಳ ವ್ಯವಸ್ಥೆ, ಗೋಡೆ ಕಿಟಕಿಗಳಿಗೂ ಜೀವ ತುಂಬಲು ನೆರವಾದ ಪರದೆ ಪರಿಕರಗಳ ಕುರಿತು ಲಕ್ಷ್ಮಿಯ ಸೌಂದರ್ಯ ಪ್ರಜ್ಞೆ.

ನರಿಮನ್ ಪೈಂಟ್‌ನ ಆಫೀಸಿನ ಒಪ್ಪ ಓರಣಗಳಲ್ಲೂ ವ್ಯಕ್ತವಾಗುತ್ತಿದ್ದುದು ಅದೇ ಸಂಸ್ಕಾರ.... ಒಂದು ಉದ್ಯಮ ಕುಂಜದ ಪ್ರಭುತ್ವದ ಸಂಕೇತವಾದ ಕೋಣೆಯ ವರ್ಚಸ್ಸನ್ನು ಪ್ರತಿಬಿಂಬಿಸುವಂತಿದ್ದ ದೊಡ್ಡ ಮೇಜು, ತಿರುಗುವ ಕುರ್ಚಿ, ಕೋಣೆಯ ಒಳಗಿದ್ದೂ ಕಾಣದಂತಿರುವ 'ಮಿನಿ' ಕೋಣೆಯ ವ್ಯವಸ್ಥೆ ಮಾತ್ರ ತನ್ನದು. ಕೇವಲ ಇಪ್ಪತ್ತು ಚದರಡಿಯ ಕೋಣೆಯಲ್ಲಿ ಒಂದು 'ಫ್ರಿಜ್', ಪಕ್ಕದಲ್ಲೆ ಒಂದು ಪುಟ್ಟ ಮೇಜು. ಆದರ ಮೇಲೆ ವಿದೇಶಿ ಮದ್ಯಗಳನ್ನು ಆಯ್ಕೆ ಮಾಡಿ ಸಂಗ್ರಹಿಸಿಟ್ಟ ಕಪಾಟು...

ತನ್ನದೇ ವ್ಯವಹಾರದಲ್ಲಿ ಈ ಮಿನಿ ಕೋಣೆಯ ಸಲಕರಣೆಗಳೆಲ್ಲ ಉಪಯೋಗಕ್ಕೆ ಬರುತ್ತಿದ್ದುದು ಹೆಚ್ಚಾಗಿ ಕೆಲಸದವರನ್ನು ಹಿಡಿತದಲ್ಲಿಟ್ಟುಕೊಳ್ಳುವ ಸಂದರ್ಭದಲ್ಲಿ.... ಯೂನಿಯನ್ ಚಟುವಟಿಕೆಗಳ ಉಡಾಫೆತನ ತೋರಿಸುವ ಪುಂಡ ಮುಖಂಡರನ್ನೂ ಸೆಳೆಯಲು, ಹಾಗೆಯೆ ಆದಾಯಕರದ ಹಿರಿಯ ಅಧಿಕಾರಿಗಳ ಒಲವು ಸಂಪಾದಿಸಲು, ಮಂತ್ರಾಲಯದ(ಮಂತ್ರಿ-ಆಲಯ) ಕಾರ್ಯದರ್ಶಿಗಳ ಸಲುಗೆ ಬೆಳೆಸಲು, ಉಳಿಸಲು,

ರಾಜಕೀಯ ವರ್ತುಲದಲ್ಲಿ ಪ್ರಯೋಜನ ಕಾರಿಯೆನಿಸಬಹುದಾದ ಕಾಂಗ್ರೆಸ್ ಪುಢಾರಿಗಳ ಪರಿಚಯ ಸಲುಗೆ ಬೆಳೆಸಿಕೊಳ್ಳಲು, ಈ ಮಿನಿ ಕೋಣೆಯ 'ಸ್ಕಾಚ್'ನ ಶಕ್ತಿ ಅನನ್ಯವಾದುದು.

ಆದ್ದರಿಂದ ತನ್ನ ಫ್ಯಾಕ್ಟರಿಗೆ ಸಂಬಂಧಿಸಿದ, ವಿದ್ಯುತ್‌ಕಡಿತ, ಎನ್.ಓ.ಸಿ. ಮಾರಾಟ ಕರ ಹೊಂದಾಣಿಕೆ ಇವೇ ಮುಂತಾದ ಯಾವ ತೊಂದರೆಯೂ ಸತೀಶನಿಗೆ ತೊಂದರೆಯಲ್ಲ. ಪೋಲೀಸ್ ಇನ್‌ಪೆಕ್ಟರ್ ಕೋರೆಗಾಂವಕರ್, ಮುಳೆ, ಸಿದ್ಧಾಂತಿ, ಫರ್ನಾಂಡಿಸ್... ಟೆಲಿಫೋನ್ ರಿಸೀವರ್ ಎತ್ತಿದೊಡನೆಯೆ "ಹಾಯ್ ಸತೀಶ.... ಹೇಗಿದ್ದಿಯಾ? ಲಕ್ಷ್ಮಿ ಹೇಗಿದ್ದಾಳೆ?" ಎನ್ನುವಂತಹ ಸಲುಗೆಯಿಂದಿರುವವರು ಎಂದ ಮೇಲೆ ಭಯವೆಲ್ಲಿಯದು? 'I can get away with murder....'

ಬಿ.ಟೆಕ್ ಮುಗಿಸಿ, ಪಪ್ಪನ ಜತೆ ಉದ್ಯಮ ಕ್ಷೇತ್ರದಲ್ಲಿ ದುಡಿಯತೊಡಗಿದ ಮೇಲೆ ಹದಿನೈದು ವರ್ಷಕಾಲ ಹತ್ತಿದ್ದು ವಿಸ್ಮಯದ ಕೋಟೆಯ ಮೆಟ್ಟಿಲನ್ನು..... ಆಗ ಪಪ್ಪನ ಬಗೆಗೆ ಅಭಿಮಾನವೆನಿಸುತ್ತಿತ್ತು. ಪಪ್ಪ ಸಾಧಿಸಿದ್ದೆಲ್ಲ ಸಲಕರಣೆಗಳಿಲ್ಲದೆಯೆ.... ಆದರೆ ತನಗೆ ಹಾಗಲ್ಲ, ಅಗತ್ಯವಿರುವ ತಾಂತ್ರಿಕ ಶಿಕ್ಷಣ, ವೈಜ್ಞಾನಿಕವೆನಿಸುವ ಉಸ್ತುವಾರಿ ಶಿಕ್ಷಣ.... ಮುಂದೆ..... ಮುಂದೆ, ಮೇಲೆ ಹೋಗುವ ಆಸೆ, ಆನಂದ, ಇದಿರಿನ ಗೋಡೆಯಲ್ಲಿ ಪಪ್ಪನ ಫೋಟೋ.... ಹೊಸ ಆಫೀಸಿಗೆ ಬಂದ ಸಂದರ್ಭದಲ್ಲಿ ಪಪ್ಪನ ಫೋಟೋ ಜತೆಗೆ ನಯನಾಳ ಫೋಟೋ ಕೂಡ ಹಾಕೋಣ ಎಂದು ಲಕ್ಷ್ಮಿ ಪಟ್ಟು ಹಿಡಿದಿದ್ದಳು. 'ಸ್ಟುಪಿಡ್' ಎಂದಿದ್ದ ಸತೀಶ.

"ಬೇಡ ಲಕ್ಷ್ಮಿ, ಆ ಹಿಪ್ಪಿಯನ್ನು ಮನೆಯಲ್ಲಿ ನೋಡಿಯೇ ಸಾಕಾಗಿದೆ. ಆಫೀಸಿನಲ್ಲಿ ಅವಳ ನೆನಪು ಬೇಡ."

ಅರ್ಥಶಾಸ್ತ್ರದ ಮೊದಲನೆಯ ವರ್ಗದ




ಸ್ನಾತಕೋತ್ತರ ಪದವೀಧರೆ.... ಬೆರಗುಗೊಳಿಸುವಂಥ ತರ್ಕ ಶಕ್ತಿ.... ಹರಿತವಾದ ಮಾತುಗಾರಿಕೆ.... ಹೆಸರಿಗೆ ಅನ್ವರ್ಥವೆನಿಸುವ ಆಕರ್ಷಕ ಸೌಂದರ್ಯ..... ನಯನಾ ಪಪ್ಪನ ಪ್ರೀತಿಯ ನಯನಾ ಆಗಿಯೇ ಬೆಳೆದಿದ್ದಳು. ಆದರೆ ಪಪ್ಪ ಬೇಡವೆಂದರೂ ಎರಡು ವರ್ಷ ಯಾವುದೋ ಕಾಲೇಜಿನಲ್ಲಿ ಕೆಲಸ ಮಾಡಿದ್ದೇ ನೆಪವಾಗಿ ಬದಲಾಗಿಯೇ ಹೋದಳು. ಯಾವಾಗಲೂ ಮಿದುವಾಗಿಯೆ ಮಾತಾಡುತ್ತಿದ್ದ ನಯನಾಳ ಮಾತಿಗೆ ಅಪ್ರಿಯವೆನಿಸಬಹುದಾದ ತರ್ಕದ ಮೊನೆ, ಸದಾ ನಗುವ ಆಕೆ ಕಣ್ಣುಗಳ ಕಾಂತಿ ಕುಂದಿದಂತೆ, ಕಾಲೇಜಿನ ಕೆಲಸ ಬಿಟ್ಟರೂ (ಯಾಕೆ ಬಿಟ್ಟುದೆಂದು ಹೇಳಲೇ ಇಲ್ಲ) ಮುಂದೆ ಆಕೆ 'ಸಾಗರ ದರ್ಶನ'ದ ಸಂಸ್ಕೃತಿಗೆ ಹೊಂದಿಕೊಳ್ಳಲೇ ಇಲ್ಲ. ಓದಿನ ಹುಚ್ಚೊಂದು ಅಂಟಿಕೊಂಡು, ಮನೆಗೆ ಮರಳುವಾಗಲೆಲ್ಲ ಪುಸ್ತಕಗಳ ರಾಶಿ ಹೊತ್ತುಕೊಂಡೇ ಬರುತ್ತಿದ್ದಳು. ಅವು ಕೂಡ ಎಂತಹ ಪುಸ್ತಕಗಳು, ಇತಿಹಾಸ, ಮನಶ್ಶಾಸ್ತ್ರ, ಜೀವಶಾಸ್ತ್ರ..... ಒಮ್ಮೊಮ್ಮೆ ಕಂಪ್ಯೂಟರ್ ಸೈನ್ಸ್.

## ವೃತ್ತಿ ಪ್ರವೃತ್ತಿ

**ಸಂಜೆ** ಕಾಲೇಜಿನಿಂದ ಬರಬೇಕಾದರೆ ತಂದಿದ್ದ ಪುಸ್ತಕಗಳನ್ನು ಆತ ಟೇಬಲ್ಲಿನ ಮೇಲೆ ಹರವಿಕೊಂಡ. ಪುಸ್ತಕಗಳಿಂದ ಆಗಾಗ್ಗೆ ಕೆಲವು ಪೇಜುಗಳನ್ನು ಎದುರಿಗೆ ಹರಡಿಕೊಂಡಿದ್ದ ಬಿಳಿಕಾಗದದ ಮೇಲೆ ಭಟ್ಟಿ ಇಳಿಸಿದ. ಹಲವಾರು ಪುಸ್ತಕಗಳನ್ನು ತೆರೆದು ತನಗೆ ಬೇಕಾದ ವಿಷಯಗಳನ್ನು ಟಿಪ್ಪಣಿ ಮಾಡಿಕೊಳ್ಳುತ್ತ, ರಾತ್ರಿ ಬಹು ಹೊತ್ತಿನವರೆಗೂ ಕುಳಿತ. ನಂತರ ಆ ಟಿಪ್ಪಣಿಗಳ ನೆರವಿನಿಂದ ಪ್ರಬಂಧ ಸಿದ್ಧಪಡಿಸಿದ. ಮಾರನೇ ದಿವಸದ ಸಭೆಯಲ್ಲಿ ಅವನು ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವ ಎಂಬ ವಿಷಯದ ಬಗ್ಗೆ ಮುಖ್ಯ ಭಾಷಣ ಮಾಡಬೇಕಿತ್ತು.

ಮಾರನೇ ದಿವಸ ಬಲ ಮಗ್ಗುಲಲ್ಲೇ ಎದ್ದ ಆತ ಎದುರಿನ ದೇವರ ಫೋಟೋಗೆ ಕೈ ಮುಗಿದ. ಚಪ್ಪಲಿ, ಪೊರಕೆ ಇವುಗಳನ್ನು ಈತ ಎದ್ದ ಕೂಡಲೇ ನೋಡದಂತೆ, ಅಂದರೆ ಕಾಣಸದಂತೆ ಈತನ ಹೆಂಡತಿ ಎಚ್ಚರಿಕೆಯಿಂದ ಅವುಗಳನ್ನು ಬಾಗಿಲ ಸಂದಿಯಲ್ಲೇ ಇರಿಸಿದ್ದಳು. ಸ್ನಾನ ಮುಗಿಸಿ ತಿಂಡಿ, ಕಾಫಿ ಮುಗಿಸಿದ. ಸೂಟು ಕೋಟು ಟೈ ಧರಿಸಿ ಮಿರಿಮಿರಿ ಮಿಂಚುವ ಶೂ ಧರಿಸಿ ಸಭೆ ನಡೆಯುವ ಸ್ಥಳಕ್ಕೆ ಬಂದ. ತುಂಬಿದ ಸಭೆಯಲ್ಲಿ ವೈಜ್ಞಾನಿಕ ಮನೋಭಾವ ವಿಜ್ಞಾನ, ಮತ್ತು ಮೂಢನಂಬಿಕೆ ಇವುಗಳ ಬಗ್ಗೆ ಅಮೋಘವಾಗಿ ಭಾಷಣ ಮಾಡಿದ. ಎಲ್ಲರಿಂದಲೂ ಚಪ್ಪಾಳೆ ಗಿಟ್ಟಿಸಿದ "ಈ ನನ್ನ ಭಾಷಣದಿಂದ ನಿಮ್ಮಲ್ಲಿ ಒಬ್ಬರಾದರೂ ಮೂಢನಂಬಿಕೆ ತೊರೆದಿರಾದರೆ ನನ್ನ ಶ್ರಮ ಸಾರ್ಥಕ," ಎಂದು ಹೇಳಿ ಕೊರಳಿಗೆ ಹಾರ ಹಾಕಿಸಿಕೊಂಡ.

ಸಭೆಯ ನಂತರ ಕಾಫಿಗೆಂದು ಆಹ್ವಾನ ಬಂದಾಗ ಬೇಡವೆಂದು ನಯವಾಗಿ ನಿರಾಕರಿಸಿದ. ಮಧ್ಯಾಹ್ನದ ವೇಳೆಗೆ ಹಸಿದುಕೊಂಡೇ ಮನೆಗೆ ಬಂದ. "ರೀ ರಾತ್ರಿ ಚಂದ್ರಗ್ರಹಣ ಇದೇ ರೀ...'' ಅಂದಳು ಹೆಂಡತಿ. "ತುಂಬಾ ಹಸಿವೆ, ಅಲ್ಲಿ ಯಾರ್ಯಾರೋ ಮುಟ್ಟಿದ ತಿಂಡಿ ತಿನ್ನಲಿಲ್ಲ. ಗ್ರಹಣ ಬೇರೆ ಅಂತೀಯಾ, ಈಗಲೇ ಊಟ ಹಾಕಿಬಿಡು. ರಾತ್ರಿ ಊಟ ಮಾಡೋ ಹಾಗಿಲ್ಲ...." ಅಂತ ಆತ ಊಟಕ್ಕೆ ಕೂತ!

ಮೊದಲನೆಯದು ವೃತ್ತಿ, ಎರಡನೆಯದು ಪ್ರವೃತ್ತಿ!

'ಪ್ರಭಾ'

ಸಮಸ್ಯೆಯೆ, ಲಕ್ಷ್ಮಿಗೂ ಅವಳ ಊಟ ಉಪಚಾರಗಳ ಸಮಸ್ಯೆ. ತನಗೆ ಬೇಡವಾದರೆ ಊಟದ ತಟ್ಟೆಯನ್ನು ಎತ್ತಿ ಒಗೆದರೂ ಒಗೆದಳೆ. ಮಾತಾಡಿದರೆ ಒರಟಾದ ಉತ್ತರ. ಕೆಲವು ಸಲ ನಯನಾಗೆ ಬುದ್ಧಿಭ್ರಮಣೆಯಾಗಿದೆಯೆ ಎನಿಸಿದ್ದೂ ಇದೆ. ಇತ್ತೀಚೆಗೆ ಸಿಗರೇಟ್ ಕೂಡಾ ಸೇದುತ್ತಾಳೆ...

ಪಪ್ಪ ಏನೂ ಮಾತಾಡುತ್ತಿರಲಿಲ್ಲ.... ನಯನಾ ಬೆಳೆಯುತ್ತಿದ್ದ ರೀತಿಯನ್ನು ನೋಡಿಯೂ ನೋಡದವರಂತೆ, ಆಕೆಯ ನಡತೆಯ ಬಗ್ಗೆ ಚಕಾರ ಕೂಡಾ ಮಾತಾಡದೆ ಸಹಿಸಿಕೊಂಡಿರುವುದು ಅಮ್ಮನ ನೆನಪಿನಿಂದಾಗಿಯೆ? ಅಮ್ಮ ಹೇಗೆ ಸತ್ತದ್ದು? ಕೊಲೆಯೆ ಆಕಸ್ಮಿಕವೆ?

ಇಂಟರ್‌ಕಾಮ್‌ನ ಸದ್ದಾದಾಗ ಸತೀಶ ''ಯಸ್ ಗ್ರೇಸ್'' ಎಂದ.

''ಪಾಟಣಕರ್ ನಿಮ್ಮನ್ನು ಕಾಣಲು ಬಂದಿದ್ದಾರೆ.''

''ಒಳಗೆ ಬರಹೇಳು.''

ರಘು ಪಾಟಣಕರ್ ಸತೀಶನನ್ನು ನೋಡಲು ಬರುತ್ತಿದ್ದುದು ಅಪರೂಪ. ಆತ ನಾಗೇಶನ ಮೆಚ್ಚಿನ ಬಂಟನಾಗಿದ್ದ. ಹೆಚ್ಚುತ್ತಲೇ ಇರುವ ಕಾರ್ಮಿಕರನ್ನು ಹತೋಟಿಯಲ್ಲಿಡಲು ಮರಾಠಿ ಬಲ್ಲ ಬಂಟಬೇಕು ಎಂದು ನಾಗೇಶ ಶರ್ಮಾ ಹುಡುಕಿ ಹುಡುಕಿ ತಂದಿದ್ದ ರಘು ಪಾಟಣಕರ್ ಮುಂದೆ ಶರ್ಮಾ ಸಂಸ್ಥೆಗಳ ಎಲ್ಲ ಕಾರ್ಮಿಕ ಸಮಸ್ಯೆಗಳಿಗೆ ಬಿಡುಗಡೆಯ ದಾರಿತೋರಿಸುವ ದೈವವೇ ಆದ. ಇದಿರಿನ ಕುರ್ಚಿಯಲ್ಲಿ ಕುಳಿತ ರಘು ನಿಧಾನವಾಗಿ ''ಕಲ್ಯಾಣಿಯ ಒಬ್ಬ ಕೆಲಸಗಾರನ ಕೊಲೆಯಾಗಿದೆ'' ಎಂದ.

''ಏನು?'' ಎಂದ ಸತೀಶ ಒಮ್ಮಿಂದೊಮ್ಮೆಗೆ.

''ಫ್ಯಾಕ್ಟರಿಯ ಒಳಗೇನಲ್ಲ... ಮೂರು ದಿನದಿಂದ ತಿವಾರಿ ಕೆಲಸಕ್ಕೆ ಬಂದಿರಲಿಲ್ಲ. ನಾಲ್ಕನೆಯ ದಿನ ಫ್ಯಾಕ್ಟರಿಯ ಗೇಟ್‌ನ

ಸಮೀಪ ತುಸುದೂರದಲ್ಲಿ ಪೊದೆಗಳ ಬದಿಯಲ್ಲಿ ಯಾರು ಬಿದ್ದಿದ್ದಾರೆಂದು ಘೂರ್ಕಾ ಹೋಗಿ ನೋಡಿದಾಗ ಕಂಡದ್ದು ತಿವಾರಿಯ ಹೆಣ.''

ತಿವಾರಿ ಸತೀಶನಿಗೂ ಗೊತ್ತು.... ಉತ್ತರ ಪ್ರದೇಶದ ಗರಡಿಗಳಲ್ಲಿ ಪಳಗಿದ ಕುಳ.... ಹತ್ತು ಜನರನ್ನು ಮಲ್ಲಯುದ್ಧದಲ್ಲಿ ಸೋಲಿಸುವ ಸಾಮರ್ಥ್ಯವುಳ್ಳ ಅಂಗಸೌಷ್ಟವ. ಆತ ಫ್ಯಾಕ್ಟರಿಯಲ್ಲಿ ಅತ್ತಿತ್ತ ತಿರುವಾಗೆಲ್ಲ ಶಕ್ತಿಯ ಸಂಚಾರವಾಗುತ್ತಿದ್ದಂತೆ.... ಕಲ್ಯಾಣಿಯೆಂದಷ್ಟೆ. ಏನು? 'ಲಕ್ಷ್ಮಿ ರಬ್ಬರ್' 'ಮೆಶಿನ್ ಟೂಲ್ಸ್' ನಾಸಾಗಳಿಗೆಲ್ಲ ಶಾಂತಿಯ ಧೈರ್ಯದ ಶ್ರೀರಕ್ಷೆ ಈಗ ಆತನ ಕೊಲೆ. ಮಾತನಾಡುತ್ತಿದ್ದಂತೆ ರಘು ಯೋಚಿಸುತ್ತಿದ್ದುದು ಹದಿನೆಂಟು ತಿವಿತದ ಗಾಯಗಳಿಂದ ವಿಕಾರವಾಗಿದ್ದ ತಿವಾರಿಯ ಹೆಣದ ಬಗೆಗೆ. ತಿವಾರಿಯ ಕೊಲೆಯಾಗಿದೆಯೆಂದು ಶಿಫ್ಟ್ ಸೂಪರಿಂಟೆಂಡೆಂಟ್ ಮೆನನ್‌ನ ಟೆಲಿಫೋನ್ ಕರೆ ಬಂದಾಗ ರಘುವಿಗೆ ಆಘಾತ.... ಕುರ್ತಾ, ಧೋತ್ರಗಳಲ್ಲಿ ವಿಜೃಂಭಿಸುತ್ತಾ ತಾನೆ ಫ್ಯಾಕ್ಟರಿಯ ಒಡೆಯ ಎಂಬಂತೆ ಫ್ಯಾಕ್ಟರಿಯಲ್ಲೆಲ್ಲ ಗಸ್ತು ತಿರುಗುತ್ತಿದ್ದ ತಿವಾರಿ.... ''ಪಾಟಣಕರ್ ಸಾಬ್, ತುಮ್ಹೀ ಕಾಹಿ ಕಾಳಜೀ ಕರೂ ನಕಾ ಮೀ ಆಸೇ ನಾ'' (ನಾನಿದ್ದೇನಲ್ಲ) ಎಂದು ಪದೇ ಪದೇ ಸಾರುತ್ತಿದ್ದ ತಿವಾರಿ ಇನ್ನಿಲ್ಲ.

ರಘು ಕಲ್ಯಾಣಿ ತಲುಪಿದಾಗ ನಾಗೇಶ ಶರ್ಮಾ ಆಗಲೆ ಬಂದಾಗಿತ್ತು. ತಿವಾರಿಯ ಶವವನ್ನು ಪೋಲೀಸಿನವರು ಪಂಚನಾಮೆ ಮುಗಿಸಿ ಸಾಗಿಸಿಯೂ ಆಗಿತ್ತು. ಫ್ಯಾಕ್ಟರಿಯಲ್ಲಿ ಕೆಲಸ ನಡೆಯುತ್ತಿರಲಿಲ್ಲ. ಎಲ್ಲ ಸ್ತಬ್ಧ, ಶಿಫ್ಟ್ ಸೂಪರಿಂಟೆಂಡೆಂಟ್‌ನ ಕೋಣೆಯಲ್ಲಿ ಅವನ ಕುರ್ಚಿಯಲ್ಲಿ ಎಸ್.ಐ.ಪೆಡ್ನೇಕರ್ ವಿರಾಜಮಾನನಾಗಿದ್ದ.... ಮುಂದೆ ಕೂತದ್ದು ಮೆನನ್, ಶರ್ಮಾ.... ಮತ್ತೆ ತಾನು....ರಘುವನ್ನು ಸತೀಶನೆಡೆಗೆ ಕಳಿಸಿದ್ದು ಶರ್ಮಾರೇ... ''ಎಲ್ಲ ವಿವರ ತಿಳಿಸು... ಮುಂದಿನದೆಲ್ಲ ಅವನು ನೋಡಿಕೊಳ್ಳುತ್ತಾನೆ...'' ರಘು ಹೇಳಿದ...

''ಪೆಡ್ನೇಕರ್ ಏನೇನೊ ಪ್ರಶ್ನೆ ಕೇಳಿದರು... ಅವರ ಕೆಲಸ ಅವರು ಮಾಡಿದ್ದಾರೆ,... ಮಾಮೂಲು ಸ್ಟೇಟ್‌ಮೆಂಟ್ ಬರೆಸಿಕೊಂಡಿದ್ದಾರೆ. ಹೆಣದ ಪೋಸ್ಟ್‌ಮಾರ್ಟಂ ಆಗಿ ಬಿಡುಗಡೆಯಾದ ಮೇಲೆ 'ಕ್ರಿಮೇಶನ್'ಗೆ ಎಲ್ಲ ಸಹಾಯ ಮಾಡುವಂತೆ ಕೊತ್ವಾಲ್‌ಗೆ ಇನ್ನೂರು ರೂಪಾಯಿ ಕೊಡಿಸಿದ್ದೇವೆ. ಕಲ್ಯಾಣಿಯಲ್ಲಿ ಇವತ್ತು ರಜೆ ಸಾರಿದ್ದೇವೆ. ಆದರೆ...''

''ಆದರೆ ಏನು ರಘು?''

''ತಿವಾರಿಯ ಕೊಲೆಯಾದ ಅರ್ಧ ತಾಸಿನಲ್ಲೇ ನಮ್ಮ ಮೂರು ಕಾರ್ಖಾನೆಗಳಲ್ಲಿ ಈ ಸುದ್ದಿ ತಿಳಿದು ಸಭೆಗಳು ಜರುಗಿವೆಯಂತೆ. ಕಾರಣ ತಿವಾರಿಯ ಕೊಲೆ. ಆದರೆ ಬೊಬ್ಬೆ ಹಾಕಿದ್ದು ಬೇರೆಯೆ ವಿಚಾರ. ಮೆಶಿನ್ ಟೂಲ್ಸ್‌ನಲ್ಲಿ 'ಗ್ಲವ್ಸ್' ಇಲ್ಲದೆಯೆ ಗ್ರೈಂಡರ್ ಬಳಿ ಹೋಗಿ ಬೆರಳು ಕಳೆದುಕೊಂಡವನಿಗೆ ಪರಿಹಾರ ಕೊಟ್ಟಿದ್ದೇವೆ. ಅದು ಸಾಲದು ಎಂದು 'ಲಕ್ಷ್ಮಿ'ಯಲ್ಲಿ ಸಿಗರೇಟ್ ಸೇದಿ ಸ್ಟಾಂಡಿಂಗ್ ಆರ್ಡರ್ ಉಲ್ಲಂಘಿಸಿದ ಒಬ್ಬನ ಮೇಲೆ ಕ್ರಮ ಕೈಗೊಂಡಿದ್ದೇವೆ. ಆ ಆರ್ಡರ್ ಹಿಂತೆಗೆದುಕೊಳ್ಳಬೇಕು ಎಂದು ಆಗ್ರಹ... ನಿಮಗೆ ತಿಳಿದಂತೆ ನಮ್ಮ ಯೂನಿಯನ್ ಹೆಸರಿಗೆ 'ಇಂಟಕ್' ಸಂಪರ್ಕ ಇದ್ದೇ ಇದೆ. ತಿವಾರಿಯನ್ನು ತಮ್ಮೆಡೆ ಸೆಳೆಯಬೇಕೆಂದು 'ಸೀಟು' ಯೂನಿಯನ್‌ಗಳ ಪ್ರಯತ್ನ ನಡೆದಿತ್ತಾದರೂ ಈ ವರೆಗೆ ಫಲಕಾರಿಯಾಗಲಿಲ್ಲ... ಈಗ .... ದೇಶಪಾಂಡೆ?

''ತಿವಾರಿಯ ಕೊಲೆಗೆ ಕಾರಣವೇನೇ ಇರಲಿ, ನಮ್ಮೆಲ್ಲ ಕೆಲಸಗಾರರ ಮೇಲೆ ದೇಶಪಾಂಡೆಯ ಕಣ್ಣಿರುವುದು ನಿಜವಾದರೆ... ರಘು'' ಎಂದ ಸತೀಶ... ''ದೇಶಪಾಂಡೆ ಯಾವ ಸ್ತರದಲ್ಲಿ ಕೆಲಸ ಮಾಡುತ್ತಾನೆಂದು

ನನಗೆ ತಿಳಿದಿಲ್ಲವೆಂದಲ್ಲ.... ಕೊಲೆಗೆ ಕಾರಣ ವೇನೆ ಇರಲಿ, ಅವನಿಲ್ಲವೆಂದು ಕೈಕಟ್ಟಿ ಕುಳಿತುಕೊಳ್ಳುವಂತಿಲ್ಲ. ಈಗಿರುವುದು 'ಇಂಟಕ್' ಸಂಪರ್ಕದ ಯೂನಿಯನ್. ಅದನ್ನು ಬಲಪಡಿಸುವ ಎಲ್ಲ ಪ್ರಯತ್ನಗಳಿಗೆ, ಯಾರನ್ನು ಕೊಳ್ಳಬೇಕಾದರೂ ಹಣದ ಯೋಚನೆ ಮಾಡುವುದು ಬೇಡ.... ಇವತ್ತಿನ ಮಟ್ಟಿಗೆ ತಿವಾರಿಯ ನೆನಪು... ನಾಳೆಯಿಂದ full production, at any cost.'' ರಘು ಹೊರಟು ಹೋದ ಮೇಲೆ ಎರಡು ನಿಮಿಷ ಸುಮ್ಮನೆ ಕುಳಿತ ಸತೀಶ, ಇಂಟರ್‌ಕಾಮ್ ಮೂಲಕ ಸದ್ದು ಮಾಡಿದ. 'ಗ್ರೇಸ್' ಶೀಘ್ರಲಿಪಿಯ ಪುಸ್ತಕ ಪೆನ್ಸಿಲ್ ಹಿಡಿದುಕೊಂಡೇ ಬಳ್ಳಿಯಂತೆ ಬಳುಕುತ್ತ ಒಳಬಂದಳು. ''ಆ ಟ್ರೇಡ್ ಯೂನಿಯನ್ ಫೆಲೊ... ರಾಜೀವ ಅವನ ವಿಳಾಸ ಇದೆಯಲ್ಲ?''

''ಯಸ್ ಸರ್,''

''ಬರೆದುಕೊ.''

''ಕೆಲವು ದಿನಗಳ ಹಿಂದಿನ ಭೆಟ್ಟಿಯ ನೆನಪು ಮಾಡಿಕೊಂಡು ಈ ಪತ್ರ ಬರೆಯುತ್ತಿದ್ದೇನೆ. ಮುಂದಿನ ತಿಂಗಳ ಮೊದಲ ಭಾನುವಾರ ಬಿಡುವು ಮಾಡಿಕೊಂಡು ಎರಡು ತಾಸು ನಮ್ಮ ಜೊತೆಗೆ ಕಳೆಯಲು ಸಾಧ್ಯವೇ? ತಮ್ಮ ಅವಕಾಶ - ಅನುಕೂಲ ತಿಳಿಸಿದ್ದರೆ, ವಾಹನ ವ್ಯವಸ್ಥೆ ಮಾಡುತ್ತೇನೆ. ಉತ್ತರ ಬರೆಯಿರಿ. That's all.''

ಅಪಾಂಗ ಕಲ್ಯಾಣ ಕೇಂದ್ರವೊಂದರ ಉದ್ಘಾಟನೆಯ ಕೆಲಸ ಮುಂದಿನ ತಿಂಗಳ ಮೊದಲ ಭಾನುವಾರ ಆಗಬೇಕಾಗಿದೆಯೆಂದು ನೆನಪು ಹುಟ್ಟಿಸಿದ್ದು ಯಾಮಿನಿಯೆ.

''ನೀನೂ ಬಾ ನನ್ನ ಜತೆಗೆ, ಯಾಮಿ... ಈ ಶರ್ಮಾನ ಅಪಾಂಗ ಕಲ್ಯಾಣ ಕೇಂದ್ರ ಹೇಗಿದೆಯೆಂದು ನೋಡು...''

''ನಾನು... ನನಗೇನು ಕೆಲಸ ಅಲ್ಲಿ!''

ಮನೆಯಲ್ಲಿದ್ದಂಥದೇ ಕೆಲಸ ಎಂದು ಹೇಳಬೇಕೆಂದು ತೋರಿತ್ತಾದರೂ ಹಾಗೆ ಮಾತಾಡಲಿಲ್ಲ.

ಒಮ್ಮೆ ಅನಿರೀಕ್ಷಿತವಾಗಿ ಯಾಮಿನಿಗೆ ತಿಳಿಸದೆ ಪೋರ್ತುಗೀಸ್ ಚರ್ಚ್‌ನ ಮನೆಯ ಮಹಡಿಯೇರಿ ಬಾಗಿಲು ತಟ್ಟಿದಾಗ ಬಾಗಿಲು ತೆರೆದದ್ದು ಯಾಮಿನಿಯೆ. ಅತ್ತು, ಅತ್ತು, ಊದಿಕೊಂಡಂತಿದ್ದ ಯಾಮಿನೀ. ''ಯಾಕೆ? ಏನಾಯಿತು?''

''ಬನ್ನಿ,'' ಎಂದ ಯಾಮಿನಿ ಅಡಿಗೆ ಮನೆ





ಯೊಳಗೆ ಮರೆಯಾಗಿದ್ದಳು. ಮರಳಿ ಬರುವಾಗ ಕೈಯಲ್ಲಿ.... "ಓಹ್ ಚಹಾ ಬಂತೇ ಬಂತು ಕಾಮ್ರೇಡ್‌ಭಾಯಿ... ಯಾಮಿನಿಯ ಕೈಯ ಚಹಾದ ರುಚಿ ನನ್ನಂಥವರಿಗೇ ಗೊತ್ತು. ತಗೊಳ್ಳಿ...." ಎಂದ ಶ್ರೀಕಾಂತ. ಯಾಮಿನಿಯ ಮುಖದಲ್ಲಿ ಈಗ ಅಳುವಿನ ಛಾಯೆ ಕೂಡ ಕಾಣುವಂತಿರಲಿಲ್ಲ.... ಹಣೆಯಲ್ಲಿ ಎದ್ದು ಕಾಣುತ್ತಿದ್ದದ್ದು ಇಪ್ಪತ್ತೈದು ಪೈಸೆಯಷ್ಟು ಅಗಲದ ಕುಂಕುಮ. ನಗುಮುಖ.

'ಅಶೋಚ್ಯಾನನ್ವಶೋಚಸ್ತ್ವಂ'.....

ಯಾಕೆ! ಗೋಡೆಯ ಮೇಲೊಂದು ಹಳೆಯ ಕ್ಯಾಲೆಂಡರ್‌ನಲ್ಲಿ ಕೃಷ್ಣ-ರಾಧೆಯರ ಚಿತ್ರ. ಜಯದೇವ ನೆನಪಾಗುತ್ತಾನೆ.

"ಪಾಂಡು ಸುತಾರ್ ಸತ್ತು ಹೋದ.... ಇಲ್ಲೇ ಶಿವಾಜಿಪಾರ್ಕಿನಲ್ಲಿ ಅವನನ್ನು ಸುಟ್ಟು ಮರಳುವಾಗ ನಿಮ್ಮನ್ನು ನೋಡಿ ಹೋಗೋಣವೆಂದು ಬಂದೆ..."

"ಯಾರಿದು ಪಾಂಡು ಸುತಾರ್? ಏಕೆ ಸತ್ತ?" ಕೇಳಿದ್ದು ಶ್ರೀಕಾಂತ.

ಅವನು ಸತ್ತದು ಯಾಕೆ ಯಾರಿಗೆ ಗೊತ್ತು? ಸುತಾರ್ ಆಶುಕವಿ, ಒಳ್ಳೆಯ ಲಾವಣಿ ಹಾಡುತ್ತಿದ್ದ. ಮುಷ್ಕರ ನಡೆದಲ್ಲೆಲ್ಲ ಗೇಟಿನ ಬದಿಯಲ್ಲಿ ಸಂಪು ಹೂಡಿ ಕಾಯುತ್ತಿದ್ದ ಕಾರ್ಮಿಕ ವರ್ಗಕ್ಕೆ, 'ಜತೆಯಾಗಿ ಆಡೋಣ, ಜತೆಯಾಗಿ ಹಾಡೋಣ, ಜತೆಯಾಗಿ ಹೋರಾಟ ನಡೆಸೋಣ.... ಶತಮಾನ, ಶತಮಾನ ಮಲಗಿದ್ದು ಸಾಲದೇ ಅತಿನಿದ್ದೆ ತೊರೆದೆದ್ದು ನಡೆಯೋಣ, ಮನುಕುಲಕ್ಕೆ ಹೊಸ ಹಾದಿ ಹುಡುಕೋಣ, ಹೊಸ ಬಾಳಿನುದಯಕ್ಕೆ ಕಾಯೋಣ,' ಎಂದು ಹಾಡುತ್ತಿದ್ದಂತೆಯೇ ಸುತಾರ್ ಭಜನೆಗೆ ತೊಡಗುತ್ತಿದ್ದ, 'ರಘುಪತಿ ರಾಘವ ರಾಜಾರಾಮ್, ಪಹಲೇ ಬೋನಸ್ ಫೀಚೇ ಕಾಮ್', ಎನ್ನುತ್ತಿದ್ದ. ನೆರೆದಿದ್ದ ಜನ ಸಮೂಹ ರಘುಪತಿ ರಾಘವ ರಾಜಾರಾಮ್ ಎನ್ನುತ್ತಿದ್ದಂತೆಯೇ 'ಆದೀ ಬೀಜ ಏಕಲೇ, ಬೀಜ ಅಂಕುರಲೇ ರೂಪ ವಾಢಲೇ' ಎಂದು ಮರಾಠಿ ಅಭಂಗ ಆರಂಭಿಸುತ್ತಿದ್ದ. ಆತನ ಉತ್ಸಾಹ ಕೊಡುವ ಪ್ರಚೋದನೆಯಲ್ಲಿ, ಸಾಂಕ್ರಾಮಿಕವೆನಿಸುವ ಸಮಭಾವ, ಐಕ್ಯ ಶಕ್ತಿಯ ಬಂದೂಕಿನ ನಳಿಗೆಯಲ್ಲಿ ಪ್ರವೇಶಿಸುವ ಶಕ್ತಿಯ, ಸಂಕೇತವೆಂದು ಭಾಸವಾಗುತ್ತಿರುವಾಗಲೆ ಸುತಾರ್ ಸತ್ತುಹೋದ.

ಸಾಯುವುದಕ್ಕೆ ಮೂರು ದಿನಗಳ ಹಿಂದೆ ಮಧ್ಯರಾತ್ರಿಗೆ ಭೋಯಿವಾಡದ ಮನೆಗೆ ಬಂದಿದ್ದ ಸುತಾರ್ ಕಾಲು ಹಿಡಿದು ಬಿಕ್ಕಿ ಬಿಕ್ಕಿ ಅತ್ತಿದ್ದ. "ಮಲಾ ಭೀತಿ ವಾಟತೇ.... (ನನಗೆ ಹೆದರಿಕೆಯಾಗುತ್ತದೆ.) ನಾನು ಇಲ್ಲಿಗೆ ಬಂದದ್ದು ತಿಳಿದರೂ ನನ್ನ ಜೀವ ಹೋಗಬಹುದು ರಾಜೀವಭಾಯಿ. ದೇಶಪಾಂಡೆ ನನ್ನನ್ನು ಬಿಡುವುದಿಲ್ಲ. ಒಳಗೊಳಗೇ ಯೂನಿಯನ್ ಬದಲಿಸುವ ದೊಡ್ಡ ಫಿತೂರಿ ನಡೀತಾ ಇದೆ ರಾಜೀವ್ ಭಾಯಿ... ನಿಮಗೇ ತಿಳಿಯದ ಹಾಗೆ ಎಲ್ಲಾ ನಡೀತಾ ಇದೆ. ಆ ರಂಡೇ ಮಗ ಶಿಂಗ್ರೆ, ಹೆಣ್ಣಿನ ಖಯಾಲಿಗೆ ದುಡ್ಡಿನ ಆಶೆಗೆ ಬಲಿಬಿದ್ದು ದೇಶಪಾಂಡೆಗೆ ಮಾರಿಕೊಂಡಿದ್ದಾನೆ ರಾಜೀವ್ ಭಾಯಿ."

"ಸುತಾರ್, ನಿನಗೆ ತಲೆ ಸರಿಯಿಲ್ಲ. ನೀನು ಮನೆಗೆ ಹೊರಡು. ನಾನೂ ಬರುತ್ತೇನೆ."

"ಬೇಡ ರಾಜೀವ್‌ಭಾಯಿ, ಇಲ್ಲಿಗೆ ಬಂದದ್ದು ತಿಳಿಯದ ಹಾಗೆ ನಾನೇ ಹೋಗುತ್ತೇನೆ."

"ಸರಿ, ನಿನ್ನಿಷ್ಟ." ಎಂದಿದ್ದ ರಾಜೀವ, ಸುತಾರ್ ಸತ್ತ ಏಕೆ?

ಚಹಾ ಕುಡಿದು, "ಬರುತ್ತೇನೆ ನಮಸ್ತೇ" ಎಂದು ಆತ ಹೇಳಿದಾಗ, ಆಕೆ ಬಾಗಿಲಿಗೆ ಬಂದು ನಕ್ಕು ಬೀಳ್ಕೊಡುವಾಗ,

ಈಗ ಯಾಮಿನಿಯ ನಗು ಅರ್ಥವಾಗುತ್ತದೆ. ಗೋಡೆಯ ಮೇಲಿದ್ದ ರಾಧಾ-ಕೃಷ್ಣರ ಚಿತ್ರ ಬಣ್ಣ ಪಡೆದುಕೊಳ್ಳುತ್ತದೆ. ಜಯದೇವ

ಗುಣಗುಣಿಸುವುದು ಕೇಳಿಸುತ್ತದೆ.

ನಾಮ ಸಮೇತಂ ಕೃತ ಸಂಕೇತಂ
ವಾದ ಯತೇ ಮೃದು ವೇಣುಂ
ಬಹುಮನು ತೇ ತನು ತೇ ತನು ಸಂಗತ
ಪವನ ಚರಿತಮಪಿ ರೇಣುಂ

ಅಪಾಂಗ ಕಲ್ಯಾಣ ಕೇಂದ್ರದ ಉದ್ಘಾಟ,ನೆಯ ದಿನ ರಾಜೀವ ಯಾಮಿನಿಯರು ಶರ್ಮಾ ಕಳುಹಿಸಲಿದ್ದ ವಾಹನದ ದಾರಿ ಕಾಯುತ್ತಿದ್ದಂತೆ ಅಂದವಾದ ಮರ್ಸಿಡಿಸ್ ಕಾರು ಬೀದಿಯ ಬಳಿ ಬಂದು ನಿಂತಿತು. ಸತೀಶನ ಕಾರ್ಯದರ್ಶಿ 'ಗ್ರೇಸ್' ಬಂದಿದ್ದಳು ಕರೆಯಲು.

(ಮುಂದಿನ ಸಂಚಿಕೆ ನೋಡಿ)

## 'ಇದೂ ಶಾಶ್ವತವಲ್ಲ'

ಸೊಲೊಮನ್ ದೊರೆ ಒಮ್ಮೆ ಖಿನ್ನತೆಗೊಂದು ಪರಿಹಾರ ಹುಡುಕಲು ಯತ್ನಿಸಿದ. ತನ್ನ ಆಸ್ಥಾನದ ಪಂಡಿತರನ್ನೆಲ್ಲ ಒಂದೆಡೆ ಸೇರಿಸಿ "ಪರಿಹಾರ ಹುಡುಕಿಕೊಡಿ" ಎಂದ. ಬಹು ಹೊತ್ತಿನ ವರೆಗೆ ಯೋಚಿಸಿದ ಅವರೆಲ್ಲ ಕೊನೆಗೆ, "ದೊರೆಯೆ, ಒಂದು ಉಂಗುರವನ್ನು ಮಾಡಿಸಿಕೊಂಡು, 'ಇದೂ ಶಾಶ್ವತವಲ್ಲ' ಎಂದು ಬರೆಯಿಸಿ ಧರಿಸಿಕೋ" ಎಂದು ಸಲಹೆಯಿತ್ತರು.

ದೊರೆ ಅವರ ಸಲಹೆಯಂತೆಯೇ ಮಾಡಿದ. ಸದಾಕಾಲವೂ ಆ ಉಂಗುರ ಅವನ ಕೈಬೆರಳಲ್ಲಿ ಶೋಭಿಸುತ್ತಿತ್ತು. ಖಿನ್ನಮನಸ್ಕನಾದಾಗೊಮ್ಮೆ ಉಂಗುರದ ಮೇಲಿನ ಬರಹವನ್ನು ನೋಡುತ್ತಿದ್ದ. ಈ ಖಿನ್ನತೆಯೂ ಶಾಶ್ವತವಲ್ಲ ಎನ್ನುವುದು ಕೂಡಲೇ ಅವನ ಗಮನಕ್ಕೆ ಬಂದು ಮನಸ್ಸಿನ ದುಗುಡವೆಲ್ಲ ಮಾಯವಾಗುತ್ತಿತ್ತು. ●

(ಡೋವ್ ನಾಯ್ ಅವರ 'Folktales of Israel'ನಿಂದ)

ಜಗತ್ತಿನ ಶ್ರೀಮಂತ ಶ್ರೇಷ್ಠನೆಂದು ಹೆಸರಾದ ಬ್ರೂನೈ ಸುಲ್ತಾನನ ನಾರ್ಥ್ ಲಂಡನ್ ಹೌಸಿನಿಂದ ನಲವತ್ತು ಲಕ್ಷ ಪೌಂಡುಗಳ ಮೌಲ್ಯದ ನಗದು, ಚಿನ್ನ ಮತ್ತು ವಜ್ರವೈಢೂರ್ಯಗಳನ್ನು ಕದ್ದ ಕೆಲವರು ಈಗ ಜಗತ್ತಿನ ಚೋರಶ್ರೇಷ್ಠರೆನಿಸಿಕೊಂಡಿದ್ದಾರೆ.

ಮೊನ್ನೆ ಮೊನ್ನೆ ಜುಲೈ ಒಂಬತ್ತರ ರಾತ್ರಿ ಲಂಡನ್ನಿನ ಈ ಭದ್ರಕೋಟೆಯನ್ನು ಹೊಕ್ಕ ಈ ಕಳ್ಳರು ಅಲ್ಲಿರುವ ಕ್ಲೋಸ್ ಸರ್ಕಿಟ್ ಟೆಲಿವಿಜನ್ ಕ್ಯಾಮರಾ ಕಣ್ಣುಗಳನ್ನೂ, ಇನ್‌ಫ್ರಾ-ರೆಡ್ ಅಪಾಯ ಸೂಚಕವನ್ನೂ ನಿಷ್ಕ್ರಿಯಗೊಳಿಸಿ ಈ ಕಾರ್ಯವನ್ನು ಸಾಧಿಸಿದ್ದಾರಂತೆ. ●

*Printed and Published by V.G.VAIDYA on behalf of Loka Shikshana Trust at "Samyukta Karnataka Press", Koppikar Road, Hubli-580020. Phone:64303 - No.2 Residency Road, Bangalore - 560025. Phone: 213265 Managing Editor: K.SHAMA RAO, Rep: Bombay - V. Satyamurthy, Phone: 5510592, Madras: S.K.Murthi. Phone: 414870, New Delhi: V.K.Chopra, Phone: 7224785*

*Registered with the Registrar of Newspapers for India under No.35/3957.*

